॥ ಸಿರಿಗನ್ನಡಂಗೆಲ್ಗೆ ॥

ಶ್ರೀವಿದ್ಯಾರಣ್ಯ ಗ್ರಂಥಮಾಲೆಯ ೨ನೆಯ ಹೂವು.

# ಪುನರ್ಜನ್ಮ

ಅಥವಾ

# ಆತ್ಮಶುದ್ಧಿ.



ಸಂಪಾದಕರು,

ಶ್ರೀ. ನಗರ ವೆಂಕಣ್ಣಾಚಾರ್ಯರು,

ಶ್ರೀ. ನಾರಾಯಣಶರ್ಮರು.

೧ನೆಯ ಸರತಿ, ೧೦೦೦ ಪ್ರತಿಗಳು.



ಶ್ರೀಮಹಾವೀರ ಮುದ್ರಣಾಲಯ, ಬೆಳಗಾವಿ.

೧೯೩೬.



ಬೆಲೆ ೨ ರೂಪಾಯಿ

# ಮುನ್ನುಡಿ.

ಹೆಣ್ಣಿನ ಬಾಳುವೆ ಎಂಬುದೇ ಕರುಣಕಾವ್ಯ; ಅದರೊಳಗೆ ಕಷ್ಟಕ್ಕೆ ಗುರಿಯಾದ ಹೆಣ್ಣಿನ ಬಾಳೆಂಬುದು ಇನ್ನಷ್ಟು ಮನಕರಗಿಸುವ ಕಾವ್ಯ. ರಸಿಯದ ದಿವ್ಯ ಬರಹಗಾರರಾದ ಟಾಲ್‌ಸ್ಟಾಯರು ತಮ್ಮ ಒಳಗಣ್ಣಿನಿಂದ, ಜನ-ಸಾಮಾನ್ಯರ ಒಳಗಣ್ಣು ತೆರೆಯಲೆಳಿಸಲು ಬರೆದ ಮಹಾ ಕಾವ್ಯಕತೆ ಯಿದು. ಯುರೋಪದ ಎಲ್ಲ ಭಾಷೆಗಳಲ್ಲಿದು ೩೫ ವರ್ಷಗಳಾಚೆಯೇ ಪರಿ ವರ್ತಿಸಲ್ಪಟ್ಟಿದೆ. ಇಂಗ್ಲಂಡದವರು ಇದಕ್ಕೆ 'ನೀತಿಗೆಡಿಸುವ ಪುಸ್ತಕ' ವೆಂದು ಹುಚ್ಚರಂತೆ ಮುದ್ರೆಯೊತ್ತಿದರು; ಆದರೆ, ಇಂಗ್ಲಂಡದವರೆನ್ನುಳಿದು ಇನ್ನಾರ ಕಣ್ಣಿಗೂ ಇದರಲ್ಲಿ 'ಅನೀತಿಯು' ಕಾಣಿಸದೆ, ಆತ್ಮಶುದ್ಧಿಯ ಬೀಜಗಳು ಕಂಡವು. ಫ್ರಾನ್ಸದ ಪ್ರಖ್ಯಾತ ಕಾದಂಬರಿಕಾರರಾದ ರೋಮೇನ ರೋಲಾ ಅವರು ಇದರಲ್ಲಿ 'ಟಾಲಸ್ಟಾಯರು ಹೊಣೆಗಣ್ಣುಗಳನ್ನು' ಕಂಡರು; ಪ್ರತಿಯೊಂದು ಪ್ರಾಣಿಗಳ ಹೃದಯದಲ್ಲಿರುವ ದೇವರನ್ನು ಕಾಣುವ ಪರಿಯನ್ನು' ಕಂಡರು; ಮತ್ತು ಇದನ್ನೋದಿದ ಯಾವನಿಗಾದರೂ ಈ ಕಾವ್ಯ ಕತೆಯು ಕೆಲ ಕೆಲ ದಿನವಾದರೂ ಹುಚ್ಚು ಹಿಡಿಸದೆ ಇರದೆಂದು ನನ್ನ ಸ್ವಂತ ಅನುಭವ; ಆದುದರಿಂದ ಪ್ರಸ್ತುತದ ಕತೆಯನ್ನೊಡೆಯುವ ಯಾವ ಮಾತನ್ನೂ ಆಡದೆ, ವಾಚಕರು ಅದನ್ನು ಓದಿಯೇ ಅನುಭವಿಸಲೆಂದು ಅವರ ಕೈಯಲ್ಲಿ ಪುಸ್ತಕಕೊಟ್ಟು ದೂರಾಗುವೆನು.

ಬೆಳಗಾವಿಯ ಶ್ರೀವಿದ್ಯಾರಣ್ಯ ಗ್ರಂಥಮಾಲೆಯ ಒಡೆಯರಾದ ಶ್ರೀ. ನಗರ ವೆಂಕಟರಾಯರು ಇದನ್ನು ಬರೆಯಲು ಉತ್ತೇಜನ ಕೊಟ್ಟುದಕ್ಕೆ ಅವರಿಗೆ ಋಣಿಯಾಗಿರುವೆ.

ಧಾರವಾಡ.

ಬರಹಗಾರ,
**ನಾರಾಯಣಶರ್ಮಾ.**

# ಬಿನ್ನಹ.

ನಮ್ಮ ಗ್ರಂಥಪ್ರಕಾಶಕ ಸಮಿತಿಯು ಹುಟ್ಟಿ ಸುಮಾರು ಎರಡು ವರ್ಷ ಮುಗಿಯಿತು. ಗ್ರಂಥಮಾಲೆಯು ಉದಯವಾಗಿ ಆದರೂ ಒಂದೂವರೆ ವರ್ಷವಾಯಿತು. ಆದರೆ ಮಾಲೆಯ ಶಾಕುಂತಲ ನಾಟಕವೆಂಬ ಮೊದಲಿನ ಹೂವು ಅರಳಿ ಇಷ್ಟು ದೀರ್ಘಕಾಲದ ವರೆಗೆ ದಾರಿಕಾಯ ಹಚ್ಚಿದಕ್ಕೆ ನಮ್ಮ ವಾಚಕವೃಂದದ ಚರಣಸನ್ನಿಧಿಯಲ್ಲಿ ಕ್ಷಮಾಪಣೆಯನ್ನು ಯಾಚಿಸದೆ ಗತ್ಯಂತರವಿಲ್ಲ. ನಾವು ಮೊದಲು ಹೇಳಿದಂತೆ ಕಳೆದ ಮಾಹಾನವಮಿಯ ಉತ್ಸವಕ್ಕೆ ಎಂಟು ನೂರು ಪುಟಗಳನ್ನು ಕೊಟ್ಟೇ ತೀರಬೇಕಾಗಿತ್ತು; ಮುದ್ರಣದ ಅನಾನುಕೂಲತೆ ಹಾಗೂ ಬರಹಗಾರರ ಮತ್ತೂ ಸಂಚಾಲಕರ ಮನೆಯ ಜನರು ಜಡ್ಡಿನಿಂದ ಬಹಳ ದಿನಗಳ ವರೆಗೆ ತೊಂದರೆಯೇ ಆಗ ಬಂದಿತು. ಅಲ್ಲದೆ ಈ ಗ್ರಂಥದ ಹೆಸರು "ಪುನರ್ಜನ್ಮ" ವೆಂದಾದದ್ದಕ್ಕೋ ಏನೋ ಗ್ರಂಥದ ಜನ್ಮವಾಗುವ ಮೊದಲೇ ನಮ್ಮ ಪುನರ್ಜನ್ಮವೇ ಆದಂತಾಯಿತು. ಇದಾದರೂ ನಮ್ಮ ಆಶ್ರಯ, ಪೋಷಕ, ಸಹಾಯಕ, ಚಂದಾದಾರರ ಆಶೀರ್ವಾದದ ಬಲದಿಂದಲೇ ಎಂಬುವದಕ್ಕೆ ಸಂಶಯವಿಲ್ಲ. ಎಷ್ಟೋ ಮಹನೀಯರು ಉದಾರ ಹಸ್ತದಿಂದ ಸಹಾಯ ಮಾಡದಿದ್ದರೆ ಈ ಕಾರ್ಯವಾದರೂ ಸಾಧ್ಯವೇ ಇರಲಿಲ್ಲ. ಅವರೆಲ್ಲರ ಉಪಕಾರವನ್ನು ಎಂದೂ ಮರೆಯುವದಿಲ್ಲ. ಆದ್ದರಿಂದ ಇನ್ನು ಮುಂದೆಯಾದರೂ ಮೊದಲಿನಂತೆ ಪ್ರೇಮದಿಂದ ವಿಲಂಬದ ಕಡೆಗೆ ದೃಷ್ಟಿಯನ್ನಿಡದೆ ಹರಿಸಬೇಕಾಗಿ ಬೇಡಿಕೊಳ್ಳುತ್ತೇವೆ. ತಮ್ಮೆಲ್ಲ ಕನ್ನಡಿಗರ ಹರಿಕೆಯೊಂದಿದ್ದರೆ ತೀರಿತು. ಹೆಚ್ಚಿಗೇನು ಬೇಕು? ಕನ್ನಡ ಕಡುಗಲಿಯಾದ ಹನುಮಂತನು ಮಾಡಿದ ಕಾರ್ಯವೇನು ಅಸಾಧಾರಣವೇ! ಆ ಕಾಲದಲ್ಲಿ ಅಳಲಿಯು ತೋರಿಸಿದ ಭಕ್ತಿಯಂತೆ ನಾವು ತಮ್ಮೆಲ್ಲರ ಚರಣದಲ್ಲಿ ನೀಡುತ್ತಿರುವ ಮಳಲ ಸೇವೆಯನ್ನೇ ಹೆಚ್ಚೆಂದು ಭಾವಿಸಿಕೊಳ್ಳುವಿರೆಂದು ಪೂರ್ಣ ನಂಬುಗೆ.

ಎಷ್ಟೋ ನಮ್ಮ ವ್ಯವಸಹಾಯಬಂಧುಗಳಾದ ಸಂಪಾದಕ ವರ್ಗವು ವಿನಿಮಯ ವಿಮರ್ಶೆಯನ್ನು ಮಾಡಿದರು. ಆದರೆ ಬಹಳ ಜನರು ಏನೂ ಮಾಡಲಿಲ್ಲ. ವಿಷಾದದ ಸಂಗತಿ. ಎಷ್ಟೋ ಬಂಧುಗಳು ವಿಶೇಷ ಸಂಚಿಕೆಗಳನ್ನು ಕಳಿಸಿರುವರು. ಅವರೆಲ್ಲರಿಗೆ ಸಮಿತಿಯು ಉಪಕೃತವಾಗಿದೆ. ಆದರೆ ಕೆಲವರ ಹೆಸರುಗಳನ್ನು ನಿರ್ದೇಶ ಮಾಡುವದರಿಂದ ಉಳಿದವರಿಗೆ ವ್ಯಸನ

ವಾಗಬಾರದೆಂದು ಯಾರ ಹೆಸರನ್ನೂ ಹೇಳಿಲ್ಲ. ಇನ್ನು ಮುಂದೆಯಾದರೂ ತಮಗೆ ಹೊಳೆದಂತೆ ವಿಮರ್ಶ ಮಾಡಿ ವಿನಿಮಯಕ್ಕೆ ಕಳಿಸಬೇಕಾಗಿ ನಮ್ಮ ವ್ಯವಸಾಯಬಂಧುಗಳಲ್ಲಿ ಪ್ರಾರ್ಥನೆ.

**ಬೆಳಗಾವಿ.**
ಜ್ಯೈ. ಶುದ್ಧ ೧.
ತಾ-೭-೬೨೧

ಕನ್ನಡಿಗರಡಿಯಾಳು
**ನಗರ ವೆಂಕಣ್ಣಾಚಾರ್ಯ,**
ಸಂಚಾಲಕ.

---

ಶ್ರೀವಿದ್ಯಾರಣ್ಯ ಗ್ರಂಥಮಾಲೆಯ

# ೩ನೆಯ ಹೂವು.

# “ತಾಯಿ”

(ರಸಭರಿತವಾದ ರಶಿಯನ್ ಕಾದಂಬರಿಯು.)

ಅನುವಾದಕರು--ಶ್ರೀ. ನಾರಾಯಣಶರ್ಮರು.

**ವಾರ್ಷಿಕ ಚಂದಾ ಮೂರು ರೂಪಾಯಿಗಳು ಮಾತ್ರ.**

ಮುಂಬಯಿ ಪ್ರಾಂತದ ವಿದ್ಯಾಖಾತೆಯವರಿಂದ ಶಾಲೆ ಕಾಲೇಜುಗಳ
ವಾಚನಾಲಯಗಳಿಗೆ ಮಂಜೂರಾಗಿದೆ.

---

# ಚುರಮುರಿಕೃತ ಶಾಂಕುಂತಲ ನಾಟಕವು.

ಈ ನಾಟಕದ ಮೂರು ಆವೃತ್ತಿಗಳು ಈ ಹಿಂದೆ ಪ್ರಕಟಿಸಲ್ಪಟ್ಟಿದ್ದವು. ಆದರೆ 'ನಾನೂ ಕವಿಯೇ ನಾನೂ ಕವಿಯೇ' ಎಂದು ಮುಂದೆ ಮುಂದೆ ಮುಗಿಬೀಳುತ್ತಿರುವ ಆಧುನಿಕ ಕವಿಗಳ ಅನನುಕರಣೀಯ ಸಾಹಿತ್ಯಾಂದೋಲನದ ವರ್ಚಸ್ಸಿನ ಮೂಲಕವಾಗಿಯಾಗಲಿ ಪರಭಾಷಿಯರ ದಬ್ಬಾಳಿಕೆಯ ಮೂಲಕವಾಗಿಯಾಗಲಿ ಆದರ್ಶಭೂತವಾಗಿರುವ ಈ 'ಚುರಮುರಿಕೃತ ಶಾಕುಂತಲೆಯು' ಮೊನ್ನೆ ಮೊನ್ನಿನವರೆಗೆ ಮೂಲಿಗೆ ಬಿದ್ದಿದ್ದು ಅಸಂತೋಷದ ಸಂಗತಿಯಾಗಿತ್ತು. ಆದ್ದರಿಂದ ಸದರಿ ಗ್ರಂಥದ ಪ್ರಕಟನೆಯ ಸರತಿಯು ಇದೀಗ ಮತ್ತೊಮ್ಮೆ ಬಂದಿದ್ದು ಹುಟ್ಟುಗನ್ನಡಿಗರಿಗೆ ಒಂದು ಅಭಿಮಾನದ ಸಂಗತಿಯೇ ಸರಿ. ಸಾಹಿತ್ಯದೃಷ್ಟಿಯಿಂದಾಗಲಿ ಕನ್ನಡತನದ ದೃಷ್ಟಿಯಿಂದಾಗಲಿ ಉತ್ತರ ಕರ್ನಾಟಕದಲ್ಲಿ ವಿಶೇಷ ವಿಷಮ ಪರಿಸ್ಥಿತಿಗೀಡಾಗಿದ್ದ ಬೆಳಗಾವಿಯಲ್ಲಿಯೇ ಈ 'ಶಾಕುಂತಲೆಯು' ರೂಪದ ಕನ್ನಡ ಕಸ್ತೂರಿಯು ಸುಗಮವು ಉದ್ಭವಿಸಿದ ಸಂಗತಿಯು ವಿಶೇಷ ಅವಗಾಹನೆಗೆ ಪಾತ್ರವಾಗಿದೆ. ಕಾಳಿದಾಸ ಕವಿಯು ಸಂಸ್ಕೃತದಲ್ಲಿ ಬರೆದ 'ಶಾಕುಂತಲೆಯ' ಪರಿವರ್ತನೆಯೇ ಇದಾಗಿದ್ದರೂ ಸರಸವೂ ರಸಭರಿತವೂ ಆದ ಇದರ ಕಾವ್ಯಪದ್ಧತಿಯು ಹೃದಯಂಗಮವಾಗಿದೆ. 'ಕರ್ನಾಟಕವು ಕವಿತೆಯ ಗಂಡುಮೆಟ್ಟು' ಎಂಬ ಬಿರದಿನ ನಿದರ್ಶನ ಮಾಡಿಕೊಡಬೇಕಾದರೆ ಸ್ವ. ಚುರಮುರೀ ಶೇಷಗಿರಿರಾಯರ 'ಶಾಕುಂತಲೆಯು' ಕಡೆಗೇ ಮೊದಲು ಬೊಟ್ಟುಮಾಡಿ ತೋರಿಸಬೇಕಾಗುವದೆಂಬದರಲ್ಲಿ ಏನೂ ವಿಲಂಬವಿಲ್ಲ. ಮೈಸೂರಿನ ಒಬ್ಬಿಬ್ಬ ಸಾಹಿತಿಗಳು ಕಾಳಿದಾಸನ ಶಾಕುಂತಲೆಯನ್ನು ಕನ್ನಡಕ್ಕೆ ತರ್ಜುಮೆ ಮಾಡಿದ್ದರೂ ಅವರ ಯಾವ ತರ್ಜುಮೆಯೂ ಸ್ವ. ಶೇಷಗಿರಿರಾಯರ ತರ್ಜುಮೆಯನ್ನು ಸರಿಗಟ್ಟದೆಂದು ಹೇಳಬಹುದು. ಬೆಳಗಾಂವಿಯ ವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿಯ ಸಲಹೆಯನ್ನು ಮನ್ನಿಸಿ ಸಂಪಾದಕ ಮಂಡಳಿಯವರು ಈ ಚಿಕ್ಕ ಪುಸ್ತಕವನ್ನು ಸ್ವ. ಶೇಷಗಿರಿರಾಯರ ತರ್ಜುಮೆಯ ತಳಗಟ್ಟಿನ ಮೇಲೆಯೇ ರಚಿಸಿದ್ದಾರೆ. ಪುಸ್ತಕದ ಭಾಷೆಯು ಸುಲಲಿತವಾಗಿಯೂ ಅದರಲ್ಲಿಯ ಮಾತುಗಳು ಸಂಣ ಸಂಣವೂ ಓದಿದೊಡನೆಯೇ ತಿಳಿಯುವಂತಹವೂ ಇವೆ. ಎಂದೆಂದೂ ತೃಪ್ತಿ

ಹೊಂದದಿರುವ ನಾಟ್ಯಕಲಾಪ್ರೇಮಿಗಳ ತೃಷೆಯು ಈ ' ಶಾಕುಂತಲಾ ' ನಾಟಕವನ್ನು ಓದುವದರಿಂದ ಶಾಂತವಾಗುವದೆಂಬಲ್ಲಿ ಸಂದೇಹವೇ ಇಲ್ಲ. ಬೆಲೆ ೧ ರೂಪಾಯಿ ಪುಸ್ತಕದೊರೆಯುವ ಸ್ಥಳ—ವಿದ್ಯಾರಣ್ಯ ಗ್ರಂಥ ಪ್ರಕಾಶನ ಸಮಿತಿ ಬೆಳಗಾಂವಿ.

**ಕರ್ನಾಟಕ ಟಾಯಿಮ್ಸ್ ಧಾರವಾಡ.**

## ಶ್ರೀ. ಚುರಮುರೀಕೃತ ' ಶಾಕುಂತಲ '.

೧೯೨೧ರಲ್ಲಿ ಗೋಳೀಬಾರಿನ ಖಟ್ಲೆಯ ಕಾಲಕ್ಕೆ ನಾವು ೨೮ ಜನರು ಧಾರವಾಡ ಸೆರಮನೆಯಲ್ಲಿರುವಾಗ ಚುರಮುರೀಕೃತ ಶಾಕುಂತಲ ನಾಟಕದ ಪ್ರಥಮ ಪರಿಚಯವು ನನಗೆ ಆಯಿತು. ತಮ್ಮ ವಿಶಾಲ ಸ್ಮರಣಸಾಗರದೊಳಗಿಂದ ಮುತ್ತು ರತ್ನಗಳಂತೆ ಒಂದೊಂದು ತೆಗೆದು ಶ್ರೀ. ಮುದವೀಡು ಕೃಷ್ಣರಾಯರು ಅದರಲ್ಲಿಯ ಪದ್ಯಗಳನ್ನು ನಮಗೆ ಅಂದು ತೋರಿಸಿದರು. ಅವುಗಳಲ್ಲಿಯ ರಸರುಚಿಗಳನ್ನು ಸವಿಸವಿಯಾಗಿ ಹೇಳಿ ಮೂಲ ಶಾಕುಂತಲದಲ್ಲಿಯ ಹಲವು ಪದ್ಯಗಳಿಗಿಂತ ಚುರಮುರಿಯವರು ಬರೆದ ಪದ್ಯಗಳು ಹೇಗೆ ಮಿಗಿಲಾಗಿವೆ ಎಂಬುದನ್ನು ಒಡೆದು ಹೇಳಿದರು. ಈ ಪರಿ ಹಾಡಿ ಹರಸಿದ ನಾಟಕದ ಪ್ರತಿಗಳು ಮಾತ್ರ ಈಗ ವಿರಳ ಎಂದು ಅವರು ಹೇಳಿದರು. ಆಗ ನಮ್ಮ ವಿಷಾದಕ್ಕೆ ಮೇರೆ ಇಲ್ಲದಂತಾಯಿತು.

ಕನ್ನಡಿಗರ ಸುದೈವದಿಂದ ಬೆಳಗಾಂವಿಯ ವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿಯವರು ಆ ನಾಟಕದ ಪುನರ್ಮುದ್ರಣವನ್ನು ಈಗ ೪೦ ವರ್ಷಗಳ ನಂತರವಾದರೂ ಕೈಕೊಂಡು ಅದನ್ನು ಪೂರೈಸಿರುವರು. ಈ ಆವೃತ್ತಿಗೆ ರಸಿಕ ಸಿರೋಮಣಿಗಳಾದ ಶ್ರೀ. ಮುದವೀಡು ಕೃಷ್ಣರಾಯರ ಪ್ರಸ್ತಾವನೆಯಿದೆ. ಅದಾದರೂ ಪ್ರತ್ಯೇಕವಾಗಿ ಓದಿ ಆನಂದಬಡುವಷ್ಟು ಚನ್ನಾಗಿದೆ.

ಮುದ್ದಾದ ಅಚ್ಚಿದ್ದು ಇನ್ನೂರಕ್ಕಿಂತ ಮೇಲ್ಪಟ್ಟ ಪುಟಗಳನ್ನು ಸಮಿತಿಯವರು ಒಂದೇ ರೂಪಾಯಿಗೆ ಕೊಡಮಾಡಿದ್ದು ಅಭಿನಂದನೀಯವು. ಕನ್ನಡದ ಸೊಬಗು ಸೌಂದರ್ಯಗಳನ್ನು ಸವಿಯಬೇಕು, ಕನ್ನಡ ಶೈಲಿಯ ಮಾದರಿಯನ್ನು ನೋಡಬೇಕು ಎಂದು ಹೊರಟರೆ ನಾವು ಈ ಪುಸ್ತಕವನ್ನು ಬಿಡಲಾಗದು.

**ಬೆಳಗಾಂವಿ.**
ತಾ. ೨೨-೧೧-೩೫.

**ರಂಗನಾಥ ದಿವಾಕರ.**

## ಪ್ರಾಕ್ತನವಿಮರ್ಶವಿಚಕ್ಷಣ ಮಹಾ ಮಹೋಪಾಧ್ಯಾಯ
## ರಾವಬಹಾದ್ದೂರ ಆರ್. ನರಸಿಂಹಾಚಾರ್ಯರ್. M. A. M. R. A. S.

ಈ ಪುಸ್ತಕವನ್ನು ನಾನು ಹಿಂದೆಯೇ ನೋಡಿದ್ದೆನು. ಈ ನಾಲ್ಕನೆ ಸರತಿಯ ಪ್ರತಿ ಅಂದವಾಗಿಮುದ್ರಿತವಾಗಿರುವುದಲ್ಲದೆ ಶ್ರೀಮಾನ್ ಮುದವೀಡು ಕೃಷ್ಣ ರಾಯರ ವೈದುಷ್ಯಪೂರ್ಣವೂ ವಿಚಾರಪರಿಪ್ಲುತವೂ ಆದ ಪ್ರಸ್ತಾವನೆಯೊಡನೆ ಕೂಡಿದೆ. ಚುರಮುರಿ ಶೇಷಗಿರಿರಾಯರು ಮೊತ್ತಮೊದಲು ಈ ನಾಟಕವನ್ನು ಭಾಷಾಂತರಿಸಿದರು ಇದು ಪ್ರಥಮವಾಗಿ ಈ ಕೆಲಸವನ್ನು ಮಾಡಿ ಕನ್ನಡಿಗರಿಗೆ ಮೂಲಗ್ರಂಥದ ತಿಳಿವನ್ನು ಉಂಟುಮಾಡಿಕೊಟ್ಟದಕ್ಕೋಸ್ಕರ ಕನ್ನಡಿಗರೆಲ್ಲಾ ಅವರಿಗೆ ಕೃತಜ್ಞರಾಗಿರಬೇಕು. ಛಂದಸ್ಸು, ವ್ಯಾಕರಣ ಇವುಗಳ ವಿಷಯವಾಗಿ ಅಲ್ಲಲ್ಲಿ ಕೆಲವು ಕೊರತೆಗಳು ಕಂಡು ಬಂದರೂ ಒಟ್ಟಿನಲ್ಲಿ ಗ್ರಂಥವು ಮೂಲಕ್ಕೆ ಅನುಸಾರವಾಗಿ ಹೃದಯ ರಂಜಕವಾಗಿದೆ.

ತಾವುಗಳು ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶನ ಸಮಿತಿಯನ್ನು ಏರ್ಪ ಡಿಸಿ ಕನ್ನಡಿಗರಿಗೆ ಬಹಳ ಉಪಕಾರ ಮಾಡಿದ್ದೀರಿ. ಇದಕ್ಕೋಸ್ಕರ ನಾನು ಬಹಳವಾಗಿ ಸಂತೋಷಿಸುತ್ತೇನೆ. ಇಂತಿ ವಿಜ್ಞಾಪನೆ.

**ಮಲ್ಲೇಶ್ವರಮ್.** **ರಾ. ನರಸಿಂಹಚಾರ್ಯ.**

ವಿದ್ಯಾರಣ್ಯ ಗ್ರಂಥಮಾಲೆಯವರು ಪ್ರಸಿದ್ಧಿಸಿದ ಪ. ವಾ. ತುರಮುರಿ ಶೇಷಗಿರಿರಾಯರು ಬರೆದ ಕನ್ನಡ ಶಾಕುಂತಲ ನಾಟಕವು ಕನ್ನಡ ಸಾಹಿತಿ ಗಳ ಮನಸ್ಸನ್ನು ಆಕರ್ಷಿಸುವಂತಹದಿರುತ್ತದೆ. ಇದು ಕಾಲಿದಾಸಕೃತ ಅಭಿಜ್ಞಾನ ಶಾಕುಂತಲನಾಟಕದ ಅನುವಾದವಾಗಿದ್ದರೂ ಕೆಲವೆಡೆಯಲ್ಲಿ ಮೂಲವನ್ನು ಕೂಡ ಮಿಕ್ಕುತ್ತದೆಂದು ಹೇಳಿದರೆ ಅತಿಶಯೋಕ್ತಿಯಾಗಲಿ ಕ್ಕಿಲ್ಲ. ರಸಭಾವಗಳನ್ನು ಚಿತ್ರಿಸುವದರಲ್ಲಿ ಪ. ವಾ. ಶೇಷಗಿರಿರಾಯರು ತೋರಿ ಸಿದ ಕೌಶಲ್ಯವನ್ನು ನೋಡಿದರೆ ಅವರು ಒಳ್ಳೇ ಪ್ರತಿಭಾವಂತರೆಂದು ಹೇಳಲು ಪ್ರತ್ಯವಾಯವಿಲ್ಲ. ಶಬ್ದಸೌಷ್ಠವವೂ ಪದಲಾಲಿತ್ಯವೂ ಹೊಗಳು ವಂತಹವಿರುತ್ತವೆ. ಶೈಲಿಯೂ ಸಹಜವೂ ಮನೋಹರವೂ ಪ್ರಾಸಾದಿಕವೂ ಆಗಿರುತ್ತದೆಂದು ನಿಃಸಂದೇಹವಾಗಿ ಹೇಳಬಹುದು. ಈ ನಾಟಕದ ನಾಲ್ಕನೇ ಆವೃತ್ತಿಯನ್ನು ಪ್ರಕಟಿಸಿ ವಿದಾರಣ್ಯ ಗ್ರಂಥಮಾಲೆಯವರು ಕನ್ನಡ ಸಾಹಿ

ತ್ಯಕ್ಕೆ ಒಂದುಬಗೆಯ ಉಪಕಾರ ಮಾಡಿರುವರು. ಪ್ರತಿಯೊಬ್ಬ ಕನ್ನಡಿಗರು ಈ ಪುಸ್ತಕವನ್ನು ಅವಶ್ಯವಾಗಿ ಓದಬೇಕು.

**ಮೋಹರೇ ಹಣಮಂತರಾಯರು.**

ಸಂಪಾದಕ—ಸಂಯುಕ್ತ ಕರ್ನಾಟಕ ಬೆಳಗಾವಿ.

ಮಹಾಕವೀ ಕಾಲಿದಾಸನು ರಚಿಸಿದ "ಅಭಿಜ್ಞಾನ ಶಾಕುಂತಲ" ದ ಇಷ್ಟು ಸೊಗಸಾದ ಎರಡನೇ ಈ ಭಾಷಾಂತರವೇ ಇಲ್ಲೆಂದರೆ ಅತಿಶಯೋಕ್ತಿ ಯಾಗಲಾರದು.

**ದ. ವೆ. ಬೆಳವೀ.**

ಅಡ್ವೋಕೇಟ್ ಬೆಳಗಾವಿ.

---

# ಪರಿವಿಡಿ.

೧ ಸೆರೆಮನೆಯಲ್ಲಿ.
೨ ಮಾಸ್ಲೋವಳು ಯಾರು?
೩ ಮನಸಿನ ಹೊಯ್ದಾಟ.
೪ ಕೋರ್ಟಿನಲ್ಲಿ.
೫ ಕಟೂಷಳಿಗೆ ಗಡಿಪಾರಿನ ಶಿಕ್ಷೆ.
೬ ಅಂತರಂಗದ ಕದವು ತೆರೆಯಿತು.
೭ ಬಿಡುಗಡೆಯ ಪ್ರಯತ್ನ.
೮ ಕಟೂಷಳು ಡಿಮಿಟ್ರಿಯನ್ನು ಮರೆತದ್ದೇಕೆ?
೯ ಕಟೂಷಳ ಭೆಟ್ಟಿ.
೧೦ ಅಪೀಲಿನ ವಿಚಾರ.
೧೧ ಮಾತೃಭೂಮಿಯ ಭೆಟ್ಟಿ.
೧೨ ಕರ್ತವ್ಯಾನಂದದ ಬೆಳಕು.
೧೩ ಸೆರೆಯಾಳುಗಳ ಪಯಣ.
೧೪ ಸೆರೆಯಾಳುಗಳ ಪರಿಚಯ.
೧೫ ಕಟೂಷಳ ಹಂಗು ಹರಿಯಿತು.
೧೬ ದಾರಿಯಲ್ಲಿಯ ಅನುಭವ.

# ಪುನರ್ಜನ್ಮ

## ೧ ಸೆರೆಮನೆಯಲ್ಲಿ.




ನುಷ್ಯರಿಂದ ಕಿಕ್ಕಿರಿದಿರುವ ಭೂಮಿಯನ್ನು- ದಾರಿಯ ದೆಸೆಯಿಂದ ಕಲ್ಲು ಮಣ್ಣುಗಳಿಂದ ಗಟ್ಟಣೆ ಮಾಡಿ, ಅಲ್ಲಲ್ಲಿ ಬೆಳದಿರುವ ಕಸಕಡ್ಡಿಗಳನ್ನು ಕೆದರಿ ಕಿತ್ತಿ, ಬೆಳೆದು ನಿಂತಿರುವ ಮರಗಳನ್ನು ಕಡಿದು ಹಾಕಿ, ಅಲ್ಲಿ ವಾಸಿಸುವ ಪಶುಪಕ್ಷಿಗಳನ್ನು ಓಡಿಸಿ, ಸ್ವಚ್ಛವಾಗಿರುವ ಹವೆಯನ್ನು ಕಲ್ಲೆಣ್ಣೆ—ಕಲ್ಲಿದ್ದಲಿಗಳ ಹೊಗೆಯಿಂದ ತುಂಬಿ, ಅದರ ಅಂದಗೆಡಿಸಬೇಕೆಂದು ಲಕ್ಷಗಟ್ಟಲೆ ಜನರು ತಮ್ಮ ಕೈಮೀರಿ ಯತ್ನ ಮಾಡಿದ್ದರೂ, ಇಂಥ ಪಟ್ಟಣದೊಳಗೆ ಕೂಡ ವಸಂತಮಾಸವು ತನ್ನ ಮೀಸಲು ಸಿರಿಯಿಂದ ಮುಖವೆತ್ತಿಕೊಂಡು ಮೆರೆಯುತ್ತಲೇ ಇತ್ತು.

ಏರುವ ಸೂರ್ಯ, ಮೈಗೆ ಚುರುಚುರು ಹತ್ತುವ ಬಿಸಿಲು, ಬೇಕು ಬೇಕೆನಿಸುವ ಸುಳಿಗಾಳಿ, ಕತ್ತರಿ ಕುರ್ಪಿಗಳ ಬಾಯಿಗೆ ಸಿಲುಕದೆ ಬೀದಿಯ ಹಾಸುಗಲ್ಲುಗಳ ಸಂದುಗಳಲ್ಲಿಯೂ, ವಿಶಾಲವಾದ ಬೀದಿಯ ಎರಡೂ ಮಗ್ಗಲಿನಲ್ಲಿಯೂ ಬೆಳೆದಿರುವ ಹಚ್ಚನ್ನ ಹುಲ್ಲು; ಅರಳಿ ನಾನಾಬಗೆಯ ಸುಗಂಧವನ್ನು ಬೀರುವ ಹೂಗಿಡಗಳು; ವಸಂತಮಾಸವು ಬಂತೆಂದು ಆನಂದದಿಂದ ಚಿಲಿಪಿಲಿಗುಟ್ಟುತ್ತ ತಮ್ಮ ತಮ್ಮ ಹೊಸ ಗೂಡುಗಳನ್ನು ಕಟ್ಟುವ ಸಂಭ್ರಮದಲ್ಲಿದ್ದ ಗುಬ್ಬಿ ಕಾಗೆಗಳು, ಸೂರ್ಯನ ಬಿಸಿಲಿನಿಂದ ಬೆಚ್ಚಗಾದ ಗೋಡೆಗಳ ಮೇಲೆ ಅಖಂಡವಾಗಿ ಗುಂಯಿಗುಡುತ್ತಿರುವ ನೊಣಗಳ ಹಿಂಡುಗಳು, ಇವೆಲ್ಲವುಗಳಿಂದ ಆ ದಿನ ಆನಂದ ಸಾಮ್ರಾಜ್ಯವೇ

ನೆಲಿಸಿದಂತಾಗಿತ್ತು. ಗಿಡ-ಮರ, ಪಶು-ಪಕ್ಷಿ, ಹುಳ-ಹುಪ್ಪಡಿ, ಮಕ್ಕಳು-ಮರಿ ಎಲ್ಲರಿಗೂ ಆನಂದ. ಇಂಥ ಸಮಯದಲ್ಲಿ ಕೂಡ ಜನರು-ನಾನಾ ಅಂಬುವ ಸಭ್ಯಗೃಹಸ್ಥರು, ಹೆಂಗಸರು,–ಒಬ್ಬರನ್ನೊಬ್ಬರು ವಂಚಿಸುವ–ಕಾಡುವ ಕೆಲ ಸಗಳನ್ನು ಬಿಟ್ಟಿರಲಿಲ್ಲ. ವಸಂತಮಾಸದ ಈ ಮುಂಜಾವಿನ, ಬ್ರಾಹ್ಮೀ ಸಮಯ ವಾಗಲಿ, ದೇವರು ಎಲ್ಲ ಪ್ರಾಣಿಗಳ ಆನಂದಕ್ಕಾಗಿಯೇ ಕಲ್ಪಿಸಿರುವ ಸೃಷ್ಟಿ ಸೌಂದರ್ಯವಾಗಲಿ, ಆ ಸೌಂದರ್ಯದಿಂದ ಹೃದಯಕ್ಕಾಗುವ ಶಾಂತಿ ಸಮಾಧಾನಗಳಾಗಲಿ, ಜನರಿಗೆ ಪವಿತ್ರ ಮತ್ತು ಆತ್ಮವಿಚಾರಯೋಗ್ಯವೆಂದೆ-ನಿಸಿರಲಿಲ್ಲ; ಅಂತೆಯೇ ಒಬ್ಬರು ಇನ್ನೊಬ್ಬರನ್ನು ಹೇಗೆ ಅಡಿಯಾಳನ್ನಾಗಿ ಮಾಡಬೇಕೆಂಬುವ ದುಷ್ಟವಿಚಾರಗಳಲ್ಲಿಯೇ ಮುಳುಗಿದ್ದರು.

ಆದರೆ, ರಾಜಧಾನಿಯ ಸೆರೆಮನೆ ಕಚೇರಿಯಲ್ಲಿಯ ಸ್ಥಿತಿಯು ಮೇಲಿನಂತಿರಲಿಲ್ಲ; ಅಲ್ಲಿಯ ಮನುಷ್ಯರು ಪ್ರಾಣಿಗಳು ಕೂಡಿಯೇ ಆ ಪವಿತ್ರವಾದ ವಸಂತಮಾಸದ ಸುಖಾನಂದಗಳನ್ನು ಒಂದೇ ಸಮನಾಗಿ ಅನುಭವಿಸುತ್ತಿದ್ದರು. ಹೀಗಿರಲು, ಆ ದಿನವೇ ಕಚೇರಿಗೆ ಒಂದು ನೋಟೀಸು ಬಂತು. ಅದರ ಮೇಲೆ ನಂಬರ ಹಾಕಿದ್ದಿತು. ಕೆಲದಿನಮಟ್ಟಿಗೆ ಸೆರೆಮನೆಯಲ್ಲಿ ಇಟ್ಟಿರುವ ಒಬ್ಬ ಗಂಡಸು, ಇಬ್ಬರು ಹೆಂಗಸರು ಹೀಗೆ ಮೂವರನ್ನು ಎಪ್ರಿಲ ೨೮ನೆಯ ತಾರೀಖಿನ ದಿನ ಬೆಳಿಗ್ಗೆ ೮ ಗಂಟೆಗೆ ಕಚೇರಿಗೆ ತರಬೇಕೆಂದು ಅದರಲ್ಲಿ ಬರೆದಿತ್ತು. ಆದರಂತೆ, ೨೮ನೆಯ ತಾರೀಖಿನ ದಿನ ಬೆಳಗಿನ ಎಂಟು ಗಂಟೆಯ ಸಮಯ, ಸೆರೆಮನೆಯ ಮುಖ್ಯಅಧಿಕಾರಿಯು ಹೆಂಗಸರನ್ನಿಟ್ಟಿರುವಂಥ ಕತ್ತಲೆಯ, ಹೊಲಸು ಗಬ್ಬು ನಾರುವ ಸೆರೆಮನೆಯ ಭಾಗದಲ್ಲಿ ಸೇರಿದನು. ನರೆತಿದ್ದರೂ ಉಂಗುರುಗೆಡದ ಕೂದಲಿನ ಒಬ್ಬ ಹೆಂಗಸು ಭರದಿಂದ ಹೊರಗೆ ಬಂದಳು; ಆಕೆಯ ಮೈಯಲ್ಲಿ ಜರತಾರಿಯ ಗೋಟುಕಟ್ಟಿದ ತೋಳಿನ ಜಾಕೀಟು, ಟೊಂಕಕ್ಕೆ ನೀಲೀಅಂಚಿನ ಪಟ್ಟಿ ಇಷ್ಟಿದ್ದರೂ ಆಕೆಯ ಮುಖವೆಲ್ಲ ಕಂದಿ ಕುಂದಿ ಆಕೆ ಕಣ್ಣುಗಳಲ್ಲಿಯೇ ಜೀವ ಹಿಡಿದಂತಿತ್ತು.

ಸೆರೆಮನೆಯ ಅಧಿಕಾರಿಯು ತನ್ನ ಕೈಯಲ್ಲಿದ್ದ ಬೀಗದ ಗೊಂಚಲನ್ನು ಕಳಬಳ ಕಳಬಳ ಸಪ್ಪಳ ಮಾಡುತ ಒಂದು ಕೋಣೆಯ ಬಾಗಿಲ ತೆರೆದನು;

ಭಸ್ಸೆಂದು ಹೊಲಸು ಗಾಳಿಯು ಮೂಗಿಗೆ ಅಡರಿತು; ಅದನ್ನು ಹಾಗೇ ನುಂಗಿಕೊಂಡು ಅವನು ಸ್ವಲ್ಪ ಒಳಗೆ ಇಣಿಕಿದಂತೆ ಮಾಡಿ, 'ಮಾಸ್ಲೊವಾ, ಇಂದು ಕೋರ್ಟಿಗೆ ಹೋಗುವ ದಿವಸ' ಎಂದು ಕೂಗಿಹೇಳಿ ಮತ್ತೆ ಬಾಗಿಲಕ್ಕೆ ಬೀಗ ಜಡಿದನು.

ಹೊಲಗದ್ದೆಗಳಿಂದ ಬೀಸುವ ತಂಪು ಮತ್ತು ಹುರಿಗೊಳಿಸುವ ಮೀಸಲು ಗಾಳಿಯು ಸೆರೆಮನೆಯ ಮುಂದಿರುವ ಬೈಲೊಳಗೆ ಕೂಡ ತೂರುತ್ತಿದ್ದರೂ, ಅದಕ್ಕೆ ಸೆರೆಮನೆಯ ಒಳಭಾಗದೊಳಗೆ ಸೇರಲು ಅನುವು ಇರದ್ದರಿಂದ ಅಲ್ಲಿಯ ಹವೆಯು ಕೆಟ್ಟಿತ್ತು; ರೋಗದ ಜೀವಜಂತುಗಳು ಆ ಕೊಳೆತ ಹವೆಯಲ್ಲಿ ಸ್ವಚ್ಛಂದವಾಗಿ ಹಾರಾಡಿ ಅಲ್ಲಿ ಹಾಯ್ದಾಡುವವರನ್ನು ಗಾಸಿಗೊಳಿಸುತ್ತಿದ್ದವು; ಅಲ್ಲಿಯ ದುರ್ವಾಸನೆಯ ನೆನಪು ಮಾಡಿಕೊಂಡರೆ ಮೈಮೇಲೆ ಮುಳ್ಳು ಏಳಬೇಕು. ಇಂಥ ಸ್ಥಳವು ಹೊಸಬರ ಕಣ್ಣಿಗೆ ಬಿದ್ದರೆ, ಎರಡೆರಡು ದಿನ ಅನ್ನ ಕೂಡ ಹೋಗಲಿಕ್ಕಿಲ್ಲ; ಆದರೂ ರೂಡಿಯಿಂದ ವಿಷವು ಕೂಡ ಮೈಗೆ ಒಗ್ಗುವಂತೆ, ಹೆಂಗಸರ ಭಾಗದ ಕಾವಲುಗಾರಳಿಗೆ ಇದು ಅಷ್ಟೇನೂ ಅಸಹ್ಯವೆನಿಸಿರಲಿಲ್ಲ. ಆ ಪ್ರಾಣಿಯು ಅದೇ ತಾನೆ ಹೊರಗಿನಿಂದ ದಣಿದು ಬಂದಿದ್ದರಿಂದ, ನೆಲಕ್ಕೆ ಮೈ ಹಚ್ಚುವದೇ ತಡ ನಿದ್ದೆಹತ್ತಿತು.

ಕೋಣೆಯಲ್ಲಿ ಮಾತ್ರ ಏನೋ ಕೊಂಚ ಗಲಿಬಿಲಿ. ಒಳಗಿನ ಹೆಂಗಸರು ಯಾರೋ ಸ್ವಲ್ಪ ಗಟ್ಟಿಸಿ ಮಾತಾಡುತಿರುವಂತೆ, ಮತ್ತು ಬರಿಗಾಲಿನಿಂದ ಪಟಪಟ ಸಪ್ಪಳ ಮಾಡುತ ಅಡ್ಡಾಡುತಿರುವಂತೆ ಕೇಳಿಸಿತು. 'ಹೂಂ, ಏಳಿರಿನ್ನು, ತ್ವರೆಮಾಡಿರಿ' ಎಂದು ಸೆರೆಮನೆಯ ಅಧಿಕಾರಿಯು ತನ್ನ ಅಧಿಕಾರದ ಗಡಸು ಧ್ವನಿಯಿಂದ ನುಡಿದನು. ಒಂದೆರಡು ನಿಮಿಷಗಳಲ್ಲಿಯೇ ಚಿಕ್ಕ ವಯಸಿನ ಒಬ್ಬ ಹೆಣ್ಣುಮಗಳು ತುಂಬಿದ ಎದೆ ಸೆಟೆಸಿಕೊಂಡು ಲಗುಬಗೆಯಿಂದ ಹೊರಬಿದ್ದು ಸೀದಾ ಅಧಿಕಾರಿಯ ಕಡೆ ನಡೆದಳು. ಆಕೆಯು ಮೈಯಲ್ಲೊಂದು ಬಿಳೀ ಜಾಕೆಟ್ಟು, ಅದರ ಮೇಲೆ ಚಿಕ್ಕದೊಂದು ಕೋಟು, ಮೇಲೊಂದು ಬೂದಿಬಣ್ಣದ ಚಾದರ ಹೊದ್ದುಕೊಂಡಿದ್ದಳು; ಕಾಲಲ್ಲಿ ಉಣ್ಣೆಯ

ಕಾಲುಚೀಲುಗಳು ಮತ್ತು ಸೆರೆಮನೆಯ ಬೂಟುಗಳು; ತಲೆಗೆ ಶುಭ್ರವಾದ ಕರವಸ್ತ್ರವನ್ನು ಸುತ್ತಿದ್ದರೂ, ಕೆಲವು ಕೂದಲುಗಳು ನುಸುಳಿ ಆಕೆಯ ಮುಂದಲೆಯ ಮೇಲೆ ಹಾsಗೆ ಕದ್ದು ನಲಿದಾಡುತ್ತಿದ್ದವು. ಆಕೆಯ ಮುಖವು ಮಾತ್ರ ಹಲವು ದಿವಸ ಹೊರಗೆ ಬರದೆ ಸೆರೆಯಲ್ಲಿದ್ದವರಂತೆ ಬಿಳುಪಾಗಿತ್ತು. ಕಣ್ಣುಗಳು ಸ್ವಲ್ಪ ಒಳನೆಟ್ಟಿದ್ದು, ನೀಲಮಣಿಯಂತೆ ತಳತಳಿಸುತ್ತಿದ್ದವು. ಆಕೆ ಅಧಿಕಾರಿಯು ಕಡೆಗೆ ಹೋಗಿ, ಬಳಿಯಲ್ಲಿದ್ದ ಒಂದು ಮೂಲೆಯಲ್ಲಿ ಅವನ ಬಾಯಿಂದ ಹೊರಬೀಳುವ ಆಜ್ಞೆಯ ದಾರಿ ಕಾಯುತ್ತ ನಿಂತಳು.

ಸೆರೆಮನೆಯ ಅಧಿಕಾರಿಯು ಇನ್ನು ಬಾಗಿಲಿಗೆ ಕೀಲಿ ಹಾಕುವವನು. ಇಷ್ಟರಲ್ಲಿ ಒಬ್ಬ ಹೆಂಗಸು ಹೊರಗೆ ಹಣಿಕಿನೋಡಿ ಮಾಸ್ಲೋವಳ ಸಂಗಡ ಮಾತಾಡಹತ್ತಿದಳು. ಆಕೆಯ ಮುಖವೆಲ್ಲ ನಿರಿಗೆಗಟ್ಟಿದ್ದರೂ, ಅದರಲ್ಲಿಯ ನೀರು ಕಡಿಮೆಯಾಗಿರಲಿಲ್ಲ. ಅಧಿಕಾರಿಯು ಆಕೆಯನ್ನು ಒಳಗೆ ನುಗಿಸುತ್ತ ಬಾಗಿಲ ಇಕ್ಕಿಕೊಂಡ. ಒಡನೆ ಒಳಗಿಂದ ಮುಸುಮುಸುನಗೆ ಕೇಳಿಸಿತು. ಮಾಸ್ಲೋವಳೂ ಬಾಯೊಳಗೇ ನಕ್ಕು ಕೋಣೆಯು ಬಾಗಿಲಿಗಿರುವ ಚಿಕ್ಕ ಕಿಂಡಿ ಯೊಳಗೆ ಕಣ್ಣಿಟ್ಟು ಒಳಗೆ ನೋಡಹತ್ತಿದಳು; ಆ ಮುಪ್ಪಿನ ಹೆಂಗಸು ಕೂಡ ಒಳಗಿಂದಲೇ ನೋಡಿ ಗೊಗ್ಗರದನಿಯಿಂದ " ಇದುನೋಡು! ಮರೆತೀ— ನಿನಗವರು ಒಂದರಹಿಂದೊಂದು ಪ್ರಶ್ನ ಮಾಡಿದರೂ ತಿರುಗಾಮುರಗಾ ಮೊದಲು ಹೇಳಿದ್ದನ್ನೇಹೇಳು. ಒಂದೇ ಮಾತನ್ನು ಗಟ್ಟಿಯಾಗಿ ಹಿಡಿ. ಇಲ್ಲದ್ದನ್ನು ಹರಟ ಬೇಡ. " ಎಂದು ಎಚ್ಚರಿಕೆಕೊಟ್ಟಳು.

ಅದಕ್ಕೆ ಮಾಸ್ಲೋವಳು "ಒಳ್ಳೇದು ಏನೇದರೂ, ಅದು ಈಗಿನಷ್ಟೇನೂ ಕೆಡಕಾಗದು. ಒಂದಿಲ್ಲೊಂದು ಬಗೆಯಿಂದ ತೀರ್ಪು ಆಗುವದು ಖಂಡಿತ. " ಎಂದು ಉತ್ತರ ಕೊಟ್ಟಳು.

" ಅದೇನೂ ಸುಳ್ಳಲ್ಲ. ಯಾವುದೊಂದು ಆಗಿಯೇತಿರುವದು " ಎಂದು ತನ್ನ ದೊಡ್ಡಸ್ತಿಕೆಯ ನಗೆಯಿಂದ ಅಧಿಕಾರಿಯು ಮಾತಾಡಿ, " ಒಳ್ಳೇದು. ಇನ್ನು ನಡೆಯಿರಿ " ಅಂದನು.

ಮಾಸ್ಲೋವಳು ಕಿಂಡಿಯೊಳಗಿಂದ ನೋಡುತ್ತಿರುವ ಮುಖವನ್ನು ತಿರುಗಿಸಿ, ಅಧಿಕಾರಿಯ ಹಿಂದಿಂದೆ ನಡೆದಳು. ಆ ಇಕ್ಕಟ್ಟಾದ ಕತ್ತಲೆಯ ದಾರಿಯಿಂದ ಹಾಯ್ದು ಬರುವಾಗ ಅಲ್ಲಿಯ ಹೊಲಸು ನಾತವು ಅವರ ಮೂಗಿಗೆ ಬಂದು ಅಡರದೆ ಇರಲಿಲ್ಲ.

ಗಂಡಸು ಸೆರೆಯಾಳುಗಳಿದ್ದ ಭಾಗದಲ್ಲಿ ಕಲಕಲ ದನಿಯ ಗದ್ದಲ; ಹಲವರು ತಮ್ಮ ತಮ್ಮ ಕೋಣೆಗಳಿರುವ ಕಿಂಡಿಗಳಿಗೆ ಕಣ್ಣಿಟ್ಟು ಹೊರಗೆ ನಡೆಯುವದನ್ನೆಲ್ಲ ಬಹು ಉತ್ಸುಕರಾಗಿ ನೋಡುತ್ತಿದ್ದರು. ಮಾಸ್ಲೋವಳೂ ಸೆರೆಮನೆಯ ಅಧಿಕಾರಿಯೂ ಆಫೀಸಿಗೆ ಬಂದರು. ಅಲ್ಲಿಬ್ಬರು ಸೀಪಾಯರು ಸಜ್ಜಾಗಿ ನಿಂತಿದ್ದರು. ಒಂದೆಡೆ ಮಗ್ಗಲಲ್ಲಿ ಒಬ್ಬ ಕಾರಕೂನನು ಕುರ್ಚಿಯ ಮೇಲೆ ಏನೋ ಬರೆಯುತ್ತ ಕುಳಿತಿದ್ದ. ಅವನು ಒಬ್ಬ ಸೀಪಾಯಿಯನ್ನು ಕೈಸನ್ನೆಮಾಡಿ ಹತ್ತಿರಕ್ಕೆ ಕರೆದು, ತಂಬಾಕದ ವಾಸನೆ ಇರುವದೊಂದು ಕಾಗದವನ್ನು ಅವನ ಕೈಯಲ್ಲಿಟ್ಟು, ಅಲ್ಲಿಯೇ ನಿಂತಿರುವ ಹೆಂಗಸನ್ನು ಕಣ್ ಸನ್ನೆಯಿಂದ ತೋರಿಸಿ, ‘ ಅವರನ್ನು ಕರೆದೊಯ್ಯು ’ ಎಂದನು.

ಕೈಯಲ್ಲಿ ಕಾಗದ ತೆಗೆದುಕೊಂಡ ಸೀಪಾಯಿಯು ಒಂದು ಹಳ್ಳಿಯವ. ಮೈಬಣ್ಣ ಕೆಂದ; ಮುಖದ ಮೇಲೆ ದಟ್ಟಾದ ಮೈಲಿಯ ಕಲೆಗಳು. ಮೆಲ್ಲಗೆ ಅವನು ಆ ಕಾಗದವನ್ನು ತನ್ನ ಕೋಟಿನ ತೋಳಿನಲ್ಲಿಟ್ಟ. ತನ್ನ ಜೊತೆ ಇದ್ದ ಮತ್ತೊಬ್ಬ ಸೀಪಾಯಿಯ ಕಡೆ ನೋಡಿ ಕಣ್ಣು ಚಿಮುಟಿ ಕರೆದನು. ಇಬ್ಬರು ಮುಂದು ಮುಂದೆ, ಅವರ ಹಿಂದಿಂದೆ ನಮ್ಮ ಹೆಂಗಸು ಸೆರೆಯಾಳು. ಹೊರಟರು; ಅವರು ಸೆರೆಮನೆಯ ಹೆಬ್ಬಾಗಿಲ ದಾಟಿ ಅಡ್ಡತಿಡ್ಡ ಕಲ್ಲುಹಾಸಿರುವ ಬೀದಿಯಿಂದ ಮುನ್ನಡೆದರು.

ಅದು ರಾಯ ಬೀದಿ. ಬಂಡಿಯವರು, ವರ್ತಕರು, ಕೂಲಿಕಾರರು, ಸರಕಾರೀ ಕಾರಕೂನರು, ಹೀಗೆ ಬಗೆಬಗೆಯ ಹೋರೆಯ ಜನರು ಅತ್ತಿಂದಿತ್ತ ಇತ್ತಿಂದತ್ತ ನಡೆದಾಡುವರು. ನಿಂತು ನಿಂತು ಅಚ್ಚರಿಗಣ್ಣಿನಿಂದ ಆ ಹೆಂಗಸು ಸೆರೆಯಾಳನ್ನು ಮಿಕಿ ಮಿಕಿ ನೋಡಿ “ ಇದು ನೋಡಪ್ಪ, ಕೆಡಕು ನಡತೆಯ

ಫಲ " ಎಂದು ಅವರು ತಮ್ಮ ತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದರು. ಚಿಕ್ಕ ಚಿಕ್ಕ ಮಕ್ಕಳು ಮೈಮರೆತು ನಿಂತು ಬೆದರ ಕಂಗಳಿಂದ ' ಇಂಥವರಿಂದ ಹೆಚ್ಚು ಕೆಟ್ಟ ಕೆಲಸಗಳಾಗಬಾರದೆಂದು ಪೋಲೀಸರು ದಂಡಿಸುತ್ತಿರುವರೇನೋ, ' ಎಂದು ಸಮಾಧಾನ ಮಾಡಿಕೊಳ್ಳುತ್ತಿದ್ದರು. ಹಳ್ಳಿವಾಡದ ಒಬ್ಬ ಒಕ್ಕಲಿಗನು ತಾನು ತಂದಿದ್ದ ಕಲ್ಲಿದ್ದಲಿಯನ್ನು ಅದೇ ತಾನೇ ಮಾರಿ, ಕೈಗೆ ಬಂದ ದುಡ್ಡನ್ನು ಜೇಬಿನಲ್ಲಿಟ್ಟು ಚಹದ ಅಂಗಡಿ ಸೇರಿದನು; ಅಲ್ಲಿ ಫಲಾಹಾರ ಮುಗಿಸಿಕೊಂಡು ಬರುವಾಗ ಆ ಹೆಂಗಸನ್ನು ಕಂಡು ಆಕೆಯ ಕೈಯಲ್ಲೊಂದು ರೂಪಾಯಿ ಇಟ್ಟ. ಅದರಿಂದ ಆಕೆ ನಾಚಿಕೊಂಡು ತನ್ನ ತುಟಿಯಲ್ಲಿ ತಾನೇ ಏನೇನೋ ಒಟಗುಟ್ಟಿದಳು. ಆಗ ಎಲ್ಲರೂ ಆಕೆಯನ್ನೇ ಕಣ್ಣಿಟ್ಟು ನೋಡಹತ್ತಿದರು. ಆಕೆಯಾದರೂ ಅತ್ತಿತ್ತ ಉಲುಕದೆ, ತನ್ನನ್ನೇ ನಿಟ್ಟಿಸಿ ನೋಡುವವರನ್ನು ಓರೆಗಣ್ಣಿನಿಂದ ಒಮ್ಮೆ ನೋಡಿದಳು. ತನ್ನ ಕೃತಿಯಿಂದ ಎಲ್ಲರ ಮನಸನ್ನು ತಾನು ಎಳೆದುಕೊಂಡದಕ್ಕಾಗಿ ಆಕೆಗೇನೋ ಒಂದು ಬಗೆಯ ತೃಪ್ತಿ. ಇದೇ ಕಾಲಕ್ಕೆ ತಂಗಾಳಿಯು ಸುಳಿದುದರಿಂದ ಆಕೆಯ ಖಿನ್ನಮನಸಿಗೆ ಕೊಂಚ ಹಾಯವೆನಿಸಿತು; ಆದರೆ, ಇದಕ್ಕಿಂತ ಮುಂಚೆ ಎಂದೂ ಆಕೆ ಇಷ್ಟು ನಡೆದವಳಲ್ಲ; ಮೇಲಾಗಿ ಸೆರೆಮನೆಯಲ್ಲಿ ಮಾಡಿದ ಸೊಟ್ಟ ಬೂಟುಗಳನ್ನು ಮೆಟ್ಟಿಕೊಂಡು ಅಂತಹ ಕಾಡು ಬೀದಿಯಲ್ಲಿ ನಡೆಯುವದೊಂದು ಹೆಚ್ಚಿನ ತಾಪವೇ ಆಗಿತ್ತು. ದಾರಿಯಲ್ಲಿ ಒಬ್ಬ ಕಾಳುಮಾರುವವನ ಅಂಗಡಿ; ಅದರ ಮುಂದೆಹಾಯ್ದು ಹೋಗುವಾಗ ನಮ್ಮ ಹೆಂಗಸು ಸೆರೆಯಾಳು ಅಲ್ಲಿಯೊಂದು ಪಾರಿವಾಳದ ಗುಂಪು ಕಂಡಳು. ಒಂದು ಪಾರಿವಾಳವಂತು ಮೇಯುತ್ತ ಮೇಯುತ ಬಂದು ಆಕೆಯ ಕಾಲಿಗೆ ತಗಲಿ, ಗಾಬರಿಗೊಂಡು ಅದು ಫಡಫಡ ಎಂದು ತನ್ನ ರೆಕ್ಕೆಗಳಿಂದ ಗಾಳಿಬೀಸಿ ಅತ್ತ ಹಾರಿತು. ಆಕೆ ನಸುನಕ್ಕಳು; ಆದರೆ ಮರುಕ್ಷಣವೇ ಆಕೆಯ ಮುಖ ಇಳಿಯಿತು. ತನ್ನ ಪೂರ್ವ ಸ್ಥಿತಿಯು ನೆನಪಾಗಿ ಉಸ್ಸೆಂದಳು.

---

# ೨ ಮಾಸ್ಲೋವಳು ಯಾರು ?



ಎಲ್ಲರಂತೆ ಮಾಸ್ಲೋವಳದೊಂದು ಸಾಮಾನ್ಯ ಜೀವನಕಥೆ. ಈಕೆಯು ತಾಯಿಯು ಒಬ್ಬ ಹಳ್ಳಿವಾಡದ ಹೆಂಗಸಿನ ಮಗಳು. ಮದುವೆಯಾಗುವ ಪೂರ್ವದಲ್ಲಿಯೇ ತನ್ನಂತೆ ಕುಮಾರ್ತಿಯರಾಗಿದ್ದ ಇಬ್ಬರು ಜಮೀನದಾರ ಹೆಂಗಸರ ಒಡೆತನದ ಹೊಲದಲ್ಲಿ ಆಕೆ ಒಕ್ಕಲಗಿತ್ತಿಯಾಗಿದ್ದಳು; ಹೀಗಿದ್ದರೂ, ವರ್ಷಕ್ಕೊಂದು ಬಾಣಂತನ ತಪ್ಪಿದ್ದಲ್ಲ; ಆದರೆ ಆ ಮಕ್ಕಳನ್ನು ಸರಿಯಾಗಿ ಜೋಪಾನ ಮಾಡುವದು ಆಕೆಯಿಂದ ನೀಗದ್ದರಿಂದ ಅವು ಹೊತ್ತೊತ್ತಿಗೆ ಆರೈಕೆ ಕಾಣದೆ, ಹುಟ್ಟಿದ ಕೆಲವು ದಿನಗಳಲ್ಲಿಯೇ ನೀಗಿ ಹೋಗುತ್ತಿದ್ದವು. ಹೀಗೆ ಐದಾರು ಮಕ್ಕಳು ಹೋದವು.

ಆರನೆಯ ಕೂಸು ಹುಟ್ಟಿತು. ಅದರ ತಂದೆ ಒಬ್ಬ ಜಿಪ್ಸಿ ಜಾತಿಯವ. ಹಿಂದಿನ ಐದುಕೂಸುಗಳ ಅವಸ್ಥೆಯೇ ಈ ಆರನೆಯದಕ್ಕೂ ಬರಬಹುದಾಗಿತ್ತು; ಆದರೆ, ಅದರ ದೈವ. ಜಮೀನದಾರ ಒಡತಿಯು ಒಂದಿನ ಆಕಸ್ಮಾತ್ತಾಗಿಆಕಳ ಬೆಣ್ಣೆಯನ್ನು ತಪ್ಪದೆ ಕಳಿಸಲು ಹೇಳಲಿಕ್ಕೆ ಹಕ್ಕೆಗೆ ಬಂದಳು. ಮಾಸ್ಲೋವಳ ತಾಯಿ ಬಾಣಂತಿ. ಅಲ್ಲಿಯೇ ದನದ ಕೊಟ್ಟಿಗೆಯಲ್ಲಿ ಮಲಗಿದ್ದಳು. ಆಕೆಯ ಮಗ್ಗುಲಲ್ಲಿ ಮೈ ಕೈ ತುಂಬಿಕೊಂಡ ಭಂಗಾರದಂಥ ಕೂಸು ಆಡುತ್ತಿತ್ತು. ಬಾಣಂತಿಯನ್ನು ಹಕ್ಕೆಯಲ್ಲಿ ಮಲಗಿಸಿಕೊಂಡದ್ದಕ್ಕೆ ಬೇರೆ ಒಕ್ಕಲಗಿತ್ತಿಯರನ್ನು ಜಮೀನದಾರ ಒಡತಿಯು ಮೊದಲು ಬೈದಳು; ಇನ್ನು ಹೊರಡುವವಳು. ಕೂಸು ಆಕೆಯ ಕಣ್ಣಿಗೆ ಬಿತ್ತು. ಎಷ್ಟೆಂದರೂ ಹೆಣ್ಣುಜೀವ. ಹೊಟ್ಟೆಯಲ್ಲಿ ಕಳವಳವಾಯಿತು. ಬಾಣಂತಿಯು ಇಲ್ಲೇ ಇರಲೆಂದು ಹೇಳಿದ್ದಲ್ಲದೆ, ತಾನೇ ಧರ್ಮದ ತಾಯಿಯಾಗಿ ಅಲ್ಲಿಯೇ ಇದ್ದು, ಹಾಲು ಎಣ್ಣೆಯ ವ್ಯವಸ್ಥೆ ಮಾಡಿದಳು. ಇದರಿಂದ ಆ ಕೂಸು ದೊಡ್ಡದಾಯಿತು; ಆದರೆ ಕೂಸಿಗೆ ಮೂರು ವರ್ಷ ತುಂಬುವ ಹೊತ್ತಿಗೆ ತಾಯಿಗೆ ಜಡ್ಡಾಗಿ ಮಡಿದಳು. ಕೂಸು

ಪರದೇಶಿಯಾಯಿತು. ತಾಯಿ ಇಲ್ಲದ ಆ ತಬ್ಬಲಿಯನ್ನು ಜಮೀನದಾರ ಹೆಣ್ಣುಮಕ್ಕಳೇ ಸಾಕಿ ಸಲಹಿದರು.

ನೇರಿಲಹಣ್ಣಿನಂತೆ ಮಿಂಚುವ ಮಾಟಗಣ್ಣಿನ ಆ ಹೆಣ್ಣುಮಗಳು ದೊಡ್ಡವಳಾದಂತೆ ಎಲ್ಲರಿಗೂ ಮುದ್ದಾದಳು; ಆಕೆಯ ಆಟನೋಟಗಳನ್ನು ಕಂಡರೆ ಎಲ್ಲರಿಗೂ ಅಕ್ಕರೆ.

ನಾವು ಮೇಲೆ ಹೇಳಿದ ಇಬ್ಬರು ಜಮೀನದಾರ ಹೆಣ್ಣುಮಕ್ಕಳಲ್ಲಿ ಚಿಕ್ಕವಳಾದ ಸೋಫಿಯಾ ಎಂಬುವಳೇ ಆ ಪರದೇಸಿ ಕೂಸಿನ ಧರ್ಮದ ತಾಯಿ; ಮತ್ತು ಆಕೆಯ ಹೃದಯವಾದರೂ ಹಿರಿಯವಳಿಗಿಂತ ಬಲು ಕೋಮಲ; ಆದುದರಿಂದ ಸೋಫಿಯಳು ತನ್ನ ಸಾಕು ಮಗಳಿಗೆ ಚನ್ನಾಗಿ ಉಣಿಸಿತಿನಿಸಿ, ಉಡಿಸಿ ತೊಡಿಸಿ ಕಕ್ಕುಲತೆ ಪಡುವದಲ್ಲದೆ, ಓದುಬರೆಯುವನ್ನೂ ಕಲಿಸುತಿದ್ದಳು. ಇದು ಅಕ್ಕ ಮೇರಿಗೆ ಸರಿ ಬರುತ್ತಿರಲಿಲ್ಲ. ಒಕ್ಕಲಗಿತ್ತಿಯ ಮಗಳಿಗೆ ಒಕ್ಕಲಗಿತ್ತಿಯ ಕೆಲಸವನ್ನೇ ಕಲಿಸಬೇಕೆಂದು ಆಕೆಯ ಮನಸ್ಸು. ತಂಗಿಯು ಆ ಹುಡುಗಿಯನ್ನು ಪ್ರೀತಿಸುತ್ತಿರುವದು ಮೇರಿಯ ಮನಸಿಗೆ ಬಾರದ್ದರಿಂದ, ಸಿಟ್ಟುಬಂದಾಗ ಆ ಹುಡಿಗೆಯುನ್ನು ಹೊಡೆ-ಬಡಿ ಮಾಡುವಳು; ಹೀಗೆ ಆ ಹುಡಿಗೆಯು ಅರ್ಧ ಸಭ್ಯಸ್ತ್ರೀ, ಅರ್ಧ ಒಕ್ಕಲಗಿತ್ತಿಯಾದಳು. ಅವರು ಆಕೆಗೆ ಕಟೂಷಾ ಎಂದು ಕರೆಯುವರು; ಕಟೂಷಾ, ಮನೆಯಲ್ಲಿ ಕೆಲಸವನ್ನೆಲ್ಲ ಮೈ ಉಳಿಸಿಕೊಳ್ಳದೆ ಮಾಡುವಳು. ಮೇಲಾಗಿ ಬಿಡುವಿದ್ದಾಗ ಓದಬಾರದವರಿಗೆ ಓದಿ ಹೇಳುವಳು.

ಕಟೂಷಾ ಈಗ ಪ್ರಾಯದವಳು. ಸುಖದಿಂದ ಬೆಳೆದವಳು. ಒಬ್ಬಿಬ್ಬರು ಆಕೆಯ ಮದುವೆಯ ವಿಚಾರವಾಗಿ ಪ್ರಸ್ತಾಪಿಸಿ, ಮನ ಒಲಿಸಲಿಕ್ಕೂ ಪ್ರಯತ್ನ ನಡಿಸಿದ್ದರು; ಆದರೆ, ಅವರು ಕೂಲಿಕಾರರು. ಕೂಲಿಕಾರರ ಕೈ ಹಿಡಿಯುವದೆಂದರೆ, ಬಹು ಕಷ್ಟವೆಂದು ಆಕೆ ಸುಮ್ಮನಿದ್ದಳು.

ಹೀಗಿರುತಿರಲು, ಆ ಜಮೀದಾರ ಒಡತಿಯ ಸೋದರಳಿಯನು ಕಾಲೇಜ ರಜೆಯದೆಸೆಯಿಂದ ತನ್ನ ಅತ್ತೆಯವರ ಮನೆಯಲ್ಲಿ ನಾಲ್ಕುದಿನ ಇರಲಿಕ್ಕೆಂದು ಬಂದನು; ಆತ ಗರ್ಭಶ್ರೀಮಂತ; ಮೇಲಾಗಿ ಕಾಲೇಜದ

ವಿದ್ಯಾರ್ಥಿ. ಕೇಳುವದೇನು? ಆತನಿಗೆ ಕಟೂಷಳು ಮನಸೋತಳು; ಆದರೆ ಆಕೆಗೆ ಇದನ್ನೊಪ್ಪಲಿಕ್ಕೆ ತನ್ನತನಗೇ ನಾಚಿಕೆ!

ಎರಡು ವರ್ಷಗಳಾದನಂತರ, ದಂಡಿನಲ್ಲಿ ಸೇರುವ ಮುಂಚೆ ಮತ್ತೊಮ್ಮೆ ಆ ಸೋದರಳಿಯನು ತನ್ನ ಅತ್ತೆಂದಿರ ಭೆಟ್ಟಿಗೆಂದು ಬಂದು ನಿಂತನು. ಈ ಸಂದರ್ಭದಲ್ಲಿ ಹಿಂದಕ್ಕೆ ಚಿಗುರೊಡೆದ ಕಟೂಷಳ ಪ್ರೇಮವು ಈಗ ಮರವಾಗಿತ್ತು. ಅದಕ್ಕೀಗ ಫಲಬಿಡುವ ಪ್ರೇಮದ ಪ್ರಸಂಗ ಒದಗಿತು. ತಾರುಣ್ಯದ ಪ್ರೇಮವಶದಿಂದ ಇಬ್ಬರ ಕಾಲು ಜಾರಿತು. ಆ ಜಮೀನದಾರ ಒಡತಿಯ ಸೋದರಳಿಯನು ಕಟೂಷಳ ಕೈಯಲ್ಲಿ ಪ್ರೇಮದ ಕಾಣಿಕೆ ಎಂದು ನೂರು ರೂಪಾಯಿಗಳದೊಂದು ನೋಟು ಇಟ್ಟು ನಡೆದನು.

ಮೂರುನಾಲ್ಕು ತಿಂಗಳ ಮೇಲೆ, ತಾನು ಬಸಿರಿದ್ದ ಬಗ್ಗೆ ಕಟೂಷಳಿಗೆ ತಿಳಿಯಿತು; ಆದರೆ ಮಾಡುವದೇನು? ಕಟೂಷಳ ಮನಸು ಯಾವುದರಲ್ಲಿಯೂ ರಮಿಸದಾಯಿತು. ಎಲ್ಲದಕ್ಕೂ ಜುಗುಪ್ಸೆ; ಆದುದರಿಂದ ನಾಚಿಕೆಗೀಡಾಗಿ ಇಲ್ಲಿರುವದಕ್ಕಿಂತ ಎಲ್ಲಿಯಾದರೂ ಓಡಿಹೋಗುವದೇ ಲೇಸೆಂದು ಯೋಚಿಸಿದಳು; ಹೀಗೆ ಮನಸು ಇಬ್ಬಗೆಯಾದ್ದರಿಂದ ಮನೆಯ ಕೆಲಸಕ್ಕೆ ಮನಸು ಹತ್ತದಾಯಿತು. ಇಂತಹ ವಿಷಣ್ಣ ಸ್ಥಿತಿಯಲ್ಲಿ ಒಂದೆರಡು ಸಲ ಆಕೆಯು—ಒಂದು ವಿಷವೇಳೆಯಲ್ಲಿ-ತನ್ನನು ಸಾಕಿದವರೊಡನೆ ಸ್ವಲ್ಪ ಬಿರುಸಾಗಿ ನಡೆದುಕೊಂಡಳು ಕೂಡ; ಆದರೆ ಮುಂದೆ ತಾನೇ ಆ ಬಗ್ಗೆ ಪಶ್ಚಾತ್ತಾಪ ಪಟ್ಟಳು, 'ಇನ್ನುಮುಂದೆ ನಾನು ನಿಮ್ಮ ಬಳಿಯಲ್ಲಿರುವದು ಒಳಿತಲ್ಲ; ದಯವಿಟ್ಟು ನನ್ನನ್ನು ಬಿಟ್ಟುಬಿಡಿರಿ! ನನಗೆ ಕಂಡದಾರಿ ಕಂಡುಕೊಳ್ಳುವೆ ಎಂದು ದುಃಖದಿಂದಲೂ ನಾಚಿಕೆಯಿಂದಲೂ ಕೇಳಿದಳು. ಅವರೂ ಆಕೆಯ ನಡತೆಗೆ ಒಪ್ಪದೆ, ಆಗಲಿ ಅಂದರು.

ಕಟೂಷಳಿಗೆ ಈಗ ಹತ್ತೂ ದಿಕ್ಕುಗಳು ಹಾಳು. ಗಂಡನ ಮನೆಯಿಲ್ಲ. ಅಣ್ಣತಮ್ಮ ಅಕ್ಕತಂಗಿಯರ ಮನೆಯಿಲ್ಲ. ತನ್ನದೆಂದು ಹಚ್ಚಿಕೊಂಡ ತವರಮನೆಗೆ ಹೀಗೆ ಎರವಾಗಬೇಕಾಯಿತು. ಪಾಪ! ಚಿಕ್ಕಮಗಳಿಗೆ ಮೈಮೇಲೆ

ಮುಗಿಲು ಹರಿದುಕೊಂಡು ಬಿದ್ದಿತು. ಆಗ ಅಲ್ಲಲ್ಲಿ ಕೇಳಿ ಮಾಡಿ ನೋಡುತಿರಲು, ಯಾರೋ ಒಬ್ಬ ಪೋಲೀಸ ಆಫೀಸರ ಮನೆಯಲ್ಲಿ ಒಕ್ಕಲಗಿತ್ತಿ ಬೇಕಾಗಿರುವ ಸುದ್ದಿ ತಿಳಿಯಿತು. ಮಳೆಯಲ್ಲಿ ನಿಂತವರಿಗೆ ಮರದ ಆಸರ ಸಿಕ್ಕರೂ ಎಷ್ಟೊಂದು ಸಂತೋಷ! ತತ್‌ಕ್ಷಣವೇ ಅಲ್ಲಿ ಹೋಗಿ ಕೇಳಲು ಒಪ್ಪಿದರು. ಹರೆಯದ ಭರವುಳ್ಳ ಮಗಳು. ಹುಟ್ಟಾ ಮಂದಿಯ ಹೊಸ್ತಿಲ ದಾಟಿದವಳಲ್ಲ. ಮನಸು ಕಲ್ಲು ಮಾಡಿಕೊಂಡು ಹೇಗೋ ಮೂರು ನಾಲ್ಕು ತಿಂಗಳು ಅಲ್ಲಿ ಕಾಲಕಳೆದಳು. ಆ ಮನೆಯ ಒಡೆಯ ಪೋಲೀಸ ಆಫೀಸರನು. ಸುಖಪುರುಷ. ಐವತ್ತು ವರ್ಷದವ. ರೂಪುಳ್ಳ ಬಡ ಕಟೂಷಳ ಮೇಲೆ ಕಣ್ಣಿಟ್ಟು, ಒಂದು ದಿನ ಆಕೆಯನ್ನು ಕೆಡಿಸಲಿಕ್ಕೆ ಹೊಂಚು ಹಾಕಿದನು. ಇದರ ಸುಳಿವು ತಿಳಿಯಿತು. ಸಮಯನೋಡಿ ಬಂದೇಬಿಟ್ಟ. ತನ್ನ ಮೈಮುಟ್ಟಲುಬರುವ ಆ ಮುದುಕನನ್ನು ಚನ್ನಾಗಿ ಗುಲ್ಲುಮಾಡಿ ಜಬರಿಸಿ, ಕಸುವಿನಿಂದ ಅತ್ತ ನೂಕಿಬಿಟ್ಟಳು. ಆದರಿಂದ ಅವನು ಒಂದೇಟಿಗೆ ಬಿದ್ದಬಿಟ್ಟನು. ತನ್ನ ತಪ್ಪನ್ನು ಎಣಿಸದೆ, ಆ ಒಕ್ಕಲಗಿತ್ತಿಯು ತನ್ನೊಡನೆ ಅಮರ್ಯಾದೆಯಿಂದ ನಡೆದುಕೊಂಡಳೆಂಬ ನೆವದಿಂದ ಆ ಕ್ಷಣಕ್ಕೆ ಆಕೆಯನ್ನು ಅವನು ಹೊರಗೆ ದಬ್ಬಿ ಹಾಕಿಸಿದನು. ಎದ್ದುಹೋದಲ್ಲಿ ಹದ್ದು ಬಡಿಯಿತಂತೆ!

ಈಗ ಕಟೂಷಳು ದಿನತುಂಬಿದ ಹೆಂಗಸು. ಹೇಗೋ ಏನೋ ಎಂಬ ಗಾಬರಿ; ಅಂತೂ ಅಲ್ಲಲ್ಲಿ ಕೇಳುತಿರಲು, ಕೊನೆಗೆ ಯಾವಳೊಬ್ಬ ಹಳ್ಳಿಯ ಸೂಲಗಿತ್ತಿಯ ಮನೆಯಲ್ಲಿ ಆಸರ ಸಿಕ್ಕಿತು. ಅಲ್ಲಿ ಸುಖದಿಂದ ಗಂಡು ಮಗುವನ್ನು ಹೆತ್ತಳು. ಕೂಸು ಬಾಣಂತಿ ಚನ್ನಾಗಿದ್ದರು. ಒಂದಿನ ಸೂಲಗಿತ್ತಿಯು ಜ್ವರ ಬಂದ ಒಬ್ಬ ಹೆಂಗಸಿಗೆ ಔಷಧ ಕೊಡಲಿಕ್ಕೆಂದು ಬೇರೊಂದು ಹಳ್ಳಿಗೆ ಹೋದಳು; ಅದು ಸುಂಕು ಜ್ವರ; ಆಕೆ ತಿರುಗಿ ಬಂದ ಮೇಲೆ ಆದರ ಸುಂಕವು ಕಟೂಷಳಿಗೆ ತಗಲಿತು; ಆಕೆಯಿಂದ ಮಗುವಿಗೂ ಜಡ್ಡಾಯಿತು; ಕೂಸನ್ನು ಮಕ್ಕಳಾಸ್ಪತ್ರಿಗೆ ಸೂಲಗಿತ್ತಿಯು ಕಳಿಸಿದಳು. ಅಲ್ಲಿ ವಿಪರೀತ ಜೇರಾಗಿ ಮಗುವು ಸತ್ತುಹೋಯಿತು. ತನ್ನ ಬಳಿಯಲ್ಲಿದ್ದ ಅಷ್ಟಿಷ್ಟು ಹಣವನ್ನು ಕಟೂಷಳು ತನ್ನ ಬಾಣಂತನಕ್ಕೂ, ಹಾಲಿಗೂ,

ಸೂಲಗಿತ್ತಿಯ ಕೂಲಿಗೂ, ಬೇರೆ ಸಣ್ಣಪುಟ್ಟ ಖರ್ಚಿಗೂ ಬಳಸಿಬಿಟ್ಟಳು; ಅಂತು ಆಗ ಆಕೆಯ ಕೈಯಲ್ಲಿ ಒಂದು ಕಾಸು ಕೂಡ ಉಳಿಯಲಿಲ್ಲ. ಮತ್ತೆ ಮೊದಲಿನ ಗಂಡಾಂತರವೇ ಒದಗಿತು.

ಕಟೂಷಳು ಎದೆಗಾರಳು; ಅಥವಾ ಕಷ್ಟ ಪರಂಪರೆಯಿಂದ ಆಕೆ ಎದೆಗಾರಿಕೆ ಎಂಬ ಗುಣವನ್ನು ಬೆಳಸಿಕೊಳ್ಳಬೇಕಾಯಿತೆಂದರೂ ಸರಿ! ಬಂದದ್ದೆಲ್ಲ ಬರಲಿ, ಎಂದು ಅಲ್ಲಿಲ್ಲಿ ವಿಚಾರಿಸಿದಳು. ಒಬ್ಬ ಅಡವಿಯಖಾತೆಯ ಅಧಿಕಾರಿಯಲ್ಲಿ ಕೆಲಸಕ್ಕೆ ನಿಂತಳು. ಆ ಅಧಿಕಾರಿಯು ಪ್ರಪಂಚಿಕನಿದ್ದರೂ ಆತನ ಮನೆಗೆ ಕೆಲಸಕ್ಕೆ ಹೋಗಿ ನಿಂತಂದಿನಿಂದ ಈಕೆಯನ್ನು ಕಂಡರೆ, ಅವನು ಕಣ್ಣುಮೋರೆ ಹುಚ್ಚುಚ್ಚು ಮಾಡಹತ್ತಿದ. ಅವನ ತಲೆ ಕೆಟ್ಟಿತು. ಅವನ ಕೈಗೆ ಸಿಗದಂತೆ ತಪ್ಪಿಸಿಕೊಳ್ಳಬೇಕೆಂದು ಮಿತಿಮೀರಿ ಯತ್ನಿಸಿದಳು. ಆತ ಒಳ್ಳೇ ಧೂರ್ತ ಮತ್ತು ಠಕ್ಕ. ಏನೇನೋ ಮಾಡಿ ಒಂದಿನ ತನ್ನ ಕೋಣೆಯಲ್ಲಿ ಆಕೆಯನ್ನು ತನ್ನ ಬಲೆಯೊಳಗೆ ಹಿಡಿದೇ ಬಿಟ್ಟ. ಇದನ್ನು ಆತನ ಹೆಂಡತಿಯು ಕಂಡು ಕಟೂಷಳನ್ನೇ ವ್ಯಾನುಗ್ಗಾಗುವಂತೆ ಥಳಿಸಿ, ಆಕೆಯ ಕೂಲಿಕುಬಟೆ ಕೊಡದೆ ಮನೆಯಿಂದ ದಬ್ಬಿಹಾಕಿದಳು.

ಕಟೂಷಳು ತನ್ನ ಹಣೇಬರಹವನ್ನು ಬಹು ಬಗೆಯಿಂದ ಹಳಿದುಕೊಂಡು, ಅದೇ ಊರಲ್ಲಿದ್ದ ತನ್ನ ಸೋದರತ್ತೆಯ ಮನೆ ಸೇರಿದಳು. ಒಂದಾನೊಂದು ಕಾಲಕ್ಕೆ ತನ್ನ ಸೋದರತ್ತೆಯ ಸಂಸಾರದ ಸ್ಥಿತಿಯು ಬಲು ಚೆನ್ನಾಗಿತ್ತು. ಉಂಡು ತಿಂದು ನೆಟ್ಟಗಿದ್ದ ಮನೆತನವದು; ಆದರೂ, ಆ ಸೋದರತ್ತೆಯ ಗಂಡನು ಸೆರೆಕುಡಿತಕ್ಕೆ ಬಿದ್ದು ತನ್ನ ವ್ಯಾಪಾರ-ಉದ್ಯಮವನ್ನೆಲ್ಲ ಹಾಳುಮಾಡಿಕೊಂಡು ಪತ್ತುಗೇಡಿಯಾಗಿ ಕುಳಿತಿದ್ದನು; ಆದುದರಿಂದ ಗಂಡನ ಉಸಾಬರಿಬಿಟ್ಟು ಇತ್ತೀಚೆ ಸೋದರತ್ತೆಯೇ ಗಟ್ಟಿಮನಸು ಮಾಡಿಕೊಂಡು ಚಟ್ನಿ-ಬಕ್ಕರಿಗಾಗಲಿ ಗತಿಯಾದೀತೆಂದು ಮನೆಯಲ್ಲಿಯೇ ಬಟ್ಟೆ ಒಗೆಯುವ ಕೆಲಸ ನಡಿಸಿದ್ದಳು. ಈಗ ಕಟೂಷಳಂಥ ಒಬ್ಬ ಆಪ್ತಳು ತನ್ನ ಕೈ-ಗುಟ್ಟಿಗೆ ಸಿಕ್ಕಂತಾಯಿತು; ಆದರೆ ತನ್ನ ಸೊದರತ್ತೆಯ ಮನೆಯವರೇ ಮಧ್ಯಾಹ್ನ ಹೇಗೋ ಸಂಜೆ ಹೇಗೋ ಎಂದು ಕಾಲಕಳೆಯುತ್ತಿರುವಾಗ

ತಾನೊಬ್ಬಳು ಅವರಿಗೆ ಭಾರವಾಗಿ ಕುಳ್ಳಿರುವದು ಕಟೂಷಳಿಗೆ ಸರಿದೋರ ಲಿಲ್ಲ. ಆಕೆ ಸರಕಾರಿ ಕೆಲಸಕ್ಕಾಗಿ ಅರ್ಜಿ ಮಾಡಿದಳು. ಯಾವಳೋ ಒಬ್ಬ ಹೆಂಗಸಿನ ನೆರವಿನಿಂದ ಒಂದು ಶಾಲೆಯಲ್ಲಿ ಕೆಲಸ ಸಿಕ್ಕಿತು. ಒಂದುವಾರ ಕೆಲಸ ನಡೆಯಿತು; ಆದರೆ ಅಲ್ಲಿಯೂ ಕಟೂಷಳಿಗೆ ಒಬ್ಬ ಗಡುತರ ಮೀಸೆಯ ಪೋಕರಿಯೊಬ್ಬ ಗಂಟುಬಿದ್ದನು. ಅವನು ಎಲ್ಲಿಯೋ ಏನೋ ಓದುತ್ತಿದ್ದರೂ, ಅದನ್ನೆಲ್ಲ ಬಿಸಾಕಿ ಹುಚ್ಚುಹಿಡಿದವನಂತೆ ಕಟೂಷಳನ್ನು ಬೆನ್ನಟ್ಟಿದನು. ತನ್ನ ಮಗನಿಗೆ ಹುಚ್ಚುಹಿಡಿಸಿದಕ್ಕಾಗಿ ಅವನ ತಾಯಿಯು ಕಟೂಷಳ ಮೇಲೆಯೇ ತಪ್ಪುಹೊರಿಸಿ, ಆಕೆಗೆ ನೋಟೀಸು ಕೊಟ್ಟಳು.

ಎಲ್ಲಿಕೋದರೂ, ಏನುಮಾಡಿದರೂ ದುರ್ದೈವವು ದುತ್ತೆಂದು ತನ್ನ ಬೆನ್ನ ಬಿಡದೆ ಕಾಲೂರಗೊಡದಕ್ಕಾಗಿ ಆಕೆಗೆ ಜೀವನವೇ ಬೇಸರವಾಯಿತು. ಇಂಥ ಪರಿಯಿಂದ ಜೀವದಿಂದಿದ್ದು ಪ್ರಯೋಜನವೇನೆಂದು ತನ್ನೊಳಗೆ ತಾನೇ ಬಹು ಪರಿಯಾಗಿ ಹಳಿದುಕೊಂಡಳು. ಇನ್ನೊಮ್ಮೆ ಸರಕಾರದಲ್ಲಿಯೇ ಕೆಲಸ ಸಿಗುತ್ತ ದೇನೋ ಯತ್ನಮಾಡಿ ನೋಡುವಾ ಎಂದು ಸರಕಾರಿ ಕಚೇರಿಗೆ ಹೋದಳು. ಕಟೂಷಳಿಗೆ ಅಲ್ಲಿ ಒಬ್ಬ ಹೆಂಗಸು ಬೆಟ್ಟಿಯಾದಳು. ಆಕೆಯು ದುಂಡು ದುಂಡಾಗಿರುವ ತನ್ನ ಕೈಗಳಲ್ಲಿ ಚಿನ್ನದ ಬಳೆಗಳನ್ನೂ, ಹತ್ತೂ ಬಟ್ಟುಗಳಲ್ಲಿ ಉಂಗುರುಗಳನ್ನೂ ಇಟ್ಟಿದ್ದಳು. ಕಟೂಷಳಿಗೆ ಜೀವನಕ್ಕೇನೂ ಬೇರೆ ಆಧಾರ ವಿಲ್ಲದೆ ಬರಿಯ ಕೆಲಸದ ಮೇಲೆಯೇ ಕೈಊರಿಕೊಂಡು ಕುಳ್ಳಿರಬೇಕಾಗಿರುವ ಸಂಗತಿಯನ್ನು ತಿಳಿದುಕೊಂಡು, ಆಕೆಗೆ ನಾಲ್ಕು ಮನಕರಗಿಸುವ ಮಾತು ಗಳನ್ನಾಡಿ, ತನ್ನ ವಿಳಾಸಕೊಟ್ಟು, ಅಲ್ಲಿ ನನ್ನನ್ನು ಬಂದು ಕಾಣು ಎಂದು ಹೇಳಿದಳು. ಕಟೂಷಳಿಗೆ ಸ್ವಲ್ಪ ಹಾಯವೆನಿಸಿತು. ಅಂದೇ ಕಟೂಷಳು ಆಕೆಯ ಮನೆಗೆ ಹೋದಳು. ಈಕೆಯನ್ನು ಆಕೆಯು ಬಹು ಪ್ರೀತಿಯಿಂದ 'ಬಾ, ಕುಳ್ಳಿರು' ಎಂದು ತನ್ನ ಮನೆಯಲ್ಲಿದ್ದುದನ್ನು ತಿನ್ನಲಿಕ್ಕೆಕೊಟ್ಟು, ತಾನು ಯಾರಿಗೋ ಒಂದು ಕಾಗದ ಬರೆದು, ತನ್ನ ಆಳುಮಗನ ಕೈಯಲ್ಲಿ ಕೊಟ್ಟಳು. ಸಂಜೆ ಎಂಬುವಷ್ಟರಲ್ಲಿ ಬಿಳೀ ಮೀಸೆಗಡ್ಡಗಳುಳ್ಳ ಒಬ್ಬ ಎತ್ತರ ವಾದ ಮನುಷ್ಯನು ಬಂದು, ಕಟೂಷಳು ಕುಳಿತಿರುವ ಕೋಣೆಯಲ್ಲಿಯೇ

ನೇರವಾಗಿ ಹೊಕ್ಕು ಆಕೆಯನ್ನು ನಿಟ್ಟಿಸಿ ನೋಡುತ್ತಲೂ, ಮುಗುಳು ನಗುತ್ತಲೂಆಕೆಯ ಬಳಿಯಲ್ಲಿಯೇ ಕುಳಿತನು; ಮತ್ತು ಸುಮ್ಮನೆ ಕುಳ್ಳಿರದೆ, ಆಕೆಯೊಡನೆ ಪರಿಹಾಸ್ಯ ನಡಿಸಿದನು. ಆಗ ಕಟೂಷಳನ್ನು ಮನೆಗೆ ಕರೆಸಿದ ಹೆಂಗಸು ಅವನನ್ನು ಮಗ್ಗಲಿನ ಬೇರೊಂದು ಕೋಣೆಗೆ ಕರೆದೊಯ್ದು, ' ಹಳ್ಳಿಯಿಂದೊಂದು ಮೀಸಲ ಬೇಟಿ, ' ಎಂದು ಮೆಲ್ಲಗೆ ನುಡಿದಳು. ಇದು ಕಟೂಷಳ ಕಿವಿಗೆ ಕೇಳಿಸಿತು. ಆಮೇಲೆ, ಕಟೂಷಳನ್ನು ಆ ಕೋಣೆಯಲ್ಲಿ ಕರೆದು, ' ಇದುನೋಡು. ಇವರು ಒಬ್ಬ ಗ್ರಂಥಕರ್ತರು, ಸಿರಿವಂತರು, ನೀನು ಎಲ್ಲ ಬಗೆಯಿಂದ ಇವರನ್ನು ಸಂತುಷ್ಟಪಡಿಸಿದರೆ, ನಿನಗೇತರ ಕೊರತೆಯಾಗಗೊಡರು. ' ಅಂದಳು. ಆದರಂತೆ, ಅವನಾದರೂ ಅಲ್ಲಿಂದಲ್ಲಿಯೇ ಕೆಲ ರೂಪಾಯಿಗಳನ್ನು ಆಕೆಯ ಕೈಯಲ್ಲಿಟ್ಟು, ' ಒಳ್ಳೇದು, ಆಗಾಗ್ಗೆ ನಿನ್ನ ಕಾಣುವೆ ' ಎಂದು ಹೇಳಿಹೋದನು. ಕೈಗೆ ಬಂದ ಆ ರೂಪಾಯಿಗಳು ವೆಚ್ಚವಾಗಲಿಕ್ಕೇನೂ ತಡವಾಗಲಿಲ್ಲ. ಊಟಕ್ಕೆ ತಿಂಡಿಗೆ, ಆ ಅಂಗಿ, ಈ ಟೊಪ್ಪಿಗೆ, ಇನ್ನೇತಕ್ಕೊ ಎಂದು ಎಲ್ಲ ದುಡ್ಡು ಕೈಬಿಟ್ಟಿತು. ಕೆಲದಿನಗಳಾದ ನಂತರ ಆ ಗ್ರಂಥಕರ್ತನು ಯಾರೊಡನೆಯೋ ಬರಲಿಕ್ಕೆ ಹೇಳಿ ಕಳಿಸಿದ್ದರಿಂದ ಕಟೂಷಳು ಅವನಲ್ಲಿಗೆ ಹೋದಳು. ಅಲ್ಲಿ ಹೋದಮೇಲೆ, ಅವನು ಮತ್ತೆ ಕೆಲ ರೂಪಾಯಿ ಆಕೆಯ ಕೈಲಿ ಕೊಟ್ಟು ಬೇರೊಂದು ಮನೆಯಲ್ಲಿಟ್ಟನು.

ಕಟೂಷಳು ಇರುತ್ತಿದ್ದ ಮನೆಯ ನೆರೆಯಲ್ಲಿಯೇ ಒಬ್ಬ ಅಂಗಡಿಕಾರನಿದ್ದ. ಅವನು ಬಹು ಸೊಗಸಿನವ. ಕಂಗೆಟ್ಟ ಕಟೂಷಳು ಅವನಿಗೆ ಮನಸೋತಳು. ಅವನೂ ಆಕೆಯನ್ನು ಮದುವೆಯಾಗುವೆನೆಂದು ಮಾತುಕೊಟ್ಟದ್ದರಿಂದ ಮೊದಲಿನ ತನ್ನ ಮನೆಬಿಟ್ಟು ಗ್ರಂಥಕರ್ತನ ಅಪ್ಪಣೆಯಿಂದ ಆಕೆ ಬೇರೆಡೆ ಹೋದಳು; ಆದರೆ, ಆ ಅಂಗಡಿಕಾರನು ಹೇಳದೆ ಕೇಳದೆ, ತನ್ನ ವ್ಯಾಪಾರದ ದೆಸೆಯಿಂದ ಒಬ್ಬಳನ್ನೇ ಬಿಟ್ಟು ಹೊರಟು ನಡೆದನು. ಕಟೂಷಳು ಒಬ್ಬಂಟಿಗಳಾಗಿಯೇ ಇರಹತ್ತಿದಳು; ಆದರೆ ಒಬ್ಬಳೇ ಇರುವಪಕ್ಷಕ್ಕೆ ಸೂಳೆಗಾರಿಕೆಯ ಟಿಕೀಟು ಪಡೆದು ಡಾಕ್ಟರ ಪರೀಕ್ಷೆ ಮಾಡಿಸಿಕೊಳ್ಳಬೇಕೆಂದು ಪೋಲೀಸರು ಆಕೆಯ ದುಂಬಾಲಬಿದ್ದರು. ಆಗ ಕಟೂಷಳು ಗೊಂದಲದ ಗುಂಡಿಗೆ ಬಿದ್ದು,

ಏನೂ ತೋಚದೆ, ತನ್ನ ಸೋದರತ್ತೆಯ ಮನೆಗೆ ಮರಳಿದಳು. ಈಕೆಯ ಸೊಬಗಿನ ಉಡುಪು, ಹೊಸ ಟೊಪ್ಪಿಗೆ, ಝುಗ ಝುಗಿಸುವ ಝುಗ ಮುಂತಾದವುಗಳನ್ನು ನೋಡಿ ಆಕೆಯು ಈಕೆಗೇನೂ ತನ್ನ ಮಡಿವಳದ ಕೆಲಸ ಕೊಡಲಿಲ್ಲ; ಇಷ್ಟೇ ಅಲ್ಲ; ಇಂಥವಳಿಗೆ ತಾನು ಇಂಥ ಹೀನ ಕೆಲಸವನ್ನೆಂತು ಹೇಳಬೇಕೆಂದು ಬಹು ಸಂಕೋಚಪಟ್ಟುಕೊಂಡಳು. ಅಲ್ಲಿ ನಿಂತು ಟೊಂಕ ಸೋಲುವ ಪರವೆ ಇಲ್ಲದೆ ಬಟ್ಟೆ ಕುದಿಸುತ್ತಿರುವವರನ್ನೂ, ಕೈಸುಟ್ಟುಕೊಂಡು ಇಸ್ತ್ರಿ ಮಾಡುತ್ತಿದ್ದವರನ್ನೂ ಕಂಡು, ಕಟೂಷಳು ತಾನಲ್ಲಿ ಕೊಳೆಯುತ್ತ ಬಿದ್ದರೆ, ತನ್ನ ಪಾಡೂ ಅವರಂತೆಯೇ ಆಗಬಹುದಾಗಿತ್ತೆಂದುಕೊಂಡಳು. ಇದೆಲ್ಲ ಆಯಿತು; ಆದರೆ ಮುಂದಿನ ಗತಿಏನು? ಇನ್ನೆಲ್ಲಿ ಹೋಗಬೇಕು? ಎಂಬುವ ಗಾಬರಿಯಲ್ಲಿರುವಾಗ ಇನ್ನೊಬ್ಬ ಹೆಂಗಸು ಗಂಟುಬಿದ್ದಳು. ಆಕೆ ಕುಂಟಲಗಿತ್ತಿ.

ದುರ್ದೆಸೆಗೆ ಇತ್ತೀಚೆ ಕಟೂಷಳಿಗೆ ಸಿಗಾರೇಟ ಸೇದುವ ಚಟ ಹತ್ತಿತ್ತು. ಅಂಗಡಿಕಾರನನ್ನು ಮದುವೆ ಮಾಡಿಕೊಳ್ಳಬೇಕೆಂದು ವಿಚಾರಮಾಡಿ, ಅವನ ಸಹವಾಸದಲ್ಲಿರಹತ್ತಿದಂದಿನಿಂದಂತೂ ಅಷ್ಟಿಷ್ಟು ಸೆರೆಕುಡಿತದ ವ್ಯಸನವೂ ತಗಲಿ, ಅದು ಬೆಳೆಯತೊಡಗಿತ್ತು. ಅಖಂಡ ಕಷ್ಟದೊಳಗೇ ಮೊಳೆದು ಬೆಳೆದವಳಿಗೆ ಸೆರೆಯು ಹಿಂದುಮುಂದಿನದನ್ನು ಮರೆಯಿಸಿ, ಹೆಚ್ಚೆಚ್ಚು ಆತ್ಮವಿಶ್ವಾಸ ಹುಟ್ಟಿಸುತ್ತಿತ್ತು; ಆದುದರಿಂದ ಮನಸು ಕುಗ್ಗಿದಂತಾದಾಗ ಆಕೆಯು ಅದನ್ನು ಅಪೇಕ್ಷಿಸುವಳು. ಅದಿಲ್ಲದಿದ್ದರೆ, ಯಾವುದೊಂದು ತನಗೆ ಸಲ್ಲದ ಕೆಲಸ ಮಾಡಲು ಬಹು ನಾಚುವಳು. ಸ್ವಲ್ಪ ಸೆರೆಕುಡಿದಿದ್ದರೆ, ನಾಚುತಿರಲಿಲ್ಲ. ಹೀಗಿರುತಿರಲು, ಆ ಕುಂಟಲಗಿತ್ತಿಯು ಕಟೂಷಳಿಗೆ ವಿಧವಿಧದ ಅಂದಚಂದ ವಸ್ತುಗಳನ್ನು ತಂದುಕೊಡಹತ್ತಿದಳು; ಇದರಿಂದ ಆಕೆಯ ಬಾಯಲ್ಲಿ ನೀರು ಬಿಟ್ಟವು. ಒಮ್ಮೆ ಸೆರೆ ಕುಡಿದಿರುವಾಗ, ಆ ಕುಂಟಲಗಿತ್ತಿಯು ದೊಡ್ಡ ದೊಡ್ಡ ಸೂಳೆಗಾರಿಕೆಯ ಮನೆಗಳು, ಅಲ್ಲಿಯ ಸೌಕರ್ಯ ಸುಖವಿಲಾಸಗಳನ್ನು ವರ್ಣಿಸಿ, ನೀನು ಬರಲಿಕ್ಕೆ ಒಪ್ಪಿದರೆ, ಯಾವುದೊಂದು ಸುಂದರವಾದ ಸೂಳೆಗಾರಿಕೆಯ ಮನೆಯಲ್ಲಿಡುವೆ ನಿನ್ನ. ನೋಡು ಬರುತ್ತಿದ್ದರೆ? ಎಂದು ಮೆಲ್ಲಗೆ ಕೇಳಿದಳು. ಈಗ ಕಟೂಷಳಿಗೆ ತನ್ನ ಜೀವನಕ್ಕೆ ಎರಡೇ ದಾರಿಗಳು

ಇದ್ದವು. ಒಂದನೇದು ಯಾರಲ್ಲಾದರೂ ಊಳಿಗಕ್ಕೆ ಇದ್ದು, ಅಲ್ಲಿಯ ಘಟಿಂಗರ ಕಣ್ಣಿಗೆ ಬಿದ್ದು ಆಗಾಗ್ಗೆ ಕೆಡುವದು, ಎರಡನೇದು ಹಾಡೇಹಗಲು ಸೂಳೆತನಕ್ಕೆ ನಿಂತು ಅದರಿಂದ ವೆಗ್ಗಳ ದುಡ್ಡುಗಳಿಸುವದು; ಇವುಗಳಲ್ಲಿ ಮೊದಲನೆದ್ದರ ಅನುಭವವನ್ನು ಆಕೆ ಹಲವು ಸಾರೆ ಉಂಡಿದ್ದಳು; ಆದುದರಿಂದ ಸೂಳೆತನಕ್ಕೇ ನಿಂತುಬಿಟ್ಟರಾಯಿತು. ಇನ್ನೇನು ಈ ಒದ್ದಾಟದಿಂದ ? ಎಂದುಕೊಂಡು ಒಪ್ಪಿದಳು; ಹೀಗೆ ಸೂಳೆತನಕ್ಕೆ ನಿಲ್ಲುವದರಲ್ಲಿ ತನ್ನನ್ನು ಮೊದಲು ಕೆಡಿಸಿದ ಆ ಶ್ರೀಮಂತ ವಿದ್ಯಾರ್ಥಿ, ಆಮೇಲೆ ಕೆಡಿಸಿದ ಅಂಗಡಿಕಾರ, ಬಲುಮೆಮಾಡಿದ ಬೇರೆ ಜನರ ಮೇಲೆಯೂ ಒಂದು ಬಗೆಯ ಸೇಡು ತೀರಿಸಿಕೊಳ್ಳುವಷ್ಟೇ ಆಕೆಯ ಉದ್ದೇಶ. ಇವೆಲ್ಲವುಗಳ ಜೊತೆಗೆ, ಆ ಕುಂಟಲಗಿತ್ತಿಯು ಆಕೆಗೆ ಸವಿಸವಿ ಮಾಡಿ ನೀನು, ಸೂಳೆಗಾರಿಕೆಗೆ ನಿಂತರೆ, ಬೇಕಾದದ್ದನ್ನು ಉಡಬಹುದು, ತೊಡ ಬಹುದು, ಉಣಬಹುದು, ಸುಖವಿಲಾಸಗಳಲ್ಲಿ ಲೋಲಾಡಬಹುದು. ನೀನು ಇಚ್ಛಿಸಿದ ರೇಶ್ಮೆಯ, ಕಲಾಬತ್ತಿನ, ನಾಜಿನ ಉಡುಪುಗಳು ಸಹ ಸಿಗುವವು ಎಂಬ ಭುಲ್ಲವಿಸುವ ನುಡಿಗಳಿಗೆ ಹುಚ್ಚಾದಳು. ಅಂಥ ಸುಖದಲ್ಲಿ ಓಲಾ ಡುವ ತನ್ನ ಸುಖ-ಚಿತ್ರವು ಕ್ಷಣಹೊತ್ತು ಆಕೆಯ ಕಣ್ಣಿಗೆ ಕಟ್ಟಿತು. ಅದೇ ದಿನ ಸಂಜೆಗೆ ಆ ಕುಂಟಲಗಿತ್ತಿಯು ಒಂದು ಗಾಡಿಯನ್ನು ಮಾಡಿಕೊಂಡು ಬಂದು ಆಕೆಯನ್ನದರಲ್ಲಿ ಕುಳ್ಳಿರಿಸಿಕೊಂಡು ಕ್ಯಾರೋಲಿನ್ ಕಿಟಾವ್ನಾ ಎಂಬುವನು ಇಟ್ಟ ಪ್ರಸಿದ್ಧ ಸೂಳೆಗಾರಿಕೆಯ ಮಂದಿರಕ್ಕೆ ಒಯ್ದಳು.

ಅಂದಿನಿಂದ, ಮಾನವೀ ಮತ್ತು ದೈವಿಕ ಕಟ್ಟಳೆಗಳ ವಿರುದ್ಧವಾಗಿರುವ ಜಾರಕರ್ಮಕ್ಕೆ ಕಟೊಪಳು ಹೇಳಿಕೇಳಿ ನಿಂತಂತಾಯಿತು. ಜಾರಕರ್ಮದಿಂದ ಸಾವಿರಗಟ್ಲೆ ಹೆಂಗಸರು ಹೊಟ್ಟೆತುಂಬಿಕೊಳ್ಳುವರು. ತಮ್ಮ ಪ್ರಜೆಗಳು ಹೊಟ್ಟೆ ಹೊರಕೊಳ್ಳಲೆಂದು ಸರಕಾರದವರು ಜಾರಕರ್ಮನಡಿಸಲಿಕ್ಕೆ ಕಟ್ಟಳೆ ಮಾಡಿ ತಮ್ಮ ಸಮ್ಮತಿಕೊಟ್ಟಿರುವರು. ಅಂದಮೇಲೇನು? ಜಾರಕರ್ಮದಿಂದ ಸಾವಿರಾರು ಮಂದಿ ಹೆಂಗಸರು ನಾನಾ ಬಗೆಯ ಘೋರವಾದ ರೋಗಗಳಿಗೆ ಈಡಾಗಿ, ಹಲವು ಎಳೆಯ ತರುಣರನ್ನು ತಮ್ಮ ನರಕ ಜಾಲದಲ್ಲಿ ಹಿಡಿದು ಕೆಡಿಸಿ ಕೊಲ್ಲುತ್ತಿದ್ದರೂ ಅದು ರಾಜಮಾನ್ಯವಾಗಿ ಮೆರೆಯುತ್ತಿರುವದು ಎಷ್ಟು ದುರ್ದೈವದ ಸಂಗತಿ! ಇರಲಿ.

ಪುನರ್ಜನ್ಮ

ಕಟೋಪಳು ತನ್ನ ಜೀವನಕ್ಕೆ ಹೊಸದೆನಿಸುವ ಕನ್ನಡಿ, ನಿಲುಗನ್ನಡಿ, ಬಗೆಬಗೆಯ ಚಿತ್ರಗಳು, ಅಲಂಕಾರದ ಕೋಣೆಗಳು, ಹಾಸಿಗೆಗಳು ಇವೆಲ್ಲವುಗಳಿಂದ ಝಗಝಗಿಸುವ ಜಾರ-ಸೃಷ್ಟಿಯಲ್ಲಿ ಹೊಕ್ಕಕೂಡಲೇ ಮೈಮರೆತಳು. ಅಲ್ಲಿ ದಿವ್ಯ ಊಟ, ಕುಡಿತವಾಯಿತು. ಎಲ್ಲರಂತೆ ಮೆತ್ತನ್ನ ಗಾದಿಯಮೇಲೆ ಮಲಗಿಕೊಂಡಳು. ಅಂದು ಆಕೆಗೆ ಗಾಢನಿದ್ರೆ. ಮಧ್ಯರಾತ್ರಿ ಮೀರಿಹೋಯಿತು. ರಾತ್ರಿ ಮೂರು ನಾಲ್ಕು ಗಂಟೆಯಸಮಯ. ತಮ್ಮ ಹೊಲಸು ಹಾಸಿಗೆಗಳಿಂದ ಆಕಳಿಸುತ್ತ ಎದ್ದು, ಹಗಲಿನ ಮೇಲೆ ನಿಲುವಂಗಿಗಳನ್ನು ಚಲ್ಲಿಕೊಂಡು ಸದ್ದುಮಾಡದೆ ಒಬ್ಬೊಬ್ಬರೇ ವಿಟರು ದೊಡ್ಡದೊಡ್ಡ ಕನ್ನಡಿಯ ಕಿಡಿಕಿಗಳೊಳಗಿಂದ ಹಣಕಿಕ್ಕಿನೋಡಲಾರಂಭಿಸಿದರು. ಕೆಲವರು ಸುಮ್ಮನೆ ಬಾತಿಗೆ ಬಾರದ ಮಾತು ಕೆದರಿ ಹಿಃ ಹಿಃ ಹಾಃ ಹಾಃ ಎಂದು ನಗಹತ್ತಿದರು; ಅವರು ಬರಹತ್ತಿದೊಡನೆ ಒಳಗಿರುವ ಸೂಳೆಯರೂ ಒಬ್ಬರಹಿಂದೊಬ್ಬರು ಎದ್ದು ಮುಖ ತೊಳೆದುಕೊಂಡು ಮುಖಕ್ಕೆ ಬಣ್ಣ ಹಚ್ಚಿಕೊಳ್ಳುವದು, ಮೈಗೆ ಕೂದಲಿಗೆ ಸುಗಂಧ ಎಣ್ಣೆ ಹಚ್ಚಿಕೊಂಡು ಬಾಚಿಕೊಳ್ಳುವದು, ನಿಲುಗನ್ನಡಿಯ ಮುಂದೆ ನಿಂತು ಮುಖ, ಕಣ್ಣು, ಹುಬ್ಬು, ಹಣೆ, ಗಲ್ಲ, ತುಟಿ, ಮುಂತಾದವುಗಳನ್ನು ತಿದ್ದಿಕೊಂಡು, ಅವುಗಳಿಗೆ ಬಣ್ಣ ಹಚ್ಚಿಕೊಳ್ಳುವದು, ವಿಧವಿಧದ ಪಕ್ವಾನ್ನವನ್ನುಂಡು ಮೈಯೆಲ್ಲ ಕಾಣಿಸುವಂಥ ಉಡುಪುಗಳಿಂದ ತಮ್ಮನ್ನು ಸಿಂಗರಿಸಿಕೊಳ್ಳುವ ಗದ್ದಲನಡೆದು, ಒಬ್ಬೊಬ್ಬರು ತಮ್ಮ ತಮ್ಮ ವಿಲಾಸಕೋಣೆಗಳನ್ನು ಹೊಕ್ಕು ಒನಪು ಒಯ್ಯಾರಗಳಿಂದ ಹಿಗ್ಗಿಗ್ಗಿ ನಡೆದಾಡಹತ್ತಿದರು. ಆ ಮೇಲೆ ವಿಟರು ಹಿಂಡುಗಟ್ಟಿಕೊಂಡು ನಗೆಯುತ ಕೆಲಿಯುತ್ತ ಬರುವದು, ಫಡ್ ಫಡ್ ಎಂದು ಸೋಡಾ ಬಾಟ್ಲಿಗಳ ಒಡೆಯುವಿಕೆಯ ಸಪ್ಪಳ, ಸಿಗಾರೇಟ್ ಸೇದುವ ಹೊಗೆ, ಸೆರೆಕುಡಿತ, ಕೂಗಾಟ, ಒದರಾಟ, ಕುಣಿದಾಟ ಭೋಗ ಮುಂತಾದ ಹುಚ್ಚು ವಿಲಾಸಗಳ ಗೊಂದಲವೇಗೊಂದಲ ಬೆಳ್ಳಬೆಳಗಿನವರೆಗೆ; ಒಬ್ಬರಿಗೂ ವಿಶ್ರಾಂತಿಯಿಲ್ಲ, ಬೆಳಗಾದ ಮೇಲೆ ಮತ್ತೆ ನಿದ್ರೆ, ಹೀಗೆ ದಿನಾಲು ನಡೆಯುವದು. ವಾರಕ್ಕೊಮ್ಮೆ ಮಾತ್ರ ಸೂಳೆಯರೆಲ್ಲರು ಪೋಲೀಸ ಸ್ಟೇಶನ್ನಿಗೆ ಹೋಗಿ, ಅಲ್ಲಿರುವ ಸರಕಾರಿ ಡಾಕ್ಟರಿಗೆ ತಮ್ಮ ಶರೀರ ಪರೀಕ್ಷೆ

ಮಾಡಿಸಿಕೊಳ್ಳುವರು. ಆಗ ಅವರು ಒಮ್ಮೊಮ್ಮೆ ಗಾಂಭೀರ್ಯದಿಂದಲೋ, ಇನ್ನೊಮ್ಮೆ ನಗಚಾಟಿಕೆಯಿಂದಲೋ, ಸೂಳೇರ ಮೈಮೇಲಿನ ಬಟ್ಟೆಗಳನ್ನೆಲ್ಲ ಕಳೆಯಿಸಿ, ಮನುಷ್ಯ ಜಾತಿಗೆ ವಿೀಸಲಾಗಿರುವ ಮರ್ಯಾದೆಯನ್ನು ಕೂಡ ಹಾಳುಮಾಡಿ ಅವರನ್ನು ಪರೀಕ್ಷಿಸಿ ಸೂಳೆತನವನ್ನು ಮುನ್ನಡೆಯಿಸಲಿಕ್ಕೆ ಅಪ್ಪಣೆಯನ್ನು ಕೊಡುವರು. ಈ ಮೇರೆಗೆ, ಮಳೆಗಾಲ, ಬಿಸಿಲುಗಾಲ, ಚಳಿಗಾಲ ಎನ್ನದೆ, ಹಬ್ಬಹುಣ್ಣಿವೆ ಎನ್ನದೆ ಅಖಂಡ ಸೂಳೆಗಾರಿಕೆಯ-ನೀತಿಯನ್ನು ಶೂಲಕ್ಕೇರಿಸುವ-ವ್ಯಾಪಾರ ನಡೆಯುತ್ತಿತ್ತು.

ಇಂತಹ ದುರವಸ್ಥೆಯಲ್ಲಿಯೇ (ಕಟುಷಾ) ಮಾಸ್ಲೋವಳು ಏಳು ವರ್ಷ ಕಾಲಕಳೆದಳು. ಆಗ ಆಕೆಗೆ ಇಪ್ಪತ್ತೆಂಟು ವರ್ಷ. ಸೂಳೆತನದ ಮನೆಯಲ್ಲಿರುವಾಗಲೇ ಯಾವುದೋ ಒಂದು ಅಪರಾಧದ ಸಲುವಾಗಿ ಆಕೆಯನ್ನು ಸೆರೆಮನೆಗೆ ಒಯ್ದು, ಎರಡು ಮೂರು ತಿಂಗಳವರೆಗೆ ಕಳ್ಳಕಾಕರ, ಕೊಲೆಗಡಕರ ಜೊತೆಯಲ್ಲಿ ಉಸಿರುಕಟ್ಟುವ ಆ ಹೊಲಸು ಹವೆಯ ಸೆರೆಮನೆಯಲ್ಲಿಟ್ಟ ನಂತರ ಕೋರ್ಟಿಗೆ ವಿಚಾರಣೆಗಾಗಿ ತಂದ ಸಂಗತಿಯು ಹಿಂದೆ ಬಂದಿದೆ. ಅದನ್ನು ವಾಚಕರು ಮರೆತಿರಲಾರರು.



# ೩ ಮನಸಿನ ಹೊಯ್ದಾಟ.






ಸ್ಲೋವಾ ಕಟೂಷಳನ್ನು ದೂರದಿಂದ ಕಾಲ್ನಡಿಗೆಯಿಂದಲೇ ಅವರಿಬ್ಬರು ಸಿಪಾಯಿಗಳು ಕರಕೊಂಡು ಕೋರ್ಟಿಗೆ ಬಂದರು. ದಾರಿ ನಡೆದು ಆಕೆ-ಬಹು ದಣಿದವಳಂತೆ ಕಂಡಳು. ಇತ್ತ, ಈ ಸಂಗತಿ ನಡೆದಿರಲು, ಅತ್ತ, ಕಟೂಷಳನ್ನು ಕೆಡಿಸಿದ ಆ ಜಮೀನದಾರ ಒಡತಿಯ ಸೋದರಳಿಯನ ಸ್ಥಿತಿ ಹೇಗಿರುವದೋ ನೋಡುವಾ. ಅವನ ಹೆಸರು ಯುವರಾಜ ಡಿಮಿಟ್ರಿ ನೆಕ್ಲ್ಯುಡವ್ಹ ಎಂದು. ಎಷ್ಟೆಂದರೂ ಅರಸು ಪಿಂಡ. ಅಂದಮೇಲೆ ಅವನಿಗೇತರ ಚಿಂತೆ. ಅದೇ ತಾನೇ ಅವನು ತನ್ನ ಅರಸು ಹಾಸಿಗೆಯ ಮೇಲೆ ಹಾಗೆ ಕಣ್ತೆರೆದು ಹೊರಳಾಡುತ್ತಿದ್ದ. ಮೈ ಅಲುಗಿಸಿದರೆ, ತೂಗಿದಂತಾಗುವ ಸರ್ವೋತ್ಕೃಷ್ಟವಾದ ಸ್ಪ್ರಿಂಗಿನ ಪಲಂಗು, ಅದರಮೇಲೆ ಮೊಳಕ್ಕೆ ಉದ್ದ ಎತ್ತರವಾದ ತುಪ್ಪಳದ ಲೇಪು, ತಲೆಯಿಟ್ಟರೆ ಒಳಗೆ ಹೂತು ಕೊಳ್ಳುವಂಥ ಮೆತ್ತನ್ನ ತಲೆದಿಂಬು, ಅದರ ಮೇಲೆ ಹಾಸಿರುವ ಶುಭ್ರವಾದೊಂದು ಮಗ್ಗಲು ಹಾಸಿಗೆ, ಮೈಯಲ್ಲೊಂದು ಇಸ್ತ್ರಿಮಾಡಿದ ಬೆಳ್ಳನ್ನ ಉಣ್ಣೆಯ ಶರ್ಟು, ಕೈಯಲ್ಲಿ ಹೊಗೆ ಹೋಗುತ್ತಿರುವ ಸಿಗರೇಟು, ಮನಸಿನಲ್ಲಿ, ನಿನ್ನೆ ಏನೇನು ನಡೆಯಿತು, ಇಂದೇನು ಮಾಡತಕ್ಕದ್ದೆಂಬುವ ವಿಚಾರ.

ಈ ಬಗೆಯ ವಿಚಾರದಲ್ಲಿ ತೇಲುತಿರಲು, ಗಕ್ಕನೆ ಅವನ ಮನಸು ಹಿಂದಿನ ಸಂಜೆಯೇ ನಡೆದ ಸಂಗತಿಯ ಕಡೆಗೆ ಹೊರಳಿತು. ಅದೇನಂದರೆ, ಆ ಸಂಜೆ ಡಿಮಿಟ್ರಿಯು ಯಾರೋ ಒಬ್ಬ ಶ್ರೀಮಂತ, ಕುಲೀನ ಇನಾಮದಾರರ ಮನೆಗೆ ಹೋಗಿದ್ದುದು. ಅವರಲ್ಲಿ ವಯಸ್ಸಿಗೆ ಬಂದ ಒಬ್ಬ ಮಗಳಿದ್ದಳು. ಆಕೆಯನ್ನು ಡಿಮಿಟ್ರಿಯು ಮದುವೆಯಾಗುವನೆಂದು ಎಲ್ಲರ ಎಣಿಕೆ. ಈ ಕಲ್ಪನೆಯು ಮನಸಿನಲ್ಲಿ ಮೂಡಿದೊಡನೆ ಡಿಮಿಟ್ರಿಯು ಅದೇಕೋ ಮುಖ ಸಪ್ಪಗೆ ಮಾಡಿ ಉಸ್ಸೆಂದನು. ತನ್ನ ಕೈಯಲ್ಲಿ ಹೊಗೆ

ಯುತ್ತಿರುವ ಸಿಗಾರಿಟಿನ ಬತ್ತಿಯ ತುದಿಯನ್ನು ಒಂದೆಡೆ ಬೀಸಾಕಿ, ಮತ್ತೊಂದು ಸಿಗಾರಿಟನ್ನು ತನ್ನ ಬೆಳ್ಳಿಯ ಪೆಟ್ಟಿಗೆಯೊಳಗಿಂದ ತೆಗೆದು ಕೊಳ್ಳುವವನು; ಇಷ್ಟರಲ್ಲಿ ಮನಸಿನಲ್ಲಿ ಮತ್ತೇನೋ ಹೊಳೆದಂತಾಗಿ, ಅವನು ಕೆಳಕ್ಕೆ ನೋಡಿ ಅಲ್ಲಿರುವ ಮೆತ್ತನ್ನ ಸ್ಲಿಪರಗಳಲ್ಲಿ ತನ್ನ ಬೆಳ್ಳಗಿನ ಕಾಲುಗಳನ್ನು ಹಾಕಿದನು; ಬಲಗೈಯಿಂದ ಅಲ್ಲಿಯೇ ಇಟ್ಟ ಮೇಲಂಗಿಯನ್ನು ಅಗಲವಾದ ಹೆಗಲಮೇಲೆ ಹಾಕಿಕೊಂಡು, ಮೆಲುನಡೆಯಿಂದ ಉಡುಪಿನ ಕೋಣೆಗೆ ನಡೆದನು. ಅಲ್ಲಿ ಸುಗಂಧವಾಸನೆಯು ಇಡಿಗಿತ್ತು. ಅಲ್ಲಿ ಹೋದ ಬಳಿಕ ಅವನು ಮೈಮೇಲೆ ಹಾಕಿಕೊಂಡ ಮೇಲಂಗಿಯನ್ನು ತೆಗೆದಿಟ್ಟು ಮೊದಲು ಚೊಕ್ಕಟವಾಗಿ ಹಲ್ಲು ಉಜ್ಜಿಕೊಂಡ; ವಾಸನೆಯ ನೀರಿನಿಂದ ಬಾಯಿ ಮುಕ್ಕುಳಿಸಿಕೊಂಡ; ಆಮೇಲೆ ಸುಗಂಧ ಸಬಕಾರದಿಂದ ಮುಖ, ಕೈ ಕಾಲುಗಳನ್ನು ತಿಕ್ಕಿತಿಕ್ಕಿ ತೊಳಕೊಂಡು ಮೂರನೆಯ ಕೋಣೆಯಲ್ಲಿ ತುಷಾರ ಸ್ನಾನಕ್ಕಾಗಿ ಹೊಕ್ಕನು. ಅಲ್ಲಿ ಎದ್ದು ನಿಂತುಕೊಂಡೇ ತನ್ನ ಮುಂಡಿತಿರುಗಿದ ರಟ್ಟೆಗಳನ್ನು, ತುಂಬಿದ ಕುತ್ತಿಗೆಯನ್ನು, ಉಕ್ಕಿನಂತಹ ಹರವಾದ ಎದೆಯನ್ನು ಘಸಘಸ ತಿಕ್ಕಿಕೊಂಡು ಸುಖಸ್ನಾನಮಾಡಿ ಒಂದರಗಳಿಗೆಯಲ್ಲಿಯೇ ಮೈ ಒಣಗಿಸುವ ಉರುಟು ಅಂಗವಸ್ತ್ರದಿಂದ ಚನ್ನಾಗಿ ಒರಸಿಕೊಂಡು, ಮೈಯಲ್ಲಿ ಲಂಡಚಣ್ಣಾ ತೊಟ್ಟು ಬೂಟುಗಳನ್ನು ಮೆಟ್ಟಿ, ಅಲ್ಲಿಯೇ ಇಟ್ಟಿರುವ ಕನ್ನಡಿಯ ಮುಂದೆ ಹೋಗಿ ಕುಳಿತು ಕೂದಲುಗಳನ್ನು ಹಿಕ್ಕಿ ಸರಿ ಮಾಡಿಕೊಂಡನು.

ಅವನು ಬಳಸುವ ಉಣ್ಣೆಬಟ್ಟೆ, ಬಟ್ಟೆಬರೆ, ಸಬಕಾರ, ಬೂಟು, ಕಾಲ ಚೀಲು, ಕೊರಳಪಟ್ಟಿ, ಮುಂತಾದವುಗಳೆಲ್ಲವೂ ತಾಳಿಕೆ ಬಾಳಿಕೆ, ಬೆಲೆ, ಚಂದ, ಸಾದಾ ಇವೆಲ್ಲ ದೃಷ್ಟಿಯಿಂದ ಮೇಲ್ತರದವು. ಒಂದೊಂದು ಕಾಲಕ್ಕೆ ತನ್ನ ಮನಸಿಗೆ ಅತ್ಯಂತ ಆಕರ್ಷಕವೆನಿಸಿದ ಪದಾರ್ಥಗಳನ್ನೇ ಅವನು ಕೊಂಡಿದ್ದನು; ಆದರೆ ಅವೆಲ್ಲ ಅವನಿಗೀಗ ಔದಾಸೀನ್ಯ ಹುಟ್ಟಿಸಲು ಕಾರಣವಾಗಿದ್ದವು.

ಅದಾದ ಮೇಲೆ ನೆಕ್ಲ್ಯುಡವ್ಹನು ( ಡಿಮಿಟ್ರಿಯು ) ತನ್ನ ಬದಿಯಲ್ಲಿಯೇ ಒಂದು ಕ್ಯುರ್ಚಿಯ ಮೇಲೆ ಇರುವ ಅಂಗಿ ಕೋಟುಗಳನ್ನು ಹಾಕಿಕೊಂಡು

ಮತ್ತೊಂದು ಕೋಣೆಗೆ ಸಾಗಿದನು. ಅದೊಂದು ವಿಶಾಲವಾದ ಪಡಸಾಲೆ. ನೋಡಿದರೆ ಕಣ್ಣೊಳಗೆ ತುಂಬುವಂಥದೊಂದು ಮೇಜು ಅಲ್ಲಿ. ನಿಟ್ಟಿಸಿದರೆ, ಸಿಂಹದ ಪಂಜರಗಳೇನೋ ಎಂಬುವಂಥ ಅದರ ಮುಂದೊಲಿದ ಕಾಲುಗಳು. ಅದರ ಮೇಲೊಂದು ಅದೇ ತಾನೇಗಂಜಿಯಾಗಿ ಬಂದಿರುವ ಬೆಳ್ಳನ್ನ ಕರೆ ಚಿಕ್ಕೆಯ ಬಟ್ಟೆ; ನಡುವೆಯೊಂದು ಸುಂದರವಾದ ಚಿತ್ರತೆಗೆದದ್ದು. ಒಂದು ಬೆಳ್ಳಿಯ ಪಾತ್ರೆಯಲ್ಲಿ ಘಮ ಘಮಿಸುವ ಕಾಫಿ, ಇನ್ನೊಂದರಲ್ಲಿ ಬರಿಯ ಸಕ್ಕರೆ, ಮತ್ತೊಂದರಲ್ಲಿ ಬಿಸಿಬಿಸಿ ಕೆನೆ, ಒಂದು ತಟ್ಟೆಯಲ್ಲಿ ಬಿಸ್ಕೀಟು ಮುಂತಾದ ಸಾಮಾನುಗಳು. ಅದರ ಹತ್ತಿರವೇ ಕೆಲ ಕಾಗದಪತ್ರಗಳು, ವೃತ್ತಪತ್ರಗಳು ಬಿದ್ದಿವೆ.

ನೆಕ್ಲ್ಯುಡವ್ವನು ಇನ್ನಿಷ್ಟರಲ್ಲಿಯೇ ಆ ಕಾಗದ ಪತ್ರಗಳನ್ನು ಒಡೆಯುವವನು; ಆಗ ಕೊಬ್ಬಿದ, ನಡುವಯಸಿನ ಒಬ್ಬ ಹೆಂಗಸು ಅಳು ಮುಖದಿಂದ ಮೆಲ್ಲಗೆ ಒಳಕ್ಕೆ ಕಾಲಿಟ್ಟಳು. ಈಕೆ ಮೊದಲು ನೆಕ್ಲ್ಯುಡವ್ವನ (ಡಿಮಿಟ್ರಿಯ) ತಾಯಿಯ ತೊತ್ತು; ಆಕೆ ಸತ್ತಮೇಲೆ ಅದೇ ಮನೆಯಲ್ಲಿ ತನ್ನ ಮಗನೊಡನೆ ಮನೆ ನೋಡಿಕೊಂಡಿದ್ದಳು. ಈಕೆಯು ನೆಕ್ಲ್ಯುಡವ್ವನ ತಾಯಿಯ ಸಹವಾಸದಲ್ಲಿ ಎಂಟು ಹತ್ತುವರ್ಷ ಕಳೆದದ್ದರಿಂದ ಸಭ್ಯಸ್ತ್ರೀಯರ ನಡೆನುಡಿಗಳನ್ನು ಚನ್ನಾಗಿ ಅರಿತಿದ್ದಳು. ಡಿಮಿಟ್ರಿಯು ಚಿಕ್ಕವನಿದ್ದಾಗಲೂ ಅವನನ್ನು ಎತ್ತಿಮುದ್ದಾಡಿಸಿದವಳು; ಆದುದರಿಂದ ಡಿಮಿಟ್ರಿಯನ್ನು ಚಿಕ್ಕಂದಿನ ಅಚ್ಚೆಯ ಹೆಸರಾದ 'ಮಿಟೆಂಕಾ' ಎಂಬ ಹೆಸರಿನಿಂದಲೇ ಕರೆಯುತ್ತಿದ್ದಳು ಆತನೀಗ ದೊಡ್ಡವನಾಗಿದ್ದ.

'ಗುಡ್‌ಮಾರ್ನಿಂಗ, ಡಿಮಿಟ್ರಿ ಇವ್ಹ್ಯಾನಿಚ್.'

''ಗುಡ್‌ಮಾರ್ನಿಂಗ, ಆಗ್ರಾಫೆನಾ ಪೆಟ್ರೊವ್ವನಾ! ಅದೇನು ಈಗ ಇತ್ತ ಬಂದದ್ದು.'' ಎಂದು ನೆಕ್ಲ್ಯುಡವ್ವನು ಕೇಳಿದ. ಇದೊಂದು ಕಾಗದ. ಕೆಲವು ಕಾಲದಿಂದ ನನ್ನ ಕೋಣೆಯಲ್ಲಿಯೇ ಬಿದ್ದಿತ್ತು. ರಾಜಪುತ್ರಿಯರಿಂದ ಬಂದಂತೆ ಕಾಣುತ್ತೆ ಎಂದು ಒಡನಗೆಯಿಂದ ಅವನ ಕೈಯಲ್ಲಿಟ್ಟಳು.

‘ ಒಳ್ಳೇದು, ಒಂದು ನಿಮಿಷ ತಡೆ ’ ಎಂದು ಅದನ್ನು ಕೈಯಲ್ಲಿ ತೆಕ್ಕೊಂಡು ಹುಬ್ಬುಗಂಟಿಕ್ಕಿ, ತನ್ನ ಮುಂದೆ ನಿಂತಿರುವ ಆಗ್ರಾಫೆನಾ ಪೆಟ್ರೊವ್ನನಳ ಮೇಲೆ ಕಡೆಗಣ್ಣು ಹಾಕಿದ. ಆಕೆಯ ತುಟಿಯಲ್ಲಿ ನಗು.

ಹಿಂದಿನ ದಿನ ಕುಳಿತುಕೊಳ್ಳಲಿಕ್ಕೆಂದು ಹೋದ ಇನಾಮದಾರ ಮನೆಯ ಅರಸುಗುವರಿಯ ಪತ್ರವಿದೆಂದು ಆಕೆಯ ನಗೆಯು ಹೇಳುತ್ತಿದ್ದಿತು. ಡಿಮಿಟ್ರಿಯು ಆಕೆಯನ್ನು ಮದುವೆಯಾಗಬೇಕೆಂದು ಈಕೆಯದೂ ಅಪೇಕ್ಷೆ; ಆದರೆ ಇದನ್ನು ಕಂಡು ಡಿಮಿಟ್ರಿಯ ಮನಸ್ಸು ಅದೇಕೋ ನೊಂದಿತು.

‘ ಹಾಗಾದರೆ, ಆಕೆ ಸ್ವಲ್ಪ ತಡೆಯಬೇಕು ’ ತನ್ನೊಳಗೆ ಎಂದನು ಕಾಗದ ತಂದವಳು ಲಗುಬಗೆಯಿಂದ ಕೋಣೆಯಿಂದ ಹೊರಟು ಹೋದಳು.

ಆಕೆ ಹೋದಬಳಿಕ ನೆಕ್ಲ್ಯುಡವ್ವನು ಮುಚ್ಚಳವನ್ನು ತೆರೆದು ನೋಡಿದ. ಒಳಗೊಂದು ಘಮಘಮಿಸುವ ಕಾಗದ, ಅದನ್ನು ಓದತೊಡಗಿದ. ಇಂಗ್ಲೀಷದಲ್ಲಿ ಬರೆದಿತ್ತು. “ ನಾನು ನಿಮಗೊಂದು ನೆನಪು ಕೊಡಬೇಕಾಗಿದೆ. ೨೮ನೆಯ ಎಪ್ರಿಲ ದಿನ ಜ್ಯೂರಿಯಾಗಿ ನಿಮಗೆ ಕೋರ್ಟಿಗೆ ಹೋಗಬೇಕಾದ್ದನ್ನು ನೀವು ಮರೆತಿರಲಿಕ್ಕಿಲ್ಲ; ಆದುದರಿಂದ ನೀವು ನಿಮ್ಮ ಸ್ವಭಾವಕ್ಕನುಸರಿಸಿ ನಮ್ಮ ಸಂಗಡ ಚಿತ್ರಶಾಲೆಗೆ ಬಂದೇ ತೀರುವ ಬಗ್ಗೆ ವಚನಕೊಟ್ಟಿದ್ದರೂ, ಅದಾಗದು. ನೀವು ನಮ್ಮ ಮನೆ ಬಿಟ್ಟು ಎದ್ದು ಹೋದಬಳಿಕ ನನಗೀ ಸಂಗತಿಯು ನೆನಪಾಯಿತು. ಮರೆಯದಿರಿ.” ಎಂಬುದು ಮುಖ್ಯ ಆ ಪತ್ರದ ಸಾರಾಂಶವಿದ್ದು ಕೆಳಗೆ ‘ ಅರಸುಕುವರಿ ಕೋರ್ಚಾಜಿನಾ ’ ಎಂದು ಅಂಕಿತವಿತ್ತು.

ಪತ್ರ ಓದಿ ಡಿಮಿಟ್ರಿಯು ಮುಖ-ಸೊಟ್ಟವಮಾಡಿದನು. ಕಳೆದ ಎರಡು ಮೂರು ತಿಂಗಳಿಂದ ಯಾರ ಕಣ್ಣಿಗೆ ಕಾಣದ ತನ್ನ ಮಾಯಾ ಜಾಲದೊಳಗೆ ಡಿಮಿಟ್ರಿಯನ್ನು ಮೆಲ್ಲಗೆ ಕಟ್ಟಿಹಾಕಬೇಕೆಂದು ಕೊರ್ಚಾಜಿನಳು ಬಹು ಚಾತುರ್ಯದಿಂದ ನಡಿಸಿದ ಇದೊಂದು ವ್ಯೂಹರಚನೆಯಾಗಿತ್ತು. ಡಿಮಿಟ್ರಿಯ ತಾರುಣ್ಯದ ಭರವು ಕೆಲಮಟ್ಟಿಗೆ ಕುಂದಿದ್ದರಿಂದ ಅವನಿಗೀಗ ಸ್ತ್ರೀವ್ಯಾಮೋಹವು

ಕಡಿಮೆಯಾಗಿತ್ತು; ಒಂದುವೇಳೆ, ಈಕೆಯಲ್ಲಿ ಪ್ರೇಮಾಂಕುರವು ಮತ್ತೆ ಚಿಗುರಿದ್ದರೂ ಒಮ್ಮೆಲೆ ಮದುವೆಗೆ ಒಪ್ಪದಿರಲಿಕ್ಕೆ ಕೆಲಕಾರಣಗಳಿದ್ದವು. ಹತ್ತುವರ್ಷಗಳಾಚೆ ಮಾಸ್ಲೋವಾಕಟೂಷಳನ್ನು ಕೆಡಿಸಿದ್ದೇನೂ ಇದಕ್ಕೆ ಕಾರಣವಿರಲಿಲ್ಲ. ತಿರುಗಿ, ಆವನದನ್ನೆಲ್ಲ ಮರೆತಿರುವಂತೆ ಮಾಡಿಬಿಟ್ಟದ್ದನು; ಆದುದರಿಂದ ಅವನು ಲಗ್ನವಾಗದಿರಲಿಕ್ಕೆ ಅದೊಂದು ಕಾರಣವಿರಲಿಲ್ಲೆಂಬುದು ಸ್ಪಷ್ಟ; ಆದರೆ ಲಗ್ನ ಒಲ್ಲೆನ್ನಲಿಕ್ಕೆ ಕಾರಣವೇನು ಅಂದರೆ, ಇನ್ನೊಬ್ಬ ಮದುವೆಯಾದ ಹೆಂಗಸಿನೊಡನೆ ಅವನು ಗುಪ್ತ ವ್ಯಭಿಚಾರ ನಡಿಸಿದ್ದುದು; ಇತ್ತೀಚೆ ಆ ಸಂಬಂಧವೂ ತಪ್ಪಿ-ಹೋದಂತೆ ಅವನು ತಿಳಿದಿದ್ದರೂ ಆಕೆ ಹಾಗೆ ತಿಳಿದಿರಲಿಲ್ಲ. ಹೀಗಿದ್ದರೂ, ಡಿಮಿಟ್ರಿಗೆ ಹೆಂಗಸರನ್ನು ಕಂಡರೆ ಅದೇಕೋ ನಾಚಿಕೆ; ಯಾವುದೋ ಒಂದು ಸಮಯದಲ್ಲಿ ಆ ಹೆಂಗಸಿನ ಬಲುಮೆಯಿಂದ ಪ್ರೇಮಪಾಶಕ್ಕೆ ಸಿಲುಕಿದ್ದನು. ಅದರ ಬಗ್ಗೆ ಅವನಿಗೆ ಆಗಾಗ್ಗೆ ತಾನು ಅಪರಾಧಿ ಎಂದೆನಿಸುತ್ತಿದ್ದರೂ, ಆಕೆಯ ಸಹವಾಸ ಬಿಡುವದು ಅವನಿಗೆ ಸಾಧ್ಯವಿರಲಿಲ್ಲ; ಆದರೆ ದಿನಗಳೆದಂತೆ ಆ ಪ್ರೇಮವು ಡಿಮಿಟ್ರಿಗೆ ಒಲ್ಲೆನಿಸಿ ಹೇಸಿಕೆ ಹುಟ್ಟಿಸಿತು; ಆದುದರಿಂದ ಅವನಿಗೆ ಮದುವೆ ಎಂದರೆ ಬೇಸರ. ಹೀಗಾಗಿ ಕೋರ್ಚಾಜಿನಳನ್ನು ಮದುವೆಯಾಗಬೇಕೆಂದು ಒಂದುವೇಳೆ ಮನಸಿನಲ್ಲಿ ಬಂದರೂ, ಹಾಗೆ ಬಾಯಿಬಿಟ್ಟು ಕೇಳಲಿಕ್ಕೆ ಅವನಿಗೆ ಧೈರ್ಯವಾಗುತಿರಲಿಲ್ಲ.

ಡಿಮಿಟ್ರಿಯ ಮೇಜಿನ ಮೇಲೆ ಬಂದು ಬಿದ್ದಿರುವ ಹಲವು ಪತ್ರಗಳಲ್ಲಿ ಗುಪ್ತವ್ಯಭಿಚಾರ ನಡಿಸಿದ ಆ ಹೆಂಗಸಿನ ಗಂಡನಿಂದಲೂ ಬಂದ ಒಂದು ಕಾಗದವಿತ್ತು, ಪಾಕೀಟಿನ ಮೇಲಿರುವ ಅವನ ಕೈ ಬರಹ, ಆ ಊರಿನ ಪೋಸ್ಟ ಮುದ್ರಿಕೆ ಇವುಗಳನ್ನು ನೋಡಿಯಂತೂ ಅವನ ಮುಖ ಕೆಂಪೇರಿ ಹಿಗ್ಗಿದಂತೆ ಕಂಡನು; ಆದರೆ ಅದು ಬಹಳೊತ್ತು ಉಳಿಯಲಿಲ್ಲ; ಯಾಕಂದರೆ, ತನ್ನ ಸಂಬಂಧವಿದ್ದವಳ ಗಂಡನು ಬರೆದ ಪತ್ರವದು. ಇಂತಿಂತಹ ದಿನ ಇಂಥಲ್ಲಿ ಬೋರ್ಡಿನ ಸಭೆ. ಅಂದು ಸಾರ್ವಜನಿಕ ಶಾಲೆ ಮತ್ತು ದಾರಿಗಳ ಬಗ್ಗೆ ವಿವಾದ ನಡೆಯುವದಿದ್ದು ವಿರುದ್ಧ ಪಂಗಡದವರೊಡನೆ ಲಗ್ಗೆ ಹತ್ತುವಂತಿದೆ; ಅದಕ್ಕೆ

ನೀವು ಆ ದಿನ ಬಂದೇ ತೀರಬೇಕೆಂದು ಬರೆದಿದ್ದನವನು. ಅವನಿಗೆ ಊರ ಉಸಾಬರಿಯ ಹುಚ್ಚು ವಿಶೇಷವಿದ್ದುದರಿಂದ ತನ್ನ ಮನೆಯಲ್ಲಿಯೇ ಏನು ಗದ್ದಲ ನಡೆದಿರುವದೆಂಬುದರ ಎಚ್ಚರ ಇರುತಿರಲಿಲ್ಲ.

ಅವನ ಕಾಗದ ಓದಿದೊಡನೆ ಡಿಮಿಟ್ರಿಗೆ ಹಿಂದಣ ಕೆಲ ಭೀಕರ ಸಂಗತಿಗಳು ನೆನಪಾದವು. ಒಂದು ದಿನ ಡಿಮಿಟ್ರಿಯು ಅವನ ಹೆಂಡತಿಯೊಡನೆ ಕೋಣೆಯಲ್ಲಿರುವಾಗಲೇ ಅವನ ಕೈಗೆಸಿಕ್ಕದ್ದು, ಆಗ ಅವನು ಬಾಯಿಗೆ ಬಂದಂತೆ ಒದರಾಡಿದ್ದು, ಅವನ ಹೆಂಡತಿಯು ಬಾವಿ ಹಾರಿಕೊಳ್ಳಲಿಕ್ಕೆಂದು ಓಡಿಹೋದ ಭಯಂಕರ ಪ್ರಸಂಗ, ತಾನೂ ಆಕೆಯನ್ನು ಹುಡುಕಲಿಕ್ಕೆ ಹೋದದ್ದು, ಇವೆಲ್ಲ ಕಣ್ಮುಂದೆ ಒಂದರ ಹಿಂದೊಂದು ಚಿತ್ರಪಟಗಳಂತೆ ಹಾಯ್ದು ಹೋಗಲಾರಂಭಿಸಿದವು.

'ಒಳ್ಳೇದು, ನನಗೇನೂ ಈಗ ಹೋಗಲಿಕ್ಕೆ ಸಾಧ್ಯವಿಲ್ಲ; ಆಕೆಯಿಂದಲೇ ಏನಾದರೂ ಕಾಗದ ಬಂದರೆ ನೋಡೋಣ' ಎಂದು ಡಿಮಿಟ್ರಿಯು ಯೋಚಿಸಿದನು; ಮೇಲಾಗಿ ಒಂದು ವಾರದಾಚೆಯೇ ಅವನು ಆಕೆಗೊಂದು ಕಾಗದ ಬರೆದು, ಅದರಲ್ಲಿ 'ನಿಮ್ಮೊಡನೆ ನಾನು ಅನೀತಿಯ ಸಂಬಂಧ ಬೆಳಸಿದ್ದು ತಪ್ಪು, ಅದಕ್ಕಾಗಿ ನನಗೆ ಈಗ ಪಶ್ಚಾತ್ತಾಪ. ಇನ್ನುಮುಂದೆ ನನ್ನ ನಿಮ್ಮ ಸಂಬಂಧ ಬೇಡ, ಹೀಗೆ ಮಾಡುವದರಲ್ಲಿ ನಿಮ್ಮದೇ ಹಿತವಿದೆ' ಎಂದು ಮುಂತಾಗಿ ತನ್ನ ಅಭಿಪ್ರಾಯ ತಿಳಿಸಿದ್ದನು. ಇದಕ್ಕೆ ಅವನಿಗೆ ಇನ್ನೂ ಆಕೆಯಿಂದ ಕಾಗದ ಬಂದಿರಲಿಲ್ಲ. ಆಕೆಗೆ ಇದು ಇಷ್ಟವಿರದಿದ್ದರೆ ಕೂಡಲೆ ಉತ್ತರ ಬರೆಯಬಹುದಾಗಿತ್ತು. ಇದು ಅಲ್ಲದೆ, ಆಕೆಯ ಮೇಲೆ ಇನ್ನೊಬ್ಬ ಯಾವನೋ ಆಫೀಸರನು ಕಣ್ಣಿಟ್ಟಿರುವನೆಂಬ ಸುದ್ದಿ ಇವನ ಕಿವಿಗೆ ಬಂದಿತ್ತು. ಇದರಿಂದ ಡಿಮಿಟ್ರಿಗೆ ಸ್ವಲ್ಪ ಹೊಟ್ಟೆಯಕಿಚ್ಚೆನಿಸಿದರೂ, 'ಈ ಪೀಡಾ ಒಮ್ಮೆ ನನ್ನ ಬೆನ್ನು ಬಿಟ್ಟರೆ ಸಾಕೆಂ'ದು ಅವನು ಮನಸಿನಲ್ಲಿಯೇ ಅಂದುಕೊಂಡ.

ಇದಾದ ಮೇಲೆ ಮತ್ತೊಂದು ಪಾಕೀಟ ಒಡೆದನು. ಅದು ಅವನ ಆಸ್ತಿಯ ಪಾರುಪತ್ಯಗಾರನದು. 'ಇತ್ತೀಚೆ ನಿಮ್ಮ ತಾಯಿ ತೀರಿಕೊಂಡ

ಮೇಲೆ ನೀವು ನಿಮ್ಮ ಹೊಲಮನೆ ಮುಂತಾದವುಗಳನ್ನು ನೋಡಲಿಕ್ಕೆ ಬಂದಿಲ್ಲ. ಈಗ ನೀವು ಒಮ್ಮೆಯಾದರೂ ಬಂದುಹೋಗುವದು ಅವಶ್ಯ. ನಿಮ್ಮ ತಾಯಿಯವರು ಇದ್ದಾಗಿನಂತೆ ನಾನೇ ಎಲ್ಲ ವ್ಯವಸ್ಥೆ ನೋಡ ಬೇಕೋ ಹೇಗೆ ? ಒಕ್ಕಲಿಗರಿಗೆ ಲಾವಣಿಯಿಂದ ಸಾಗು ಮಾಡಲಿಕ್ಕೆ ಕೊಟ್ಟಿ ರುವದರಲ್ಲಿ ಏನಾದರೂ ಹೆಚ್ಚುಕಡಿಮೆಮಾಡಬಹುದೇ ಹೇಗೆ? ನಾನಿನ್ನೂ ಸರ ಕಾರಕ್ಕೆ ತೆರಿಗೆ ತುಂಬಿಲ್ಲ. ಲಾವಣಿ ಹಿಡಿದವರಿಂದ ಇನ್ನೂ ಹಣ ಬಂದಿಲ್ಲ. ಅವರು ಅದೇಕೋ ಬಹು ತುಂಟಾಟ ನಡಿಸಿದ್ದಾರೆ. ನಂಬಿಗೆ ತಪ್ಪಿಹೋಗಿದೆ; ಆದುದರಿಂದ ಅಧಿಕಾರಿಗಳಿಗೆ ಅರಿಕೆಮಾಡಿಕೊಳ್ಳಬೇಕಾಗಿದೆ ಎಂಬುದು ಆ ಪತ್ರದ ಸಾರಾಂಶ. ಅದನ್ನೋದಿ ಡಿಮಿಟ್ರಿಗೆ ಅರ್ಧ ದುಃಖ, ಅರ್ಧ ಸಂತೋಷ. ತನಗೆ ಇಷ್ಟೊಂದು ಘನವಾದ ಆಸ್ತಿ ಇದೆ ಎಂದು ಸಂತೋಷ, ತಾನು ಹರ್ಬರ್ಟ ಸ್ಪೆನ್ಸರನ ಅನುಯಾಯಿ ಇದ್ದುದಕ್ಕಾಗಿ ದುಃಖ; ಏಕೆಂದರೆ, ಸ್ಪೆನ್ಸ ರನು ತನ್ನ ಗ್ರಂಥದಲ್ಲಿ ಮನುಷ್ಯನು ಸ್ವಂತ ಆಸ್ತಿ ಮಾಡಿಕೊಳ್ಳುವದು ಅನ್ಯಾಯವೆಂದು ಬೋಧಿಸುತ್ತಾನೆ; ಆದುದರಿಂದ ಭೂಮಿಯು ಮನುಷ್ಯನ ಸ್ವಂತ ಆಸ್ತಿ ಆಗಲರಿಯದೆಂದು ಡಿಮಿಟ್ರಿಯೂ ಕಾಲೇಜದಲ್ಲಿದ್ದಾಗ ಒಂದು ನಿಬಂಧ ಬರೆದು ಅದರಂತೆಯೇ ಈವರೆಗೆ ನಡೆದುಕೊಂಡಿದ್ದನು; ಇಷ್ಟೇ ಅಲ್ಲದೆ, ಈ ಬಗೆಯಾಗಿ ಭೂಮಿಗೆ ಒಡೆಯನಾಗುವದು ಶುದ್ಧ ಅನ್ಯಾಯ ವೆಂದು ಮನಗಂಡು ತನ್ನ ತಂದೆಯಿಂದ ತನಗೆ ಪ್ರಾಪ್ತವಾದ ಐದುನೂರು ಎಕರೆ ಭೂಮಿಯನ್ನವನು ಈ ಮೊದಲೇ ಒಕ್ಕಲಿಗರಿಗೇ ಬಿಟ್ಟುಕೊಟ್ಟಿದ್ದನು. ಈಗ ತಾಯಿಯ ಕಡೆಯ ದೊಡ್ಡ ಆಸ್ತಿಯು ಅವನ ಕೊರಳಿಗೆ ಬಂದು ಬಿದ್ದಿತ್ತು. ಇಂಥ ಪ್ರಸಂಗದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನರಿಯದೆ ಉಭಯ ಸಂಕಟದಲ್ಲಿದ್ದನು. ಹಿಂದೆ ತಂದೆಯ ಒಡೆತನದ ಭೂಮಿಗಳನ್ನು ಬಿಟ್ಟುಕೊಟ್ಟಂತೆ ಇವುಗಳನ್ನೂ ಬಿಟ್ಟರೆ, ತನಗೇನೂ ಆಧಾರವಿಲ್ಲದಾಗುವದು

ಬಿಡದಿದ್ದರೆ, ತಾನು ಸ್ಪೆನ್ಸರನ ಅನುಯಾಯಿ ಎಂಬುವ ಮಾತು ಸುಳ್ಳಾಗುವದು ಎಂಬುದೇ ಅವನಿಗೀಗ ಬಂದಡರಿದ ಚಿಂತೆ.

ಡಿಮಿಟ್ರಿಗೆ ಬೇರೆ ಕಡೆ ಎಲ್ಲಿಯೂ ಕೆಲಸಕ್ಕೆ ಸೇರಿಕೊಳ್ಳುವ ಅಪೇಕ್ಷೆ ಇರಲಿಲ್ಲ; ಅಂದ ಮೇಲೆ ಕೈಲಿದ್ದ ಭೂಮಿಗಳನ್ನು ಕಳೆದುಕೊಂಡು ಮಂಗನಾಗಿ ಕುಳ್ಳಿರುವದು ಅವನ ಮನಸಿಗೆ ಒಪ್ಪಲಿಲ್ಲ; ಮೇಲಾಗಿ, ಇದು ವರೆಗೆ ಅವನ ಆಯುಷ್ಯವೆಲ್ಲವೂ ಸಿರಿವಂತಿಕೆಯ ವಿಲಾಸ ವಿಹಾರಗಳಲ್ಲಿಯೇ ಕಳೆದುದರಿಂದ ಸಿರಿವಂತಿಕೆಯ ಚಟಗಳನ್ನು ಪೂರಾ ಬಿಟ್ಟಿರುವದು ಸಾಧ್ಯವಿರಲಿಲ್ಲ. ವಯಸು ಸಂದಿದಂತೆಲ್ಲ ಅವನ ಮನಸಿನ ನಿಶ್ಚಯ, ಏನಾದರೂ ಎಲ್ಲರಿಗಿಂತ ವಿಶೇಷ ಕಾರ್ಯ ಮಾಡಿ ತೋರಿಸಬೇಕೆಂಬ ಮಹತ್ವಾಕಾಂಕ್ಷೆ, ಇವೆಲ್ಲವು ಮೆಲ್ಲಗೆ ಅವನ ಮನೋಭೂಮಿಕೆಯಿಂದ ಮಾಯವಾಗತೊಡಗಿದ್ದವು.

ಡಿಮಿಟ್ರಿಯು ಕಾಫಿ ಕುಡಿದು ಅಲ್ಲಿಂದ ತನ್ನ ಓದುವ ಕೋಣೆಗೆ ಹೊರಟನು. ದಾರಿಯಲ್ಲಿರುವ ಚಿಕ್ಕ ಪಡಸಾಲೆಯ-ಗೋಡೆಯ ಮೇಲೆ ಕೆಲವು ಅರ್ಧ ಕೊರೆದು, ಕೆಲವು ಪೂರಾ ಕೊರೆದು ತೂಗುಹಾಕಿದ ಚಿತ್ರಗಳು ಅವನ ಕಣ್ಣಿಗೆ ಬಿದ್ದವು. ಒಂದಾನೊಂದು ಕಾಲಕ್ಕೆ ಚಿತ್ರಕಲೆಯಲ್ಲಿ ಡಿಮಿಟ್ರಿಗೆ ವಿಶೇಷ ಅಭಿರುಚಿ; ಆದರೆ, ಇತ್ತೀಚಿ ಆ ಅಭಿರುಚಿಯೆಲ್ಲವು ಅಡಗಿ, ಅವುಗಳನ್ನು ಕಂಡರೆ ಅವನಿಗೊಂದು ಬಗೆಯ ವ್ಯಸನ. ತಾನು ಒಂದಾನೊಂದು ಕಾಲಕ್ಕೆ ಕೈಯಿಂದ ಕೊರೆದು ಬಹಳ ದುಡ್ಡು ವೆಚ್ಚಮಾಡಿ ಅವುಗಳಿಗೆ ಸುಂದರವಾದ ಕಟ್ಟು-ಕನ್ನಡಿಗಳನ್ನು ಹಾಕಿಸಿಟ್ಟದ್ದನ್ನು ಕಂಡು, ಅವನಿಗೇನೋ ಈಗ ಔದಾಸೀನ್ಯ. ಇದೇ ಮನಃಸ್ಥಿತಿಯಲ್ಲಿಯೇ ಅವನು ತನ್ನ ಕೋಣೆಯಲ್ಲಿ ಹೊಕ್ಕನು. ತಾನು ಕುಳ್ಳಿರುವ ಮೇಜಿನ ಮಗ್ಗಲಲ್ಲಿಟ್ಟಿರುವ ಕಪಾಟಿನ ಒಂದು ಗೂಡಿನಲ್ಲಿ ಕೈ ಹಾಕಲು, ಒಂದು ಕಾಗದ ಕೈಗೆ ಬಂತು. ಅದರ ಮೇಲೆ

' ಕೂಡಲೆ ' ಎಂದು ಬರೆದಿತ್ತು. ತೆರೆದು ಓದಿದ. ಅದೊಂದು ಸಮನ್ಸು ಇತ್ತು. ಅದಕ್ಕಾಗಿ ಅವನಿಗೆ ಆ ದಿನವೇ ೧೧ ಗಂಟೆಗೆ ಕೋರ್ಟಿಗೆ ಹೋಗಬೇಕಾಗಿತ್ತು. ಅದಲ್ಲದೆ, ತನಗೆ ಹಿಂದಿನ ದಿನವೇ ಕಾಗದ ಬರೆದ ಕೋರ್ಚಾಜಿನಳಿಗೂ ಉತ್ತರ ಬರೆಯಬೇಕಾದ್ದರಿಂದ ಕುರ್ಚಿಯ ಮೇಲೆ ಕುಳಿತು ಆಕೆಗೊಂದು ಚೀಟಿ ಬರೆದನು; ಆದರೆ ಮನಸಿಗೆ ಬರದ್ದರಿಂದ ಒಂದೆರಡು ಸಲ ಹರಿದು ಹಾಕಿ, ತನ್ನ ಬಳಿಯಲ್ಲಿರುವ ಮಿಂಚಿನ ಗಂಟೆಯ ಗುಂಡಿಯನ್ನು ಬಟ್ಟೆನಿಂದ ಒತ್ತಿದನು. ಒಡನೆಯೇ, ಒಳಗಿನಿಂದ ಒಬ್ಬ ಆಳು ಬಂದನು.

ಡಿಮಿಟ್ರಿಯು ' ಒಂದು ಗಾಡಿಯನ್ನು ತರಲಿಕ್ಕೆ ಹೇಳು.' ಅಂದನು.

ಅವನು ' ಆಗಲಿ. ಸ್ವಾಮಿ. ' ಎಂದು ಹೊರಟನು.

' ಮತ್ತೆ, ಕೋರ್ಚಾಜಿನಳಿಂದ ಕಾಗದ ತೆಗೆದುಕೊಂಡು ಬಂದಿರುವವನಿಗೆ ನಾನು ಊಟಕ್ಕೆ ಬರಲು ಯತ್ನಮಾಡುವೆನೆಂದು ಹೇಳು; ಇಷ್ಟುಹೇಳಿ ಒಳಗೆ ಹೋಗಿ ಮೇಲಂಗಿ ತೆಗೆದುಕೊಂಡು ಬಂದನು. ಅಷ್ಟರಲ್ಲಿ ಬಾಗಿಲಲ್ಲಿ ಗಾಡಿಯು ಬಂದು ನಿಂತಿತ್ತು. ಡಿಮಿಟ್ರಿಯನ್ನು ನೋಡಿದ ಕೂಡಲೇ ಗಾಡಿಯವನು ' ಮೊನ್ನೆ ತಾವು ( ಕೋರ್ಚಾಜಿನ ) ರಾಣಿಯವರ ಮನೆಯಿಂದ ತಮ್ಮ ಮನೆಗೆ ಬರುವಷ್ಟರಲ್ಲಿ ಮತ್ತೆ ತಮ್ಮನ್ನು ಕರೆಯಲಿಕ್ಕೆಂದು ಬಂದಿದ್ದೆ ಬುದ್ಧೀ? ಅಂದನು. ' ಈ ಬಂಡಿಯವನಿಗೆ ಕೂಡ ಕೋರ್ಚಾಜಿನಳೊಡನೆ ಇರುವ ನನ್ನ ಸಂಬಂಧದ ವಿಷಯ ಗೊತ್ತಿರುವದಲ್ಲವೇ ? " ಎಂದುಕೊಂಡನು. ಇಷ್ಟಕ್ಕೆ ಆಕೆಯನ್ನು ತಾನು ಮದುವೆಯಾಗಬೇಕೋ ಬಾರದೋ ಎಂಬ ಹೊಯ್ದಾಟದಲ್ಲಿ ಮನಸು ಸಿಕ್ಕುಬಿಟ್ಟಿತು. ಯಾವುದೂ ಬಗೆ ಹರಿಯದಾಯಿತು.

ಮದುವೆಯಾಗುವದರಲ್ಲಿ ಒಂದು ವೈಶಿಷ್ಟ್ಯವೇನಂದರೆ, ಅದರಿಂದ ಮನುಷ್ಯನ ಅನ್ನಕ್ಕೊಂದು ದಿಕ್ಕು ಆಗುವದಲ್ಲದೆ ನೀತಿವಂತನಾಗಿರಲಿಕ್ಕೆ ಅನುವಾಗುವದು. ಮುಂದೆ ಮಕ್ಕಳು ಮರಿಗಳಾದರೆ, ಬುಡವಿಲ್ಲದ ಗಡಿಗೆಯಂತೆ ಎಲ್ಲಿ ಸಿಕ್ಕಲ್ಲೀಗ ಉರುಳಾಡುತ್ತಿರುವ ತನಗೊಂದು ಗುರಿಯಾಗಬಹುದೆಂದು ಆಸೆ; ಆದರೆ ವಯಸ್ಸಾದ ಮೇಲೆ ನಾನೀಗ ಮದುವೆಯಾದರೆ, ಆಕೆಯೂ **ಆ ಪಾಪಿ ಹೆಂಗಸಿನಂತೆ** ಸ್ವೇಚ್ಛೆಯಿಂದ ಗುಪ್ತ ವ್ಯಭಿಚಾರ ಮಾಡಹತ್ತಿದರೆ ಹೇಗೆಂಬುದೊಂದು ಹೆದರಿಕೆ ಅವನಿಗೆ.

ಇದೇ ಸಂದೇಹದ ತೂಗಾಟದೊಳಗೆ ಆ ಗಾಡಿಯು ಗಡ ಗಡ ನಡೆದಂತೆಲ್ಲ ತೂಗಾಡುತ್ತ ನಡೆದನು. 'ಯಾವುದನ್ನು ಮಾಡಿದರೂ ಸಂಕಟ' ವೆಂದು, 'ಆಗಲಿ, ಈಗ ಅದರ ಯೋಚನೆ ಬೇಡ. ಆಕೆಯಿಂದ ಉತ್ತರ ಬರಲಿ' ಎಂದು ನಿರ್ಧರಿಸುವ ಹೊತ್ತಿಗೆ ಗಾಡಿಯು ಕೋರ್ಟಿನ ಬಾಗಿಲಿಗೆ ಬಂದು ತಲ್ಪಿತು. ತಟ್ಟನೇ ಗಾಡಿಯಿಂದಿಳಿದು, ಅಲ್ಲಿ ನಿಂತಿರುವ ಕಾವಲುಗಾರನ ಸಲಾಮನ್ನು ಸ್ವೀಕರಿಸಿ, ಕೋರ್ಟಿನ ಮುಖ್ಯ ಮಂದಿರದ ಕಡೆಗೆ ಸಾಗಿದನು.



# ೪ ಕೋರ್ಟಿನಲ್ಲಿ.





ಕೋರ್ಟಿನ ಮುಂದಂಗಳದಲ್ಲೆಲ್ಲ ಜನರ ದಟ್ಟಣೆ. ಸಿಪಾಯರು ಕಾರಕೂನರು ಕಾಲುಗಳ ಸದ್ದುಮಾಡದೆ ಕೈಯಲ್ಲಿ ಕೋರ್ಟಿನ ಕಾಗದಪತ್ರ, ಸಮನ್ಸು ವಾರಂಟಗಳನ್ನು ಹಿಡಿದುಕೊಂಡು ಮೌನವಾಗಿ ಅವಸರದಿಂದ ಅತ್ತಲಿಂದಿತ್ತ, ಇತ್ತಲಿಂದತ್ತ ನಡೆದಾಡುತ್ತಿದ್ದರು. ವಕೀಲರು ಬ್ಯಾರಿಸ್ಟರರು ತಮ್ಮ ತಮ್ಮ ಕೆಲಸದ ಗಡಿಬಿಡಿಯಲ್ಲಿದ್ದರು. ವಾದಿ-ಪ್ರತಿವಾದಿಯರು ಮುಖ ಒಣಗಿಸಿಕೊಂಡು, ಚಿವುಟಿದರೆ ರಕ್ತವಿಲ್ಲದಂತೆ ಗೋಡೆಗೆ ಆತುಕೊಂಡು ಕುಳಿತಿದ್ದರು; ಕೆಲವರು ಯಾವಾಗ ತಮ್ಮ ವ್ಯಾಜ್ಯವು ನಡೆಯುವದೆಂದು ಆಕಳಿಸುತ್ತ ದಾರಿಕಾಯುತ್ತಿದ್ದರು.

'ಕೋರ್ಟಿನ ಕೆಲಸ ಎಲ್ಲಿ ನಡೆದಿದೆ?' ಎಂದು ಡಿಮಿಟ್ರಿಯು ಅಲ್ಲಿ ನಿಂತಿರುವ ಒಬ್ಬ ಸಿಪಾಯಿಯನ್ನು ಕೇಳಿದ.

'ಅದೋ! ಆ ಕೋಣೆಯಲ್ಲಿ ಸಿವ್ಹಿಲ್ ಕೋರ್ಟು! ಅದರಾಚೆ ಇದ್ದ ಕೋಣೆಯಲ್ಲಿಯೇ ಕ್ರಿಮಿನಲ್ ಕೋರ್ಟು!' ಎಂದು ಅವನು ಉತ್ತರ ಕೊಟ್ಟನು.

'ನಾನೊಬ್ಬ ಜ್ಯೂರಿ ಇದ್ದೇನೆ.' ಡಿಮಿಟ್ರಿಯು ಅಂದ.

ಸಿಪಾಯಿಯು 'ಕ್ರಿಮಿನಲ್ ಕೋರ್ಟಿಗೆ ಹೋಗಬೇಕಾಗಿದೆಯೋ ನಿಮಗೆ? ಹಾಗಾದರೆ, ಇಲ್ಲಿಂದ ಬಲಕ್ಕೆ ಹೋಗಿ, ಆ ಮೇಲೆ ಎಡಕ್ಕೆ ಹೊರಳಿದರೆ ಕಾಣುವ ಎರಡನೇ ಬಾಗಿಲವೇ ನಿಮ್ಮ ಕೋರ್ಟು.' ಡಿಮಿಟ್ರಿಯು ಅದರಂತೆ ಸಾಗಿದನು. ಆ ಬಾಗಿಲಲ್ಲಿ ಇಬ್ಬರು ಗೃಹಸ್ಥರು ಸುಮ್ಮನೆ ನಿಂತಿದ್ದರು. ಅವರಲ್ಲೊಬ್ಬ ಎತ್ತರ, ಕೊಬ್ಬಿದವ; ಮುಖದಲ್ಲಿ ದಯೆಯ ಕಳೆ. ಅವನೊಬ್ಬ ವರ್ತಕ. ಅದೇ ತಾನೇ ಫಲಾಹಾರ ಮಾಡಿ ಚಹಾ ಕಾಫಿ ಕುಡಿದು ಒಳ್ಳೇ

ಹುರುಪಿನಲ್ಲಿದ್ದನು. ಅವನ ಬಳಿನಿಂತಿರುವ ಮತ್ತೊಬ್ಬನು ಜಾತಿಯಿಂದ ಜ್ಯು. (ಯಹುದಿ) ಅದು ಕೂಡ ಅವನ ಮುಖ ಲಕ್ಷಣದಿಂದಲೇ ಕಾಣುತ್ತಿದ್ದಿತು. ಅವರಿಬ್ಬರಲ್ಲಿ ಉಣ್ಣೆಯ ಬೆಲೆಯ ಏರಿಳಿತದ ಬಗ್ಗೆ ಮಾತುಗಳು ನಡೆದಿದ್ದವು. ಡಿಮಿಟ್ರಿಯು ಅವರನ್ನು ನೋಡಿ ' ಇಲ್ಲಿ ಜ್ಯೂರಿಯವರು ಕೂಡ್ರುವ ಕೋಣೆ ಯಾವುದು? ಎಂದು ಕೇಳಿದ.

' ಇದೇ ! ' ಎಂದು ಒಬ್ಬನು ಮುಖದಿಂದ ಸನ್ನೆ ಮಾಡಿದ. ' ನೀವೂ ಒಬ್ಬರು ಜ್ಯೂರರರೊ ! ಎಂದು ವರ್ತಕನು ಕಣ್ಣು ಚಿಮುಟಿ ಕೇಳಿದ. ಡಿಮಿಟ್ರಿಯು ' ಅಹುದು ' ಎನಲು, ' ಹಾಗಾದರೆ, ನಾವೆಲ್ಲರೂ ಕೂಡಿಕೊಂಡೇ ಹೋಗೋಣಂತೆ, ಬನ್ನಿರಿ ' ಎಂದನು. ಅವರು ಮೂವರೂ ಕೆಲ ಹೊತ್ತು ನಿಂತುಕೊಂಡು ಮುಂದೆ ಒಳಗೆ ಹೊಕ್ಕರು.

ಆ ಕೋಣೆಯಲ್ಲಿ ಸುಮಾರು ಹತ್ತು ಜನರು ಇದ್ದು, ಕೆಲವರು ಆದೇ ತಾನೇ ಬಂದಿದ್ದರು. ಕೆಲವರು ಬಂದವರ ಗುರುತು ಒಬ್ಬರಿಗೊಬ್ಬರು ಮಾಡಿ ಕೊಡುತ್ತಿದ್ದರು. ಇನ್ನು ಕೆಲವರು ಹವೆ ಉದ್ಯೋಗಗಳನ್ನು ಕುರಿತು ಮಾತಾಡುತ್ತಿದ್ದರು.

ಡಿಮಿಟ್ರಿಯ ಗುರುತಿಲ್ಲದವರು ಅವನ ಗುರುತು ಮಾಡಿಕೊಳ್ಳುವದೊಂದು ಗೌರವವೆಂದು ತಿಳಿದು, ಗುರುತು ಮಾಡಿಕೊಳ್ಳಲಿಕ್ಕೆ ಹಾತೊರೆಯುತ್ತಿದ್ದರು. ಅಲ್ಲಿ ಕುಳಿತವರೆಲ್ಲರು ಅಹಂಮನ್ಯರೇ! ಅವರೆಲ್ಲರಿಗಿಂತ ಕೆಲವಂಶದಿಂದ ಡಿಮಿಟ್ರಿಯು ಶ್ರೇಷ್ಠನಿದ್ದರೂ, ಅವನು ಹಾಗೆ ಎಣಿಸಿರಲಿಲ್ಲ. ಇತ್ತೀಚೆ ಅವನ ಜೀವನಕ್ರಮವು ಅಷ್ಟೊಂದು ಪರೋಪಕಾರಿ ಇರಲಿಲ್ಲ. ಸ್ವರೋಚ್ಚಾರ ಪೂರ್ವಕ ಇಂಗ್ಲೀಷ, ಫ್ರೆಂಚ, ಜರ್ಮನ್, ಭಾಷೆಗಳನ್ನಾಡುವದು, ಒಳ್ಳೇ ನಯ ಮತ್ತು ಅಂದವಾದ ಉಣ್ಣೆಯ ಬಟ್ಟೆಗಳನ್ನು ದೊಡ್ಡ ದೊಡ್ಡ ಅಂಗಡಿ ಕಾರರಲ್ಲಿ ಹೆಚ್ಚು ಬೆಲೆಕೊಟ್ಟುಕೊಂಡು ಹಾಕಿಕೊಳ್ಳುವದು, ಇವುಗಳಿಂದೆಂದೂ ಮನುಷ್ಯನಿಗೆ ದೊಡ್ಡಸ್ತಿಕೆಯು ಬರಲಾರದೆಂಬದು ಅವನಿಗೆ ಗೊತ್ತಿತ್ತು; ಆದರೆ, ತನಗೆ ಶಿಗತಕ್ಕ ಯೋಗ್ಯ ಮರ್ಯಾದೆಯು ಕೂಡ ಕೊರ್ಟಿನಲ್ಲಿ ಸಿಗದ್ದದರಿಂದ ಅವನ ಮನಸು ನೊಂದಿತು. ತನ್ನೊಡನೆ ಕುಳಿತ ಜ್ಯೂರಿ

ಜನರಲ್ಲಿ ತನ್ನ ಅಕ್ಕನ ಮಕ್ಕಳಿಗೆ ಮೊದಲು ಕಲಿಸುತ್ತಿದ್ದ ಶಿಕ್ಷಕನೊಬ್ಬನಿದ್ದ. ಅವನ ಮುಖದ ಗುರುತು ಮಾತ್ರ ಇತ್ತು. ಅಡ್ಡಹೆಸರು ಗೊತ್ತಿರಲಿಲ್ಲ. ಈತನು ಈ ಕಾಲಕ್ಕೆ ಯಾವುದೋ ಒಂದು ಶಾಲೆಯಲ್ಲಿ ಶಿಕ್ಷಕನಿದ್ದ. ಅವನು ಹುಚ್ಚುಚ್ಚು ಸಲಿಗೆಯಿಂದ, ನಗೆಯಿಂದ, ಅಸಭ್ಯ ರೀತಿಯಿಂದ ನಡೆಯುವದು ಡಿಮಿಟ್ರಿಗೆ ಸರಿಬರಲಿಲ್ಲ. ' ಓಹೋ, ಇದೇನು? ನೀವೂ ಇದರೊಳಗೆ ಸಿಲುಕಿರುವಿರೋ ? ಎಂದು ಖೊಕ್ಕ ಖೊಕ್ಕ ನಗುತ್ತ ಅವನು ಡಿಮಿಟ್ರಿಗೆ ನಮಸ್ಕಾರ ಮಾಡಿ, ' ಅಂತೂ ಒಳ್ಳೇ ಬಲೆಯಲ್ಲಿ ಸಿಕ್ಕುಬಿಟ್ಟಿರಿ ನೀವು. ಇನ್ನೇನು ಪಾರಾಗುತ್ತೀರಿ " ? ಹೀಗೆ ಅಂದು ಪರಿಹಾಸ್ಯ ಮಾಡಿದ.

' ನಾನೇನು ಪಾರಾಗಬೇಕೆಂದು ಯತ್ನಿಸಿಲ್ಲ. ' ಎಂದು ಡಿಮಿಟ್ರಿಯು ಗಾಂಭೀರ್ಯದಿಂದ ನುಡಿದನು.

' ಸರಿ. ಅದಕ್ಕೇ ನಾನನ್ನುವದು ನೀವು ಪರೋಪಕಾರಿಗಳೆಂದು. ಆಗಲಿ. ಹಸಿವೆ ನೀರಡಿಕೆ ಆಗುವ-ವರೆಗೆ ತಡೆಯಿರಿ ! ಆಗ ನಿಮಗೆ ಬುದ್ಧಿ ಬರುವದು ಈಗೇಕೆ ಆ ಮಾತು ! ' ಎಂದು ಅವನು ಕೊಕ್ಕಿ ಮಾತು ಆಡಿದ.

ಜ್ಯೂರಿಯವರಲ್ಲಿ ಇನ್ನೊಬ್ಬನು ಬರದ್ದರಿಂದ ಅವನ ದಾರಿ ಕಾಯುತ್ತ ಎಲ್ಲರೂ ಅಲ್ಲಲ್ಲಿ ಮಾತಾಡುತಲೋ ಸೇದುತಲೋ ನಿಂತುಬಿಟ್ಟರು.

ಕೋರ್ಟಿನ ಅಧ್ಯಕ್ಷನು ಅದೇ ತಾನೇ ಬಂದನು. ಅವನೊಬ್ಬ ಕಲ್ಲೀಮೀಸೆಯ ಗಡುತರ ದೊಡ್ಡ ಆಳು. ಮದುವೆಯಾಗಿದ್ದರೂ, ಅವನ ಕಚ್ಚೆ ಸಡಿಲು; ಆದುದರಿಂದ ಅವನ ಹೆಂಡತಿಯೂ ಅದೇ ದಾರೀ ಹಿಡಿದಿದ್ದಳು. ಇದರಿಂದ ಅವನ ದಾರಿ ಅವನಿಗೆ, ಆಕೆಯ-ದಾರಿ ಆಕೆಗೆ. ಹೀಗೆ ಮನೆತನದ ಸ್ಥಿತಿ ಇತ್ತು. ಅದೇ ದಿನ ಆ ಅಧ್ಯಕ್ಷನಿಗೆ ಒಬ್ಬ ಸ್ವಿಸ್ ಕನ್ಯೆಯಿಂದ ಪ್ರೇಮದ ಓಲೆ ಬಂದಿದ್ದು, ಆಕೆಗವನು ಆ ದಿನ ಸಾಯಂಕಾಲ ಭೆಟ್ಟಿಯಾಗ ಬೇಕಾದ್ದರಿಂದ ಅವನ ಮನಸು ಅತ್ತಕಡೆಗೇ ಹರಿಯುತ್ತಿದ್ದಿತು. ಹೇಗಾದರೂ ಗಂಡಾಗುಂಡಿಮಾಡಿ ಕೆಲಸ ಮುಗಿಸಿ ಹೋಗುವ ಹವಣದಲ್ಲಿದ್ದನು. ಅವನು ತನ್ನ ಸ್ವಂತ ಕೋಣೆಯಲ್ಲಿ ಹೊಕ್ಕು ಅಲ್ಲಿಟ್ಟ ಡಂಬೆಲ್ಸುಗಳನ್ನು ಮೇಲಕ್ಕೆ

ಕೆಳಕ್ಕೆ, ಹಿಂದುಮುಂದೆ ತಿರುಗಿಸಿದಂತೆ ಮಾಡಿ, ಅವುಗಳನ್ನು ಅಲ್ಲಿಯೇ ಇರಿಸಿ ಹೊರಗೆ ಬಂದು, 'ನಿಮ್ಮನ್ನೆಲ್ಲ ಇಷ್ಟು ಹೊತ್ತು ದಾರಿ ಕಾಯಲು ಹಚ್ಚಿದಕ್ಕಾಗಿ ಕ್ಷಮಿಸಿರಿ' ಎನ್ನುತ್ತ ತನ್ನ ಉಚ್ಚಾಸನದ ಕಡೆಗೆ ನಡೆದನು

ಅಷ್ಟರಲ್ಲಿ ಚಿನ್ನದ ಕನ್ನಡಕ ಹಾಕಿಕೊಂಡು, ಸುಮ್ಮನೇ ಕುಳಿತು ಬೇಸತ್ತಿರುವ ಒಬ್ಬ ಗೃಹಸ್ಥನು ಮುಂಬಂದು, 'ಅವರಿನ್ನೂ ಬರಲೇ ಇಲ್ಲ.' ಎಂದು ಅಸಂತೋಷದ ದನಿಯಿಂದ ನುಡಿದನು. 'ಎಂದಾದರೂ ಅವರ ಹಾಡು ಇದೇ' ಎಂದು ಅಧ್ಯಕ್ಷನು ಅಧಿಕಾರದ ತನ್ನ ಉಡುಪು ತೊಟ್ಟು ನ್ಯಾಯಸ್ಥಾನದಲ್ಲಿ ಠೀವಿಯಿಂದ ಕುಳಿತನು.

'ಅವರಿಗೆ ಅದಂತು ನಾಚಿಕೆಯಾಗುವದಿಲ್ಲವೋ ಕಾಣೆ.' ಎಂದು ಆ ಗೃಹಸ್ಥನು ಸಿಡಿ ಸಿಡಿ ನುಡಿಯುತ್ತ, ಜೇಬಿನಿಂದ ಸಿಗರೇಟು ತೆಗೆದು ಹೊತ್ತಿಸುತ್ತ ಕುಳಿತನು.

ಅಷ್ಟರಲ್ಲಿ ಸಿರಸದಾರನು ಕೈಯ್ಯಲ್ಲಿ ಕಾಗದಪತ್ರಗಳನ್ನು ಹಿಡಿದುಕೊಂಡು ಬಂದು ಅಧ್ಯಕ್ಷನೆದುರಿಗಿರುವ ಮೇಜಿನ ಮೇಲಿರಿಸಿದನು ಬಹು ಮರ್ಯಾದೆಯಿಂದ.

ಕೈಲಿದ್ದ ಸಿಗಾರೇಟನ್ನು ಹೊತ್ತಿಸುತ್ತ 'ಹಂ, ಒಳ್ಳೇದಾಯಿತು. ಇಂದು ಯಾವ ವ್ಯಾಜ್ಯವನ್ನು ಮೊದಲು ನಡಿಸೋಣ' ಎಂದು ಅಧ್ಯಕ್ಷನು ಅವನ ಕಡೆ ನೋಡಿ ಕೇಳಿದ.

"ಇಷ್ಟವಿದ್ದರೆ, ಆ ವಿಷದ ವ್ಯಾಜ್ಯವನ್ನು ನಡಿಸಬಹುದು." ಎಂದು ಸಿರಸದಾರನು ಉಪೇಕ್ಷೆಯಿಂದ ಉತ್ತರವಿತ್ತನು.

'ಆಗಲಿ, ಅದನ್ನೇ ನಡಿಸೋಣ' (ಮನಸಿನಲ್ಲಿ) 'ಅಂದರೆ ನನಗೆ ಅದನ್ನು ತೀರಿಸಿಕೊಂಡು ಸಾಯಂಕಾಲಕ್ಕೆ ಬೇಗ ಆಕೆಯನ್ನು ಕಾಣಲಿಕ್ಕೆ ಹೋಗಲು ಸುಲಭವಾದೀತು.' ಅಂದುಕೊಂಡು 'ಮತ್ತೊಬ್ಬ ಜ್ಯೂರರು ಬಂದಿರುವರೇ?' ಎಂದು ಪ್ರಶ್ನ ಮಾಡಿದನು.

‘ ಇನ್ನೂ ಇಲ್ಲ. ’

‘ ಮತ್ತೆ, ಪಬ್ಲಿಕ್ ಪ್ರಾಸಿಕ್ಯೂಟರು? ’

‘ ಅವರು ಇಲ್ಲಿಯೇ ಇದ್ದಾರೆ. ’ ಎಂದು ಸಿರಸದಾರನು ಹೇಳಿದನು.

‘ ಹಾಗಾದರೆ ವಿಷದ ವ್ಯಾಜ್ಯವನ್ನು ನಡಿಸುವೆವೆಂದು ತಿಳಿಸಿ ಅವರನ್ನಿಲ್ಲಿ ಬೇಗ ಕರೆಸಿರಿ. ’ ಎಂದು ಸೂಚಿಸಿದನು.

ಪಬ್ಲಿಕ್ ಪ್ರಾಸಿಕ್ಯೂಟರನು ಅಷ್ಟರಲ್ಲಿಯೇ ತನ್ನ ಕಂಕುಳಲ್ಲಿ ಕಾಗದ ಪತ್ರಗಳದೊಂದು ಕಟ್ಟನ್ನು ಹಿಡಿದುಕೊಂಡು ಭರ ಭರನೆ ಕೈಬೀಸುತ್ತ ಬಂದನು.

‘ ತಮ್ಮನ್ನು ಅಧ್ಯಕ್ಷರು ಕೇಳಿದರು. ವ್ಯಾಜ್ಯದ ಕಾಗದ ಪತ್ರಗಳನ್ನು ನೋಡಿಕೊಂಡಿರುವಿರಷ್ಟೇ ? ಎಂದು ಸಿರಸದಾರ ಕೇಳಿದನು. ’

‘ ಹೋ. ಹೋ. ನಾನು ಸಿದ್ಧ. ಮೊದಲು ಯಾವ ವ್ಯಾಜ್ಯ ? ’

‘ ವಿಷ ತೆಗೆದುಕೊಂಡದ್ದು. ’

‘ ಅಡ್ಡಿ ಇಲ್ಲ. ಎಂದು ಸ್ವಲ್ಪ ಅನುಮಾನಿಸಿದನು; ಯಾಕಂದರೆ, ಮುನ್ನಾರಾತ್ರಿ ಅವನು ನಿದ್ದೆಕಟ್ಟೆ ಯಾವುದೊ ಒಂದು ಹಾಟೆಲಿನಲ್ಲಿ ಇಸ್ಪೇಟು ಆಡುವದರಲ್ಲಿ ಕಾಲಕಳೆದಿದ್ದ. ಅದರಿಂದ ವಿಷದ ವ್ಯಾಜ್ಯದ ಕಾಗದ ಪತ್ರಗಳನ್ನು ನೋಡಲಿಕ್ಕಾಗಿರಲಿಲ್ಲ ಅವನಿಗೆ; ಹೀಗಿದ್ದರೂ, ವಿಷದ ವ್ಯಾಜ್ಯವನ್ನೇ ನಡಿಸೋಣ, ಎಂದು ಸಿರಸದಾರನು ಅಧ್ಯಕ್ಷನಿಗೆ ( ನ್ಯಾಯಾಧೀಶ ) ಸೂಚಿಸಿದ. ’

‘ ಎಲ್ಲ ಜ್ಯೂರಿಯರು ಬಂದಿರುವರೋ ’ ಎಂದು ನ್ಯಾಯಾಧೀಶನು ಕೇಳಿದ.

‘ ಹೌದು, ಎಲ್ಲರೂ ಬಂದಿದ್ದಾರೆ. ’

‘ ಒಳ್ಳೇದು. ನೋಡೋಣ ಯಾರ್‍ಯಾರು ಬಂದಿರುವರು ? ’ ಎಂದು ತನ್ನ ಜೇಬಿನಲ್ಲಿರುವ ಪಟ್ಟಿಯನ್ನು ಹೊರಕ್ಕೆ ತೆಗೆದು, ಒಮ್ಮೊಮ್ಮೆ ತನ್ನ ಕನ್ನಡಕದೊಳಗಿಂದ ಕುಳಿತ ಜನರನ್ನು ನೋಡುತ್ತ, ಒಬ್ಬೊಬ್ಬರ ಹೆಸರು ಓದಹತ್ತಿದ.

‘ ಲೆಫ್ಟಿನಂಟ, ಪ್ರಿನ್ಸ ಡಿಮಿಟ್ರಿ ನೆಕ್ಲ್ಯುಡವ್ಹ ’ ಅಂದನು.

‘ ನಾನೇ ಸ್ವಾಮಿ, ’ ಎಂದು ಡಿಮಿಟ್ರಿಯು ಉತ್ತರ ಕೊಟ್ಟ. ಜ್ಯೂರಿಯವರಲ್ಲಿ ಇಬ್ಬರು ಮಾತ್ರ ಬಂದಿರಲಿಲ್ಲ.

‘ ಆಗಲಿ, ಇನ್ನು ಕೆಲಸ ನಡಿಸೋಣ, ’ ಎಂದು ಒಬ್ಬ ಜ್ಯೂರಿ ಅಂದನು. ನ್ಯಾಯಾಧೀಶನು ತನ್ನ ಮೇಜಿನ ಮೇಲೆ ಇಟ್ಟಿರುವ ಕೆಲವು ಕಾಗದಗಳನ್ನು ಓದಿ ನೋಡಿ, ಸಿರಸದಾರನಿಗೆ ಕೆಲವು ಪ್ರಶ್ನೆ ಕೇಳಿ, “ ಹಾಗಾದರೆ, ಸೆರೆಯಾಳುಗಳನ್ನು ಕರೆತರಿಸಿರಿ ” ಅಂದನು.

“ ಕೂಡಲೆ, ಹಿಂಬಾಗಿಲು ತೆರೆಯಿತು. ಕೈಯಲ್ಲಿ ಬಿಚ್ಚುಗತ್ತಿಗಳನ್ನು ಹಿಡಿದ ಇಬ್ಬರು ಸೀಪಾಯರು, ಅವರ ಹಿಂದಿಂದೆ ಸೆರೆಯಾಳುಗಳು ಒಳಗೆ ಬಂದರು. ಅವರಲ್ಲಿ ಒಬ್ಬ ಗಂಡಸು, ಇಬ್ಬರು ಹೆಂಗಸರು. ಗಂಡಸಿನ ಮೈಯಲ್ಲಿ ಕಾಲುಗಳ ವರೆಗೆ ಇಳಿದಂಥ ಸಡಿಲಾಗಿರುವ ಸೆರೆಮನೆಯ ಉದ್ದಂಗಿ. ಅವನ ಕಣ್ಣೆಲ್ಲ ಮುಂದೆ ಕುಳಿತವರ ಮೇಲೆ ಇತ್ತು. ಮೆಲ್ಲಗೆ ಬಂದು ಕೊಂಚ ಮಗ್ಗಲಿಗೆ ಹೋಗಿ, ಅಲ್ಲಿಟ್ಟಿರುವ ಒಂದು ಬೆಂಚಿನ ತುದಿಗೆ ಕುಳಿತು ನ್ಯಾಯಾಧೀಶನನ್ನೇ ನಿಟ್ಟಿಸಿ ನೋಡಹತ್ತಿ, ತನ್ನ ತುಟಿಯೊಳಗೆ ಏನೇನೋ ಗುಣಗುಡಹತ್ತಿದ. ಇವನ ಹಿಂದಿನಿಂದ ಬಂದ ಹೆಂಗಸಿನ ಮೈಯಲ್ಲಿಯೂ ಸೆರೆಮನೆಯ ಉದ್ದಂಗಿ ಇದ್ದು, ಸೆರೆಮನೆಯದೇ ಒಂದು ಕರವಸ್ತ್ರವನ್ನಾಕೆ ತಲೆಗೆ ಸುತ್ತಿದ್ದಳು. ಆಕೆಯ ಮುಖದ ಮೇಲೆ ಶಾಂತಕಳೆ ಇದ್ದರೂ, ಬಾಣಂತಿಯಂಥ ಬಣ್ಣ ಬಂದಿತ್ತು.

ಮೂರನೆಯವಳೇ ಮಾಸ್ಲೋವಾ ಕಟೂಷಳು. ಆಕೆ ಕೋರ್ಟಿನಲ್ಲಿ ಕಾಣಿಸಿಕೊಂಡೊಡನೆ, ಆಕೆಯ ಬಿಳುಪಾದ ಮುಖದಲ್ಲಿ ಲಕಲಕೆಂದು ಹೊಳೆಯುತಿರುವ ಕರ್‍ರನ್ನ ಚುರುಕಾದ ಕಣ್ಣುಗಳು, ಸೆರೆಮನೆಯ ಉದ್ದಂಗಿಯೊಳಗಿಂದ ಮುಂದೆ ಸೆಟೆದಿರುವ ಆ ಎದೆ, ಇವು ಎಲ್ಲರ ಕಣ್ಣುಗಳನ್ನು ಸೆರೆವಿಡಿದವು. ಎಲ್ಲರೂ ಆಕೆಯನ್ನೇ ಟಕ್‌ಹಚ್ಚಿ ನೋಡಹತ್ತಿದರು. ತನ್ನ ಜೊತೆಯ ಸೆರೆಯಾಳುಗಳಂತೆ ಆಕೆಯೂ ಬಂದು ಒಂದೆಡೆ ಕುಳಿತಳು.

ಎಲ್ಲರೂ ತಂತಮ್ಮ ಸ್ಥಳಗಳಲ್ಲಿ ಕುಳಿತ ಬಳಿಕ ನ್ಯಾಯಾಧೀಶನು ಸಿರಸದಾರನಕಡೆ ತಿರುಗಿ ನೋಡಿದನು. ಆಮೇಲೆ ಜ್ಯೂರಿಯವರನ್ನೆಣಿಸುವದು, ಬರದವರಿಗೆ ದಂಡ ಕಟ್ಟುವದು, ಪ್ರತಿಜ್ಞೆ ಮಾಡುವದು, ಅವೇ ಮುಂತಾದ ಕೆಲಸಗಳು ನಡೆದವು. ತರುವಾಯ ನ್ಯಾಯಾಧೀಶನು ಜ್ಯೂರಿಯವರಲ್ಲೊಬ್ಬ ಮುಖ್ಯಸ್ಥನನ್ನಾರಿಸಲಿಕ್ಕೆ ಹೇಳಿದನು.

ಆ ಮೇಲೆ ನ್ಯಾಯಾಧೀಶನು ಜ್ಯೂರಿಯವರ ಹಕ್ಕು ಹೊಣೆಗಾರಿಕೆಯನ್ನು ಕುರಿತು ಚಿಕ್ಕದೊಂದು ಉಪದೇಶಪರ ಉಪನ್ಯಾಸವನ್ನೇ ಕೊಟ್ಟು ‘ ನ್ಯಾಯದಲ್ಲಿ ಕಣ್ಣಿಟ್ಟು ಕೆಲಸ ಮಾಡುವವೇ ಜ್ಯೂರಿಗಳ ಪವಿತ್ರ ಕರ್ತವ್ಯ. ನ್ಯಾಯದ ತಕ್ಕಡಿಯನ್ನು ಕೈಯಲ್ಲಿ ಹಿಡಿದಿರುವಾಗ ‘ ಇದು ನನ್ನದು, ಅದು ಅವರದು, ಇವರು ನನ್ನವರು, ಅವರು ತನ್ನವರು ಇಂಥ ಮೋಹಕ್ಕೆ ಸಿಲುಕಲಾಗದು. ನ್ಯಾಯುವೆಂಬುದು ಆಡಲಿಕ್ಕೆ ಮಾಡಲಿಕ್ಕೆ ವಿಷದಂತಿದ್ದರೂ ಅದನ್ನವಲಂಬಿಸಿದವರಿಗೆ ಸಾವಿಲ್ಲ. ಎಂದು ಬಹು ಗಾಂಭೀರ್ಯದಿಂದಲೂ, ತನ್ನ ಅಧಿಕಾರದ ಆಢ್ಯತೆಯಿಂದಲೂ ಆಡಿ ಮಾತು ಮುಗಿಸಿದನು. ಎಲ್ಲರೂ ಬಹು ಮರ್ಯಾದೆಯಿಂದ ಅದನ್ನೆಲ್ಲ ಕೇಳಿಕೊಂಡರು. ಜ್ಯೂರಿಯವರು ತಲಿದೂಗಿ ತಮ್ಮ ಒಪ್ಪಿಗೆ ತೋರಿಸಿದಂತೆ ಮಾಡಿದರು.

ಆ ನಂತರ ವಿಚಾರಣೆಗೆ ಪ್ರಾರಂಭವಾಯಿತು. ನ್ಯಾಯಾಧೀಶನು ತನ್ನ ಎದುರಿನಲ್ಲಿ ನಿಂತಿರುವ ಸೆರೆಯಾಳುಗಳ ಕಡೆಗೆ ಕಣ್ಣುತಿರುಗಿಸಿ, ಇಬ್ಬರು ಸೆರೆಯಾಳುಗಳ ಹೆಸರು ದಸಿ, ಎಲ್ಲಿಯವರು, ಏನು ಉದ್ಯೋಗ, ಹಿಂದಕ್ಕೇನಾದರೂ ಶಿಕ್ಷೆಯಾಗಿತ್ತೋ ಹೇಗೆ ಮುಂತಾದ ಪ್ರಶ್ನೆಗಳನ್ನು ಹಾಕಿದನು. ಕೊನೆಗೆ ಮಾಸ್ಲೋವಳ ಸರತಿ ಬಂತು.

‘ಹುಂ. ನಿನ್ನ ಹೆಸರು? ಎಂದು ಗೌರವ ದೃಷ್ಟಿಯಿಂದ ನ್ಯಾಯಾಧೀಶನು ಮಾಸ್ಲೋವಳನ್ನು ಕೇಳಿದ.’ ಆಕೆ ಕುಳಿತುಕೊಂಡೇ ಉತ್ತರ ಹೇಳುವವಳು; ಆದರೆ ನ್ಯಾಯಾಧೀಶನು ‘ ಎದ್ದುನಿಂತು ಹೇಳಬೇಕು ’ ಎಂದು ಎಚ್ಚರಿಕೆ ಕೊಟ್ಟ.

ಏಳುವಾಗ ಮಾಸ್ಲೋವಳಿಗೆ ಕೊಂಚ ನಾಚಿಕೆ ಎನಿಸಿದರೂ, ಚಟ್ಟನೇ ಎದ್ದು, ತನ್ನ ನಿತ್ಯದ ವಾಡಿಕೆಯಂತೆ ಎದೆ ಸೆಟೆಸಿಕೊಂಡು ನಿಂತು, ತನ್ನ ಎಳನಗುವಿನಿಂದ ಎಲ್ಲರ ಮನಸಿನಲ್ಲಿ ಆನಂದದ ಅಲೆಗಳನ್ನು ಉಕ್ಕಿಸುತ, ಮುಖವನ್ನರಳಿಸುತ್ತ 'ನನ್ನ ಹೆಸರು ಲುಬವ್ಹ' ಎಂದು ತಟ್ಟನೆ ಹೇಳಿದಳು.

ಕನಡಕ (ಚಾಳೀಸು) ಹಾಕಿಕೊಂಡು ನೆಕ್ಲ್ಯುಡವ್ಹನು (ಡಿಮಿಟ್ರಿಯು) ಈ ಪ್ರಶ್ನೋತ್ತರಗಳನ್ನೆಲ್ಲ ಕೇಳುತ್ತಿದ್ದ ಹಾಗೆ ತನ್ನೊಳಗೆ ತಾನೆ 'ಅಲ್ಲ. ಇದಲ್ಲ ಈಕೆಯ ಹೆಸರು' ಎಂದು ಕೊಂಡನು.

ನ್ಯಾಯಾಧೀಶನು ಇನ್ನೇನೇನೋ ಪ್ರಶ್ನೆಗಳನ್ನು ಕೇಳುವವನು; ಆದರೆ, ನಡುವೆ ಕನಡಕದವನು ಸಿಟ್ಟಿನಿಂದ ಪಿಸುಗುಟ್ಟುತ್ತ ಅವನಿಗೆ ಅಡ್ಡಿ ಮಾಡಿದನು; ಆದರೆ, ಅವನು ಹಾಗೇ ತಲೆಯಲ್ಲಾಡಿಸಿದಂತೆ ಮಾಡಿ 'ಇದೇನು; ನಿನ್ನ ಹೆಸರು ಇಲ್ಲಿ ಹಾಗೆಂದು ಬರೆದಿಲ್ಲವಲ್ಲಾ ?' ಎಂದು ಪ್ರಶ್ನೆ ಹಾಕಿದನು. ಆಕೆ ಏನೂ ಮಾತಾಡಲಿಲ್ಲ.

'ನನಗೆ ನಿನ್ನ ನಿಜವಾದ ಹೆಸರು ಬೇಕು.' ಎಂದನು ನ್ಯಾಯಾಧೀಶನು.

'ನನಗೆ ಮೊದಲು ಕ್ಯಾಟರಿನಾ, ಎಂದು ಕರೆಯುತ್ತಿದ್ದರು.'

'ಎಂದೂ ಇಲ್ಲ. ಇದೆಲ್ಲ ಸುಳ್ಳು' ಎಂದು ಡಿಮಿಟ್ರಿಯು ತನ್ನಲ್ಲಿಯೇ ತಾನು ಅಂದುಕೊಂಡ; ಮತ್ತು ಹತ್ತೆಂಟು ವರ್ಷಗಳಾಚೆ ತನ್ನೊಡನೆ ಸಂಬಂಧ ಬೆಳಸಿದ ಜಮೀನದಾರ ಒಡತಿಯರ ಸಾಕ-ಮಗಳು ಈಕೆಯೇ ಎಂದು, ತಾನು ಆಕೆಯನ್ನು ಪ್ರೀತಿಸಿ ಕೆಡಿಸಿದ್ದು, ಆಕೆಯ ಕೈಯಲ್ಲಿ ನೋಟುಗಳನ್ನು ಕೊಟ್ಟದ್ದು, ಪುನಃ ತಾನು ಆಕೆಯ ವಿಷಯ ನೆನಪಿಗೆ ಸಹ ತಾರದೆ ಇದ್ದುದು, ಅವೇ ಮುಂತಾದ ಘಟನಾವಳಿಗಳೆಲ್ಲ ಒಂದರ ಹಿಂದೊಂದು ಅವನ ಕಣ್ಮುಂದೆ ಹಠಾತ್ತಾಗಿ ಬಂದು ಬಂದು ನಿಂತವು. ಇಂದಿನವನು ಅಂದಿನವನಾದನು.

'ಹೌದು. ಆಕೆಯೇ ಇವಳು. ಎಂಟು ಹತ್ತು ವರ್ಷಗಳಿಂದ ಇತ್ತೀಚೆ ಸ್ವಲ್ಪ ಮೈತುಂಬಿಕೊಂಡು, ಮುಖದ ಮೇಲೆ ಕೊಂಚ ಅನಾರೋಗ್ಯದ ಕಳೆ ಬೆಳದಿದ್ದರೂ, ಒಟ್ಟು ಆಕೆಯ ಮುಖಲಕ್ಷಣದಲ್ಲಿಯ ಸವಿಯು ಹೋಗಿಲ್ಲ.

ತಿದ್ದಿಮಾಡಿದ ಗದ್ದ ತುಟಿ ಲಕ ಲಕ ಹೊಳೆಯುವ ಕಣ್ಣುಗಳು, ಆಗ ಕಂಡು ಬಂದು ಮನಸಿನಲ್ಲಿ ಮೂಡಿದ ಆ ವಿಶಿಷ್ಟ ಸೌಂದರ್ಯವು ಇನ್ನೂ ಅಳಿದಿಲ್ಲ.'

ಎಂದು ಡಿಮಿಟ್ರಿಯು ತನ್ನ ಮನದ ಆಳದಲ್ಲಿ ಅಳೆಯಹತ್ತಿದನು. ಇತ್ತ ನ್ಯಾಯಾಧೀಶನು ಆಕೆಯ ಹೆಸರು, ಅಡ್ಡ ಹೆಸರು, ಉದ್ಯೋಗಗಳನ್ನು ಕೇಳಿದಂತೆಲ್ಲ ನಮ್ಮ ಡಿಮಿಟ್ರಿಯ ಮನಸು ಆ ವಿಷಯದ ಹಿಂದಿಂದೆ ಉತ್ಸುಕವಾಗಿ ಓಡಹತ್ತಿತು.

'ಒಳ್ಳೇದು. ನಿನ್ನ ಉದ್ಯೋಗವೇನು' ಎಂದು ಕೇಳಿದ.

'ಒಂದು ಕಾರಖಾನೆಯಲ್ಲಿ' ಅಂದಳು.

'ಎಂಥ ಕಾರಖಾನೆ?' ಎಂದು ಕನಡಕದವನು ಬಹು ಗದರಿಸಿ ಕೇಳಿದ.

'ನಿಮಗೇ ಗೊತ್ತು?' ಎಂದು ರೊಚ್ಚಿನಿಂದ ನಕ್ಕಳು; ಆ ಮೇಲೆ ಕಿಡಿಗಣ್ಣಿನಿಂದ ಸುತ್ತೆಲ್ಲ ದುರುದುರು ದೃಷ್ಟಿಹೊರಳಿಸಿ, ನ್ಯಾಯಾಧೀಶನನ್ನೇ ನೋಡ ಹತ್ತಿದಳು. ಆಗ ಆಕೆಯ ಮುಖ ಲಕ್ಷಣವೇ ಒಂದು ಬಗೆ ಆಯಿತು. ಆಕೆ ಆಡಿದ ನುಡಿ, ನಕ್ಕ ನಗೆಯಲ್ಲಿ ಕರುಣ ಮತ್ತು ಭಯದ ರಸಗಳು ಒಡ ಮೂಡಿ ಹೊರಸೂಸಿದಂತಿದ್ದವು. ನ್ಯಾಯಾಧೀಶನ ಮುಖದ ನೀರಿಳಿಯಿತು, ಕೋರ್ಟಿನಲ್ಲಿ ಸ್ತಬ್ಧವಾಯಿತು. ಯಾರ ಬಾಯಿಂದಲೂ ಉಸುರೇಳಲಿಲ್ಲ ಕೆಲ ನಿಮಿಷಗಳವರೆಗೆ. ಆ ಮೇಲೆ ನ್ಯಾಯಾಧೀಶನೇ ಸ್ವಲ್ಪ ಸಾವರಿಸಿಕೊಂಡು 'ಸರಿ. ಎಂದಾದರೂ ನಿನ್ನ ಮೇಲೆ ಖಟ್ಲೆ ಆಗಿತ್ತೋ?' ಎಂದು ವಿಚಾರಿಸಿದ.

'ಎಂದೂ ಇಲ್ಲ.' ಎಂದು ಮಾಸ್ಲೋವಳು ಮೆತ್ತಗೆ ಹೇಳಿ ನಿಟ್ಟು ಸಿರು ಬಿಟ್ಟಳು.

'ನಿನ್ನ ಮೇಲೆ ಯಾತರ ದೆಸೆಯಿಂದ ಖಟ್ಲೆ ಹಾಕಿರುವರೆಂಬುದು ಗೊತ್ತಿದೆಯೋ?' ಎಂದು ಪ್ರಶ್ನ ಮಾಡಿದ.

'ಗೊತ್ತಿದೆ.' ಎಂದಳು.

'ಒಳ್ಳೇದು ಕುಳಿತುಕೋ ಎಂದನು ನ್ಯಾಯಾಧೀಶ. ಇಷ್ಟರಲ್ಲಿ ಬೇರೆ ಸಾಕ್ಷಿಗಾರರು, ಡಾಕ್ಟರು, ಸಾಕ್ಷಿಗಾಗಿ ಬಂದರು. ತರುವಾಯ, ಸಿರಸದಾರನು

ಎದ್ದುನಿಂತು, ಆಕೆಯ ಮೇಲೆ ಹಾಕಿದ ಖಟ್ಲೆಯ ಕಾರಣಗಳನ್ನು ಕೈಯಲ್ಲಿ ಕಾಗದ ಹಿಡಿದು ಮೆಲ್ಲಗೆ ಸ್ಪಷ್ಟವಾಗಿ ಚಾಚು ಅನ್ನದೆ ಓದಿಮುಗಿಸಿದ. ಸೈಬೀರಿಯಾದ ಒಬ್ಬ ಸಿರಿವಂತ ವರ್ತಕನನ್ನು ವಿಷ ಹಾಕಿ ಕೊಂದು, ಅವನಲ್ಲಿದ್ದ ವಜ್ರದುಂಗುರ ಹಣ ಮುಂತಾದ್ದನ್ನು ಕದ್ದ ಆರೋಪವಿದೆ ಈಕೆಯ ಮೇಲೆ ಎಂದನು. ಮಾಸ್ಲೋವಳು ಅತ್ತಿತ್ತ ಅಲ್ಲಾಡದೆ ಸುಮ್ಮನೆ ಕುಳಿತಿದ್ದರೂ, ಇಷ್ಟರಲ್ಲಿ ಒಂದೆರಡು ಸಲ ಆಕೆಯ ಮುಖ ಕೆಂಪೇರಿ, ಉಸ್, ಉಸ್ ಎಂದು ತೊಡೆಯ ಮೇಲಿಟ್ಟ ಕೈಗಳನ್ನು ತೆಗೆದು ತಿಕ್ಕಿಕೊಳ್ಳಹತ್ತಿದಳು. ಜ್ಯೂರಿಯ ಜನರಲ್ಲಿ ಡಿಮಿಟ್ರಿಯು ಮುಮ್ಮಗ್ಗಲಿನ ಸಾಲದಲ್ಲಿಯೇ ಎತ್ತರ ಬೆನ್ನಾಸರದ ಕುರ್ಚಿಯ ಮೇಲೆ ಕುಳಿತಿದ್ದ. ಈಗ ಔದಾಸೀನ್ಯದಿಂದ ಅವನ ಕಣ್ಣೆಲ್ಲ ಮಾಸ್ಲೋವಳ ಮುಖದಲ್ಲಿಯೇ ನೆಟ್ಟಿದ್ದರೂ, ಮನಸಿನಲ್ಲಿ ಭೀಕರ ಕ್ಷೋಭೆ. ಇನ್ನು ಬೇಗನೇ ವಿಚಾರಣೆ ನಡೆದು ಏನೆಂಬುವ ತೀರ್ಪು ಆಗಿಯೇ ತೀರುವದೆಂದು ಎಲ್ಲರೂ ದುಃಖದಿಂದ ಉಸುರ್ಗರೆದರು. ಡಿಮಿಟ್ರಿಯು ಮಾತ್ರ ಹಿಂದಿನ ವಿಚಾರದಲ್ಲಿಯೇ ಮುಳುಗಿ ಹೋದನು. ಮಾಸ್ಲೋವಳಂಥ ನಿರ್ಮಲ ಮನಸಿನ ಮತ್ತು ಮನೋಹರ ಲಾವಣ್ಯದ ಹೆಣ್ಣಿನಿಂದ ಇಂಥ ಭಯಂಕರ ಕಾರ್ಯವು ಅದೆಂತು ಒದಗಿರಬಹುದೆಂಬುದೇ ಅವನ ಯೋಚನೆ.

ಇತ್ತ, ನ್ಯಾಯಾಧೀಶರು ತಮ್ಮ ಕೆಲಸಕ್ಕೆ ಪ್ರಾರಂಭಿಸಿ ಎಲ್ಲರಮೇಲೆ ಇದ್ದ ಆರೋಪಣೆಯ ವಿಷಯವನ್ನು ಸ್ಪಷ್ಟಮಾಡಿ ಹೇಳುವಾಗ ಮಾಸ್ಲೋವಳ ಸರತಿ ಬಂದಾಗ ಆಕೆಯನ್ನು ನೋಡಿ 'ಇದೋ ಸೈಬೀರಿಯಾದ ಸ್ಮೆಲ್‌ಕವ್ಗೆ ನಿಗೆ ಸೆರೆಯಲ್ಲಿ ವಿಷ ಬೆರಸಿ ಕೊಟ್ಟು ಕೊಂದು ಅವನಲ್ಲಿದ್ದ ದುಡ್ಡು ಮತ್ತು ವಜ್ರದುಂಗುರವನ್ನು ಕದ್ದ ಆರೋಪಣೆ ನಿನ್ನ ಮೇಲಿದೆ. ಇದಕ್ಕೆ ನಿನ್ನ ಅಂಬೋಣವೇನು? ಅಂದನು.

'ಇಲ್ಲ. ಇದರಲ್ಲಿ ನನ್ನದೇನೂ ಅಪರಾಧವಿಲ್ಲ' ಎಂದು ಮಾಸ್ಲೋವಳು ಎಷ್ಟೂ ಅನುಮಾನಿಸದೆ ಹೇಳಿ, 'ನಾನು ಈ ಮೊದಲೇ ಹೇಳಿದ್ದನ್ನು ಇನ್ನೊಮ್ಮೆ ಹೇಳಬಲ್ಲೆ. ಅಂದಳು. 'ನಾನೇನೂ ತಕ್ಕೊಂಡಿಲ್ಲ. ತಕ್ಕೊಂಡಿಲ್ಲ;

ಉಂಗುರವನ್ನು ಮಾತ್ರ ಅವನೇ ನನ್ನ ಕೈಯಲ್ಲಿ ಕೊಟ್ಟನು. ' ಎಂದು ನುಡಿದಳು.

' ಹಾಗಾದರೆ ಅವನಲ್ಲಿದ್ದ ಹಣವನ್ನೇನೂ ನೀನು ಕದ್ದಿಲ್ಲವೆಂದು ಹೇಳಲು ಸಿದ್ಧಳಿರುವಿಯಾ? '

' ಹೌದು. ನಲವತ್ತು ರೂಪಾಯಿಗಳನ್ನು ಮಟ್ಟಿಗೆ ನಾನು ತಕ್ಕೊಂಡೆ. ಮಿಕ್ಕವುಗಳ ಸಂಗತಿ ನನಗೆ ಗೊತ್ತಿಲ್ಲ. '

' ಒಳ್ಳೇದು. ಸೈಬೀರಿಯದ ವರ್ತಕ ಸ್ಮೆಲ್‌ಕವ್ಹನಿಗೆ ಸೆರೆಮನೆಯಲ್ಲಿ ವಿಷ ಕೊಟ್ಟದ್ದನ್ನು ನೀನು ಒಪ್ಪುವಿಯಾ? '

' ಹೌದು. ನಾನು ಕೊಟ್ಟದ್ದು ನಿಜ. ಅದು ನಿದ್ದೆ ಬರುವ ಪುಡಿ ಇರುವದೆಂದೂ, ಅದರಿಂದ ಏನೂ ಅಪಾಯ:ವಾಗದೆಂದೂ ಅವರು ಹೇಳಿದ್ದರಿಂದ ನಾನು ಕೊಟ್ಟೆ. ಆದರೆ ಅಷ್ಟರಿಂದ ಅವನು ಸಾಯುವನೆಂದಾಗಲಿ, ಸಾಯಬೇಕೆಂದಾಗಲಿ ನನ್ನ ಇಂಗಿತವಿರಲಿಲ್ಲ. ದೇವರ ಸಾಕ್ಷಿಯಾಗಿ ನಾನಿದನ್ನೆಲ್ಲ ಅರಿಯೆ. '

ಮಾಸ್ಲೋವಳು ಹೇಳಿದ ನಿಜ ಸಂಗತಿಯನ್ನು ಕೇಳಿ ನ್ಯಾಯಾಧೀಶನ ಮುಖ ಸ್ವಲ್ಪ ಅರಳಿತು. 'ಆಗಲಿ. ಇನ್ನು ಇದೆಲ್ಲ ಹೇಗೆ ಸಂಭವಿಸಿತೆಂಬುದನ್ನು ನಾವು ನೋಡೋಣ! ನೀನು ನಿನಗೆ ಗೊತ್ತಿರುವ ಸಂಗತಿಯನ್ನೆಲ್ಲ ಇದ್ದಕ್ಕಿದ್ದಂತೆ ಬಿಚ್ಚಿ ಹೇಳಿದರೆ, ಅದರಲ್ಲಿ ನಿನ್ನದೇ ಹಿತವಿದೆ.' ಎಂದು ತನ್ನ ಕುರ್ಚಿಗೆ ಆತುಕೊಂಡು ಒಳ್ಳೇ ಮನಸಿನಿಂದ ಬುದ್ಧಿವಾದ ಹೇಳಿದ.

ಮಾಸ್ಲೋವಳು ನ್ಯಾಯಾಧೀಶನನ್ನೇ ಎವೆಯಿಕ್ಕದೆ ಒಂದೇ ಸವನಾಗಿ ನೋಡುತ್ತಿದ್ದಳು. ಆಕೆಯ ಮನಸಿನಲ್ಲಿಯೂ ವಿಚಾರ ತೆರೆಗಳ ಗೊಂದಲ.

' ಹೇಗೇಗೆ ಏನೇನು ನಡೆಯಿತೆಂಬುದನ್ನು ಹೇಳಿಬಿಡು ಹೆದರಬೇಡ. ಅದರಲ್ಲಿ ನಿನ್ನ ಕಲ್ಯಾಣವಿದೆ. ' ಎಂದು ನ್ಯಾಯಾಧೀಶನು ಮತ್ತೊಮ್ಮೆ ಒತ್ತಿ ನುಡಿದನು.

' ಹಾಗಿದ್ದರೆ ಹೇಳುವೆ. ' ಎಂದು ಮಾಸ್ಲೋವಳು ತನ್ನ ಮಾತಿಗೆ ಮೊದಲು ಮಾಡಿ, ' ಇದು ನೋಡಿ. ನಾನು ದೊಡ್ಡ ಹಾಟೇಲಿಗೆ ಹೋದೆ.

ನನಗೊಂದು ಕೋಣೆ ತೋರಿಸಿದರು. ಆ ಕೋಣೆಯಲ್ಲಿ ಸ್ಮೆಲ್‌ಕವ್ಹನು ಮೊದಲೇ ಕುಡಿದು ಮಲಗಿ ಬಿಟ್ಟಿದ್ದ. ಅದನ್ನು ನೋಡಿಯೇ ( ಹೆದರಿ ) ನನ್ನ ಎದೆ ಧಡಧಡ ಹಾರತೊಡಗಿತು. ನಾನು ಅಲ್ಲಿಂದ ಎದ್ದು ಹೋಗ ಬೇಕೆನ್ನುವಷ್ಟರಲ್ಲಿ ಅವನು ನನ್ನನ್ನು ಹಿಡಿದುಕೊಂಡ. ' ಹೀಗೆಂದು ಮುಂದಿನ ಮಾತು ನೆನಪಾಗದೆ ಆಕೆ ಬೆಪ್ಪಾಗಿ ನಿಂತುಕೊಂಡಳು.

' ಆ ಮೇಲೇನಾಯಿತು? ' ನ್ಯಾಯಾಧೀಶ ಕೇಳಿದ.

'ಇನ್ನೇನಿಲ್ಲ. ನನಗೆ ಗೊತ್ತಿದ್ದ ಸಂಗತಿಯು ಇಷ್ಟೇ. ನಿಮಗೆ ತಿಳಿದಿದ್ದನ್ನು ಮಾಡಿರಿ! ನನ್ನ ಕಡೆಯಂತೂ ಏನೂ ತಪ್ಪಿಲ್ಲ ' ಎಂದು ಸುಮ್ಮನಾದಳು.

' ನ್ಯಾಯಾಧೀಶನು ಅದನ್ನೆಲ್ಲ ಬರೆದುಕೊಂಡು, ಅಲ್ಲಿಗೇನೇ ವಿಚಾರಣೆ ನಿಲ್ಲಿಸಿ, ತನ್ನ ಚೇಂಬರಿಗೆ ಹೋದನು. ಅವನ ಬೆನ್ನ ಹಿಂದಿಂದೆ ಎಲ್ಲ ಜ್ಯೂರಿ ಗಳು, ವಕೀಲರು ಎದ್ದು ಒಳಗೆ ನಡೆದರು. ಸಾಕ್ಷಿಗಾರರೂ ' ಆಯಿತು. ಇವತ್ತಿನ ಕೆಲಸ ಎಷ್ಟೋ ಮಟ್ಟಿಗೆ ಮುಗಿದಂತಾಯಿ 'ತೆಂಬ ನಗೆ ಮೊಗದಿಂದ ಅತ್ತಿತ್ತ ಅಲೆಯಹತ್ತಿದರು.

ಎಲ್ಲರಂತೆ ಡಿಮಿಟ್ರಿಯಾದರೂ ಜ್ಯೂರಿಯವರ ಕೋಣೆಯಲ್ಲಿ ಹೋಗಿ, ಕಿಟಕಿಯ ಹತ್ತರ ಯೋಚಿಸುತ್ತ ಕುಳಿತನು. ಅವನ ಮನಸು ಮಾತ್ರ ಎಲ್ಲಿಯೋ ಕಟ್ಟೆಕಾಣದೆ ಹಾರುತ್ತಿತ್ತು.



# ೫ ಹಿಂದಿನ ನೆನಪು.



ಹೌದು ಈಕೆಯೇ ಆ ಕಟೂಷಳು' ಎಂದು ಡಿಮಿಟ್ರಿಯು ಆಗಾಗ್ಗೆ ತಿರುತಿರುಗಿ ಅಳೆದುಕೊಂಡು ನಿರ್ಣಯಿಸಿದನು. ಡಿಮಿಟ್ರಿಯು ಕಟೂಷಳನ್ನು ಮೊದಲು ಕಂಡಾಗ ಅವನೊಬ್ಬ ವಿದ್ಯಾರ್ಥಿ. ಅವನ ಸೋದರತ್ತೆಯವರು ಬಲು ಅಂತಃಕರಣದವರು, ಹಳೆ ಪದ್ಧತಿಯವರು. ಅವರಿರುವ ಏಕಾಂತ ರಮ್ಯವಾದ ತೋಟದಲ್ಲಿ ಅವನು ವ್ಯೈಮರೆತು ತನ್ನ ಅಭ್ಯಾಸವನ್ನು ಮಾಡುವದರಲ್ಲಿಯೇ ತಲ್ಲೀನನಾಗಿರುವನು. ಹೊತ್ತ್ಹೊತ್ತಿಗೆ ಸಮೀಚೀನ ಊಟತಿಂಡಿ, ಯಾವ ವಿಧದ ಚಿಂತೆಯಿಲ್ಲ; ಯಾವುದಕ್ಕೂ ಕೊರತೆ ಇಲ್ಲ. ಮೇಲೆ ದೇವರ ದಯೆಯಿಂದ ಬುದ್ಧಿಯೂ ಚುರುಕಾಗಿತ್ತು. ಹೀಗೆ ದೇವರು ಡಿಮಿಟ್ರಿಗೆ ಎಲ್ಲಬಗೆಯಿಂದ ಆನಂದ ಸಾಮ್ರಾಜ್ಯದೊಳಗೆ ಕಷ್ಟದ ಕೊರಕಲಗಳನ್ನು ಕಣ್ಣಿಗೆ ಹಾಕದೆ ಇಟ್ಟಿದ್ದರಿಂದ ಆ ಸ್ವರ್ಗೀಯ ಸುಖದೊಳಗೆ ಅವನೂ ಮನವಾರೆ ಓಲಾಡುತ್ತಿದ್ದ. ಡಿಮಿಟ್ರಿಯ ಮನಸ್ಸೂ ಬಹು ನಿರ್ಮಲ. ತನ್ನ ಮುಂದಿನ ಆಯುಷ್ಯವನ್ನೆಲ್ಲ ಜೀವಮಾನದ ಸಾರ್ಥಕ್ಯ ಮತ್ತು ಜನಸೇವೆಯ ದೃಷ್ಟಿಯಿಂದಲೇ ಕಳೆಯಬೇಕೆಂದು ಅವನ ಹೆಗ್ಗುರಿ. ಅಪೂರ್ಣತೆಯಲ್ಲಿಯೇ ತೊಳಲುತ್ತಿದ್ದರೆ ಮನುಷ್ಯನಿಗೆಂದೂ ಸುಖವಾಗದು. ಪೂರ್ಣತೆಯೇ ಸುಖದ ನಿಜವಾದ ದಾರಿ. ಅದಕ್ಕಾಗಿ ಎಷ್ಟು ಸ್ವಾರ್ಥತ್ಯಾಗವನ್ನು ಮನುಷ್ಯನು ಮಾಡಿದರೂ ಕಡಮೆಯೇ ಸರಿ. ಇದಕ್ಕೇ ಮೊದಲನೇ ಮೆಟ್ಟಿಲು ಎಂದು ಮನುಷ್ಯನು ಅನ್ಯಾಯದಿಂದಲೂ ಕ್ರೂರತನದಿಂದಲೂ ಸ್ವಂತ ಆಸ್ತಿ ಮಾಡಿಕೊಳ್ಳಲಾಗದು. ಹಲವು ಎಕರೆ ಭೂಮಿಯ ಒಡೆತನವನ್ನು ತನ್ನ ಕಡೆಗೆ ಇಟ್ಟುಕೊಂಡು, ತಾನು ಹಲವರನ್ನು ತನ್ನ ಸುಖಕ್ಕಾಗಿ ದುಡಿಸಿ ತೊಳಲಿಸುತ್ತಿದ್ದರೆ ಅದೆಂಥ ಜೀವನ? ಮನುಷ್ಯನು ತನ್ನ ಸದಸದ್ವಿವೇಕಬುದ್ಧಿ ಸಾಕ್ಷಿಯಾಗಿ ಇದ್ದು, ಅದು ಹೇಳುವಂತೆ ನಡೆದರೆ ಎಷ್ಟು ತ್ಯಾಗಮಾಡಿದರೂ ಅದವನ ಆತ್ಯಂತಿಕ ಸುಖಕ್ಕೆ ಸಾಧನವಾಗುವದು. ಆದುದರಿಂದ ಆತ್ಯಂತಿಕ

ಸುಖಕ್ಕೆ ಅಡ್ಡಲಾಗಿರುವ ಈ ಆಸ್ತಿ-ಪಾಸ್ತಿ ಎಂಬ ಕಸದ ಗುಡ್ಡೆಯನ್ನು ಇಟ್ಟುಕೊಳ್ಳಲಾಗದು. ಒಕ್ಕಲಿಗರಿಗೇ ಇವುಗಳ ಒಡೆತನವನ್ನೆಲ್ಲ ಒಪ್ಪಿಸಿ ನಿಶ್ಚಿಂತನಾಗಿರುವದು ಒಳಿತೆಂದು ನಿಶ್ಚಯಿಸಿದನು.

ಡಿಮಿಟ್ರಿಯದು ವ್ಯವಸ್ಥಿತ ಜೀವನ; ಆದುದರಿಂದ ತನ್ನ ದೈನಂದಿನದ ಜೀವನವನ್ನು ತಾನು ಹೀಗೀಗೇ ನಡೆಯಿಸಬೇಕೆಂದು ಕಾರ್ಯಕ್ರಮವನ್ನು ಹಾಕಿಕೊಂಡಿದ್ದು, ಬೆಳಿಗ್ಗೆ ಅಷ್ಟೊತ್ತಿಗೆ ಏಳುವನು; ಒಮ್ಮೊಮ್ಮೆ ರಾತ್ರಿ ಮೂರು ಗಂಟೆಗೂ ಏಳುವನು. ಅಡ್ಡಾಡುತ್ತ ನಸುಕಿನ ಮಂಜಿನಲ್ಲಿ ಹೋಗಿ, ಬೆಟ್ಟದಾಚೆ ಹರಿಯುತ್ತಿರುವ ಹೊಳೆಯಲ್ಲಿ ಮೀಯುವನು. ಮಂಜಿನ ಹನಿಗಳು ಹುಲ್ಲು ಮತ್ತು ಹೂವಿನ ಗಿಡಗಳ ಮೇಲೆ ಮುತ್ತುಗಳಂತೆ ಪಳ ಪಳ ಹೊಳೆಯುತ್ತಿರುವಾಗಲೇ ಮನೆಗೆ ಮರಳುವನು; ಆ ಮೇಲೆ ಕಾಫಿ ತೆಗೆದು ಕೊಂಡು ಓದಲಿಕ್ಕೆ ಕುಳಿತುಕೊಳ್ಳುವನು; ಆದು ಒಮ್ಮೊಮ್ಮೆ ತಲೆ ಬೇಸರಿಕೆ; ಆದರೆ, ಒಮ್ಮೊಮ್ಮೆ ಕೈಯಲ್ಲಿಯ ಪುಸ್ತಕಗಳನ್ನೆಲ್ಲ ಅಲ್ಲಿಯೇ ಒಗೆದು, ನಿಸರ್ಗ ರಮಣೀಯವೂ ಏಕಾಂತ ರಮ್ಯವೂ ಭಗವತ್ಸಾನ್ನಿಧ್ಯದ ನಿಜವಾದ ಮಂದಿರವೂ ಆದ ಕಾಡಿನಲ್ಲಿ ತಿರುಗಾಟಕ್ಕೆ ಹೊರಡುವನು. ಅಲ್ಲಿ ತನಗೆ ಹಾಯವೆನಿಸುವ ಯಾವುದೊಂದು ಮರದ ನೆರಳಲ್ಲಿ ಮಲಗಿ, ಮನಸು ಗಾಳಿಯಂತೆ ಹಗುರು ಮತ್ತು ನಿರಾಳವಾದ ನಂತರ ಮನೆಗೆ ಬರುವನು. ತರುವಾಯ, ತನ್ನ ಅತ್ತೆಂದಿ ರೊಡನೆ ನಗುತ್ತ ಕೆಲಿಯುತ್ತ ಕುಳಿತುಕೊಂಡು ಅವರಿಗೆ ಹಲವು ವಿಧದ ವಿನೋದದ ಮಾತುಗಳನ್ನು ಹೇಳುತ್ತ ಊಟ ಮಾಡುವನು.

ಒಂದೊಂದು ದಿನ ರಾತ್ರಿ ಬೆಳದಿಂಗಳಿದ್ದರೆ ಅವನಿಗೆ ಕಣ್ಣಿಗೆ ಕಣ್ಣು ಹತ್ತದು. ಚಂದ್ರನು ಮುಗಿಲಿನಲ್ಲಿ ಮೇಲಕ್ಕೇರಿದಂತೆ ಅವನ ಮನಸಿನಲ್ಲಿ ಆನಂದದ ಲಹರಿಗಳೆದ್ದು, ಅಂತಹ ರಮ್ಯವಾದ ಹೊತ್ತಿನಲ್ಲಿ ಹಾಸಿಗೆಯ ಮೇಲೆ ಮಲಗುವದನ್ನು ಬಿಟ್ಟು, ಏಕಾಕಿಯಾಗಿಯೇ ಹಚ್ಚ ಹಸುರಾದ ಹೊಲಗದ್ದೆಗಳಲ್ಲಿಯೋ, ಹೂದೋಟಗಳಲ್ಲಿಯೋ ತನ್ನ ನೆನಸು-ಕಣಸುಗಳಲ್ಲಿ ಮನಮುಳುಗಿ ಬೆಳಗಿನವರೆಗೂ ಅಲೆಯುವನು.

ಈ ಬಗೆಯಿಂದ ಅದು ಇದು ಅನ್ನದೆ, ಅತ್ತಿತ್ತ ಕಣ್ಣು ಹಾಕದೆ, ಬಹು ಸುಖದಿಂದ ಕಾಲು ಕಳೆಯುತ್ತಿದ್ದ. ಆಗ ಎಷ್ಟೋ ಸಲ, ತನ್ನ ಕಡೆಗೆ ಆಗಾಗ್ಗೆ ಏನಾದರೂ ಕೊಡಲಿಕ್ಕೋ, ಬೇಡಲಿಕ್ಕೋ, ಬರುಹೋಗುವ ಕಪ್ಪುಗಣ್ಣಿನ, ಚುರುಕುಗಾಲಿನ ಕಟೂಷಳ, ಕಡೆಗೆ ಆತನ ಲಕ್ಷ್ಯವೇ ಹೋಗಿರಲಿಲ್ಲ. ಡಿಮಿಟ್ರಿಯದಾದರೂ ಎಳೆವಯಸ್ಸು. ಕಟೂಷಳಿಗೆ ಆಗ ತಾನೇ ೧೯ ವರ್ಷ. ಹೆಂಗಸರನ್ನು ಮಾನವ ಪ್ರಾಣಿಗಳಂತೆ ಅವನು ನೋಡುತ್ತಿದ್ದನೇ ಹೊರತು ಹೆಂಗಸರೆಂದಲ್ಲ. ಇಷ್ಟು ನಿರ್ಮಲ ಮನಸ್ಸು ಆತನದು.

ಒಂದಿನ ಇವನ ಸೋದರತ್ತೆಯ ನೆರಮನೆಯವರೆಲ್ಲರೂ ಕೂಡಿ ಡಿಮಿಟ್ರಿಯಿದ್ದ ಮನೆಯಲ್ಲಿ ನಾಲ್ಕುದಿನಇದ್ದು ಹೋಗಲಿಕ್ಕೆ ಬಂದರು. ಫಲಾಹಾರ ತೀರಿಸಿಕೊಂಡು ಅವರೆಲ್ಲರೂ ತಮ್ಮ ಮನೆಯ ಮುಂದಿರುವ ಹುಲ್ಲುಗದ್ದೆಯಲ್ಲಿ ಆಟವಾಡಲಿಕ್ಕೆ ಹೊರಟರು. ಕಟೂಷಳೂ ಈ ಆಟಕ್ಕೆ ಬಂದಿದ್ದಳು. ಆಟದಲ್ಲಿ ಒಂದು ಬಾರಿ ಡಿಮಿಟ್ರಿ ಕಟೂಷಾ ಇವರಿಬ್ಬರು ಜೊತೆಗಾರರಾಗಿ ಆಡುವ ಪ್ರಸಂಗ ಬಂದಿತು. ಈ ಸಂಧಿಯಲ್ಲಿ ಕಟೂಷಳ ಕಣ್ಣು, ನೋಟಗಳು ಡಿಮಿಟ್ರಿಯ ಎದೆಯಲ್ಲಿ ನೆಟ್ಟು, ಏನೋ ಒಂದು ಬಗೆಯ ಮನಸಿಗೆ ಆನಂದವಾಗುತ್ತಿತ್ತು; ಆದಾಗ್ಯೂ, ಆಕೆಯ ಜೊತೆ ವಿಶೇಷ ನಿಕಟಸಂಬಂಧ ಬೆಳಿಸುವ ವಿಚಾರವು ಅವನ ಮನಸಿನಲ್ಲಿ ಮೂಡಿರಲಿಲ್ಲ.

ಆಗ ಕಟೂಷಳು ಮತ್ತು ಡಿಮಿಟ್ರಿಯು ಒಂದು ಕಡೆ ಆಗಿ ಆಡುವಾಗ, ಇಬ್ಬರೂ ಇನ್ನೊಂದು ಕಡೆಯವರ ಕೈಗೆ ಸಿಗಬಾರದೆಂದು ಅಡಗುವದು, ಓಡುವದು ಹೀಗೆ ಮಾಡುವಾಗ ಅವರಿವರು ಕೈಗೆ ಕೈ ಹಿಡಿಯುವ, ಮೈಗೆ ಮೈ ತಾಕಿಸುವ ಸಂದರ್ಭಗಳು ಒದಗಿದವು. ಡಿಮಿಟ್ರಿಯು ಒಂದುಸಲ ಒಬ್ಬನೇ ಇನ್ನೆಲ್ಲಿಯೋ ಒಂದೆಡೆ ಅಡಗಿರುವಾಗ, ಕಟೂಷಳು ಅವನೆದುರಿಗಿನ ಒಂದು ಕಂಟಿಯಲ್ಲಿ ಅಡಗಿ ಕುಳಿತದ್ದು, ಡಿಮಿಟ್ರಿಗೂ ಅಲ್ಲಿಯೇ ಓಡಿಬರಲಿಕ್ಕೆ ಕೈಸನ್ನೆ ಮಾಡಿದಳು; ಯಾಕಂದರೆ, ಅವರಿಬ್ಬರನ್ನು ಬೆನ್ನಟ್ಟುವವನ ಕೈಗೆ ಸಿಗದೆ, ಇಬ್ಬರು ಒಮ್ಮೆ ಕೈಕೈ ಹಿಡಿದುಬಿಟ್ಟರೆ ಆಯಿತು ಗೆದ್ದಂತೆ. ಆಮೇಲೆ ಇದಿರು ಪಕ್ಷದವರು ಬಂದು ಮುಟ್ಟುತ್ತಿರಲಿಲ್ಲ. ಇದೊಂದು ಚಪ್ಪಾಪಾಣಿ

ಯಂತಹ ಆಟ. ಇದನ್ನರಿತು, ಕಟೂಷಳು ಬಚ್ಚಿಕೊಂಡಿರುವ ಕಂಟಿಯ ಹಿಂದೆ ತಾನು ಹೋಗಬೇಕೆಂದು ಹವಣಿಸಿ ಡಿಮಿಟ್ರಿಯು ಕಣ್ಣು ತಪ್ಪಿಸಿ ಮೆಲ್ಲಗೆ ಕಾಲು ಸದ್ದು ಮಾಡದೆ ಓಡಿದನು; ಆದರೆ ದಾರಿಯಲ್ಲೊಂದು ಚಿಕ್ಕ ಗುಂಡಿ; ಅದರ ಮೇಲೆಲ್ಲ ಹುಲ್ಲು ಕರಿಕೆ ಬೆಳೆದುದರಿಂದ, ಡಿಮಿಟ್ರಿಯ ಕಾಲು ಅದರಲ್ಲಿ ಸಿಕ್ಕು, ಕುಸಿಬಿದ್ದು ಅಂಗಾತ ಬಿದ್ದನು; ಅದರಲ್ಲಿಯ ರಾಡಿನೀರು ಕೊಳಚಿಯು ಚಲ್ಲನೆ ಸಿಡಿದು, ಅವನ ಕಾಲು ಕೈ ಮುಂತಾದವು ಹೊಲಸಾದವು; ಆದರೂ ನಗುತ್ತ ತಾನೇ ಹೇಗೋ ಸಾವರಿಸಿಕೊಂಡು ಏಳಹತ್ತುವಷ್ಟರಲ್ಲಿ ಎರಳೆಗಣ್ಣಿನ ಕಟೂಷಳು ಕಂಟಿಯೊಳಗಿಂದ ಭರ್ರನೇ ನಗುತ್ತ ನಗುತ್ತ ಓಡಿಬಂದು ಅವನ್ನು ಕೈಹಿಡಿದು ಎಬ್ಬಿಸಿದಳು.

ಎಳೆ ಕೈಗಳಿಂದ ತನ್ನ ಕೂದಲುಗಳನ್ನು ಬದಿಗೆ ಸರಿಸುತ, ಕೊಂಚ ನಗುಮುಖದಿಂದಲೂ, ಕೊಂಚ ಅಧೈರ್ಯದಿಂದಲೂ ಅವನ ಮುಖವನ್ನೇ ನೋಡುತ್ತ ‘ ಪೆಟ್ಟಾಯಿತೇ? ’ ಎಂದು ಪ್ರಶ್ನ ಮಾಡಿದಳು.

‘ ಇಲ್ಲಿ ಚಿಕ್ಕ ಗುಂಡಿ ಇರುವದು ನನಗೆ ಗೊತ್ತಿರಲಿಲ್ಲ ನೋಡು ’ ಎಂದು ಆಕೆಯ ಎಳೆ ಕೈಗಳನ್ನು ತನ್ನ ಕೈಯಲ್ಲಿ ಹಿಡಿದು ಹೊಟ್ಟೆಗೆ ಹಚ್ಚಿಕೊಂಡು ಡಿಮಿಟ್ರಿಯು ಮೃದುಮಧುರ ಹಾಸ್ಯದಿಂದ ನುಡಿದನು. ಇಬ್ಬರ ಕೈಮೈಗಳು ತಮ್ಮಾರೆ ಹತ್ತಿರಕ್ಕೆ ಒಲಿದವು. ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಅದೇ ತಾನೇ ಅರಳಿದ ಗುಲಾಬಿಯ ಮೊಗ್ಗೆಯಂತೆಸೆವ ಆಕೆಯ ಮೀಸಲು ತುಟಿಗಳಲ್ಲಿರುವ ಮಧುವನ್ನು, ಸವಿದು ಡಿಮಿಟ್ರಿಯು ತೃಪ್ತನಾದನು; ಆಮೇಲೆ ಇಬ್ಬರಿಗೂ ಎಚ್ಚರಿಕೆ.

‘ ಸಾಕು ಬಿಡಿ ’ ಎಂದು ಲಗುಬಗೆಯಿಂದ ಆತನ ಕೈಬಿಡಿಸಿಕೊಂಡು ಆಕೆ ಸಮೀಪದಲ್ಲಿಯೇ ಇರುವ ಹೂವಿನ ಗಿಡಕ್ಕೆ ದುಡುದುಡು ಓಡಿ, ಜೋತು ಬಿದ್ದಿರುವ ರೆಂಬೆಗಳನ್ನೆರಡೂ ಕಂಕುಳಲ್ಲಿ ಹಿಡಿದು, ಒಂದೆರಡು ಮೊಗ್ಗೆ ಹೂಗಳನ್ನು ಮುಡಿದಂತೆ ಮಾಡಿ, ಒಂದು ರೆಂಬೆಗೆ ಅರ್ಧ ಒರಗಿ ನಿಂತು, ಡಿಮಿಟ್ರಿಯನ್ನು ಅಂಚುಮಟ ಪ್ರೇಮ ದುಂಬಿದ ಓರೆಗಣ್ಣಿನಿಂದ ಕದ್ದು ನೋಡಿ ನೋಡಿ, ನೋಡುತ್ತ ಜಿಗಿಯುತ್ತ ಹಾರುತ್ತ ಆಟದವರಲ್ಲಿ ಸೇರಿದಳು.

ಇದಾದ ಮೇಲೆ, ವಯಸಿಗೆ ಬಂದ ಗಂಡಸು ಹೆಂಗಸರಲ್ಲಿ ದಾಂಪತ್ಯ ಪ್ರೇಮವು ಮೊಳೆತು ಬೆಳೆಯುವಂತೆ ಅವರಲ್ಲಿಯೂ ಬಲಿಯಿತು. ಅಂದಿನಿಂದ ಕಟೂಷಳು ಕೆಲಸ ಮಾಡುವಾಗ ಮೈಯಲ್ಲಿ ಹಾಕಿಕೊಂಡ ಬಿಳಿಯ ಅಂಗ ವಸ್ತ್ರವು ಅಷ್ಟು ದೂರಿಂದ ಕಣ್ಣಿಗೆ ಬಿದ್ದರೂ, ಡಿಮಿಟ್ರಿಯ ಕಣ್ಣಿಗೆ ಅದೊಂದು ಕಣ್ತಣಿಸುವ ಹೊಸನೋಟ. ಮಳೆಗಾಲದಲ್ಲಿ ಭೂಮಿತಾಯಿಯು ಇಲ್ಲಿಂದಲ್ಲಿಯವರೆಗೆ ಹಚ್ಚ ಹಸುರಿನ ಬಟ್ಟೆಯನ್ನುಟ್ಟು ಎಸೆಯುವಾಗ ಮೋಡ ಮುಸುಕಿದ ಸೂರ್ಯನು ಬೈಲಿಗೆ ಬಂದು ತಳತಳಿಸುತಿರಲು, ಸುಯ್ಯೆಂದು ಸುಳಿಗಾಳಿ ಬೀಸಿದರಾಗುವ ಆನಂದದ ಏಳು ಮುಳುಗಿನಂತೆ ಡಿಮಿಟ್ರಿಯ ಆಗಿನ ಮನಃಸ್ಥಿತಿ. ಮೈಯಲ್ಲಿ ಝುಗ್ಗನೆ ಆನಂದದ ಹೊಯಿಲು ಹಾಯ್ದಂತೆ. ಕಟೂಷಳಿಗಾದರೂ ಡಿಮಿಟ್ರಿಯನ್ನು ಎಲ್ಲಿಂದಲೋ ಕಂಡರೂ ಹೀಗೆಯೇ ಮೈಮರೆ. ಆನಂದವು ಮೈಗೆ ತಗಲಿ, ತಗಲಿ, ಎದೆಯನ್ನು ಕುಲುಕಿ ಮಾಯ ವಾಗುವದು. ಕಟೂಷಳನ್ನು ನೋಡಿ ಡಿಮಿಟ್ರಿಯ ಮನಸ್ಸು ಹುಚ್ಚಾಗು ತ್ತಿದ್ದುದರಲ್ಲಿ ಆಚ್ಚರಿಯಿಲ್ಲ; ಆಕೆ ತಾನಿರುವಲ್ಲಿ ಇರುವಳೆಂಬ ಬರಿಯ ಕಲ್ಪನೆಯೇ ಅವನಲ್ಲಿ ಮಿಂಚಿನ ಹೊಯಿಲನ್ನು ಹಾಯಿಸಲು ಸಾಕಿತ್ತು.

ಈ ಅವಸ್ಥೆಯಲ್ಲಿ, ತಾಯಿಯು ಅವನಿಗೆ ಬೈದು ಕಾಗದ ಬರೆಯಲಿ, ತನ್ನ ಪ್ರಬಂಧ ಬರಹವು ಮುಂದೆ ಸಾಗದಿರಲಿ, ಒಮ್ಮೊಮ್ಮೆ ಏನೇನೋ ವಿಚಾರ ಗಳಿಂದ ಮನಸು ಔದಾಸೀನ್ಯದಿಂದ ಮುಸುಕಿ ಖಿನ್ನವಾಗಿರಲಿ, ಕಟೂಷಳ ಕಲ್ಪನೆಯು ಮನಸಿನಲ್ಲಿ ಸುಳಿದೊಡನೆ ಅದೆಲ್ಲ ಹಾರಿಹೋಗುತ್ತಿತ್ತು. ಆಗೆಲ್ಲ ಆಕೆ ಅವನ ಬಾಳಿನ ಬೆಳಕು.

ಕಟೂಷಳಿಗೆ ಮನೆಯಲ್ಲಿ ಮೈತುಂಬ ಕೆಲಸ. ಆಕೆಗೆ ಓದಲು ಪುರಸತ್ತೂ ಸಿಗುತಿರಲಿಲ್ಲ. ಡಿಮಿಟ್ರಿಯು ಆಕೆಗೆ ಓದಲಿಕ್ಕೆ ಕತೆ-ಕಾದಂಬರಿಗಳನ್ನು ಕೊಟ್ಟಿರುತ್ತಿದ್ದ. ಅವನ್ನು ಬಹು ಮುದ್ದಿಟ್ಟು ಓದುವಳು. ಅವರಿಬ್ಬರೂ ಯಾರೂ ಇಲ್ಲದಹೊತ್ತು ನೋಡಿ ಹಿತ್ತಲಲ್ಲಿಯೋ ಅಂಗಳಲ್ಲಿಯೋ ಬರುಹೋಗುವ ಹುಸಿಯಲ್ಲೋ, ಒಮ್ಮೊಮ್ಮೆ ಕೋಣೆಯಲ್ಲಿಯೋ ಚಹಾ ಕೊಡಲಿಕ್ಕೆ ಬಂದಾಗಲೋ ಕದ್ದು ಪಿಸುಮಾತಾಡುವರು. ಯಾರಾದರೂ

ಇದ್ದರೆ ಅವರ ಕಣ್ಣು ಮುಖಗಳೇ ಒಂದನ್ನೊಂದು ನೋಡಿ ಮಾತಾಡುವವು; ಮತ್ತು ಅದರಲ್ಲಿರುವಷ್ಟು ಸವಿಯು ಅವರಿಗೆಬರಿಯಮಾತಿನಲ್ಲಿಯೂ ಇರಲಿಲ್ಲ. ಅದೇ ಅವರಿಬ್ಬರೇ ಇದ್ದರೆ ಬಾಯಿ ಬರುತಿರಲಿಲ್ಲ ಮಾತಾಡಲಿಕ್ಕೆ. ಮಾತು ಮನಸಿಗೆ ನಿಲುಕದ ಸುಖದ ಕ್ಷಣವನ್ನೇ ನೆನೆನೆನಿಸಿಕೊಂಡು ಒಳಗಿಂದೊಳಗೆ ಅವರಿಬ್ಬರ ಕಣ್ಣುಗಳೇನೋ ಗುಟ್ಟಾಗಿ ಸನ್ನೆಮಾಡತೊಡಗುವವು. ಅರಳಿದ್ದ ತುಟಿಗಳು ನಿರಿಗೆಗಟ್ಟಿ ನಾಚಿಕೊಳ್ಳುವವು. ಇಬ್ಬರ ಎದೆಯಲ್ಲಿ ಅದೇಕೋ ಡವಡವ ಮಾತಿಲ್ಲದೆ ಗಡಬಿಡಿಯಿಂದ ತಮ್ಮಷ್ಟಕ್ಕೆ ತಾವು ನಿರಾಸೆಯಿಂದ ಹೊರಟುಹೋಗುವರು.

ಇದು ಅದೆಂತೋ ಜಮೀನದಾರ ಒಡತಿಯರ ಕಿವಿಗೆ ಮುಟ್ಟಿತು. ಅವರೂ ಹೆದರಿದರು. ಕಟೂಷಳೊಡನೆ ಡಿಮಿಟ್ರಿಯು ಕೆಡುವನೇನೋ ಎಂದುಕೊಂಡರು. ಮನಸಿನಲ್ಲಿ ಡಿಮಿಟ್ರಿಯಾದರೂ ಕಟೂಷಳನ್ನು ಪ್ರೀತಿಸುತ್ತಿದ್ದರೂ, ಆಕೆಯ ಮೈಮುಟ್ಟುವ ಧೈರ್ಯವಿರಲಿಲ್ಲ. ಪ್ರೇಮಕ್ಕಾಗಿ ಪ್ರೇಮವೆಂಬುವ ಮಾದರಿಯ ಪ್ರೀತಿ ಅವನಿಗೆ. ಕಟೂಷಳ ವಿಷಯದಲ್ಲಿತ್ತು.

ಒಂದು ವೇಳೆ, ಡಿಮಿಟ್ರಿಯು ಮನಸ್ಸು ಮಾಡಿದ್ದರೆ ಕಟೂಷಳನ್ನು ಮದುವೆಯಾಗುವದು ಅವನಿಗೇನೂ ಅಸಾಧ್ಯವಿರಲಿಲ್ಲ; ಆದರೆ ಇನ್ನೂ ಶರೀರಸಂಬಂಧ ಬೆಳಿಸುವಷ್ಟು ದಾಂಪತ್ಯಪ್ರೇಮದ ಅರಿವು ಅವನಲ್ಲಿ ಹುಟ್ಟಿರಲಿಲ್ಲ; ಅಥವಾ ಹಾಗೆ ಅವನಿಗೆ ಯಾರೂ ಹೇಳಲಿಲ್ಲ; ಹೀಗಾಗಿ ಅವನು ರಜೆಯ ದಿನ ಮುಗಿಸಿಕೊಂಡು ತಮ್ಮೂರಿಗೆ ಹೋದನು. ಕಟೂಷಳೆಂದರೆ, ಅವನ ಹಾಳುಬಾಳಿನಲ್ಲಿ ಆನಂದದ ನಾದವನ್ನು ತುಂಬಿ ಕುಣಿಯ ಹಚ್ಚುವ ಆನಂದ ಮೂರ್ತಿ; ಡಿಮಿಟ್ರಿಯು ಊರಿಗೆ ಹೊರಡುವ ದಿನ ಸಮೀಪಿಸಿತು. ಇಬ್ಬರ ಮನಸಿಗೂ ಎಲ್ಲಿ ಕುಳಿತರೂ ಸೊಗಸಿಲ್ಲ. ಹುರುಹುರು ಎಂಬುವ ತೀವ್ರ ಹಲಬು. ಆದಿನ ಮನೆಯ ಮುಂದೆ ಗಾಡಿ ಬಂದು ನಿಂತಿತು. ಕಟೂಷಳ ಕಣ್ಣುಗಳು ತೊಟ್ಟಿಕ್ಕಿದವು. ಯಾರಿಗೂ ತೋರಗೊಡುವಂತಿಲ್ಲ. ಆಕೆಯ ಜೀವವೇ ಅವನ ಅಂಗಾಂಗಳಲ್ಲಿ ಸೇರಿ ಅವನ ಮೈಸುತ್ತು ಮುತ್ತಿಡುತ್ತಿದ್ದರೂ, ಏನೂ ಸಂಬಂಧವಿಲ್ಲದವಳಂತೆ ಆಕೆ ದೂರದಲ್ಲಿಯೇ ನಿರ್ಜಿವಳಾಗಿ ನಿಂತು.

ಕಂಬನಿ ತುಂಬಿ ಕುತ್ತಿಗೆಶಿರಬಿಗಿದು ಬಗ್ಗಿ ಬಗ್ಗಿ ನೋಡುವಳು. ಡಿಮಿಟ್ರಿಗಾದರೂ, ಎಷ್ಟು ನೋಡಿದರೂ ದಣಿಯದ ಕಣ್ಣಿನಿಂದ ತನ್ನ ಹೃದಯದ ಮಣಿಯನ್ನು ತಿರುತಿರುಗಿ ನೋಡುವ ಹಂಬಲ.

ಅವರಿವರೊಡನೆ ಮಾತಾಡುವಾಗಲೂ ಅವನ ಕಣ್ಣೆಲ್ಲ ಆ ಮುದ್ದು ಗುವರಿಯ ಮೇಲೆಯೇ. ಅಂತೂ ಒಮ್ಮೆ ಗಾಡಿಯಲ್ಲಿ ಕುಳಿತು. 'ಬರತೇನೆ ಕಟೂಷಾ'? ಅನ್ನುವಾಗ ಗಾಡಿ ನಡೆಯಿತು 'ದಯವಿರಲಿ' ಎಂದು ಕಟೂಷಳು ತನ್ನ ಇನಿದನಿಯಿಂದ ನುಡಿದು ಹೊರ ಹೊಮ್ಮುತಿರುವ ಕಂಬನಿಗಳನ್ನು ಗಟ್ಟಿಮನಸಿನಿಂದ ಹೇಗೋ ಹಿಂದೂಡಿದಳು; ಅಳು ಒತ್ತರಿಸಿತು, ಅಲ್ಲಿ ಕಾಲೂರಿ ನಿಲ್ಲಲಿಕ್ಕಾಗದೆ, ತನ್ನ ಕೋಣೆಗೆ ಓಡಿ ಹೋಗಿ ಅಲ್ಲಿ ತನ್ನ ಕಣ್ಣೀರಿನ ಕೋಡಿ ಹರಸಿ, ಮನಸನ್ನು ಹಗುರು ಮಾಡಿಕೊಂಡಳು.

ಮುಂದೆ, ಎರಡು ವರ್ಷಗಳವರೆಗೆ ಪರಸ್ಪರರ ಭೆಟ್ಟಿ ಇಲ್ಲ. ಡಿಮಿಟ್ರಿಯು ಎರಡನೇ ಸಲ ತನ್ನ ಸೋದರತ್ತೆಯ ಬಳಿ ಬಂದಾಗ, ಅವನೊಬ್ಬ ದಂಡಿನ ಚಿಕ್ಕ ಅಧಿಕಾರಿ. ತನ್ನ ಕೆಲಸಕ್ಕೆ ಹೋಗತಾ ದಾರಿಯಲ್ಲಿ ಅತ್ತೆಂದಿರನ್ನು ಕಾಣಲಿಕ್ಕೆ ಬಂದವನು. ಅವನಲ್ಲಿ ಇಂದು ಆ ಹಿಂದಿನ ಹುಡುಗತನ, ಸರಲತನ, ಮಿದುತನ ಸಾದಾತನ, ಪರರ ಕೆಲಸಕ್ಕೆ ದುಡುಕುವ ಮುಂದಾಳುತನ ಇವು ಇರಲಿಲ್ಲ; ಆದರೆ, ತನ್ನ ಸುಖವೇ ತನಗೆ, ಸ್ವಾರ್ಥಪರತೆ ಇವು ಇಂದು ಅವನಲ್ಲಿ ಸೇರಿಕೊಂಡು, ಪರಸುಖವನ್ನು ಮರೆಯಿಸಿದ್ದವು. ಆಗ ದೇವರ ಸೃಷ್ಟಿ ಎಂಬುದು ಅವನ ಬುದ್ಧಿಗೆ ನಿಲುಕದ ಗುಟ್ಟು; ಈ ಗುಟ್ಟನ್ನು ಬಿಡಿಸಬೇಕೆಂದು ಅವನು ಎಷ್ಟೋಸಲ ಎಳೆತನದಲ್ಲಿ ಪ್ರಯತ್ನಿಸಿದ್ದ; ಆದರೆ ಇಂದು ಅವನಿಗೆ ಜೀವನವೆಂಬುದು ಅಂಗೈಯೊಳಗಿನ ಕನ್ನಡಿಯಷ್ಟು ಸುಲಭ, ಸ್ಪಷ್ಟ, ಸರಲ. ಅಂದು ಅವನಿಗೆ ಸೃಷ್ಟಿಯೊಂದಿಗೆ ಒಂದಾಗಿ, ತಾನು ಪುಸ್ತಕ ಓದುವ ಕವಿ, ತತ್ವದರ್ಶಿಗಳೊಡನೆ ಒಂದಾಗುವ ಹುಚ್ಚು; ಇಂದು ತನ್ನ ಗೆಳೆಯ ಸಂಗಡಿಗರೊಡನೆ ಆಟ ನೋಟಗಳಲ್ಲಿ ರಮಿಸುವ ಹುಚ್ಚು. ಆಗ ಹೆಣ್ಣೆಂದರೆ ಅವನಿಗೆ ರಹಸ್ಯ ಸ್ವಾರಸ್ಯವುಳ್ಳ ಅಮೂಲ್ಯನಿಧಿ; ಈಗ ಅವರು ಎಲ್ಲರಂತೆ ಭೋಗ್ಯವಸ್ತು. ದುಡ್ಡೆಂದರೆ, ಆಗ ಅವನಿಗೆ ತಲೆಬೇಸರಿಕೆ. ಅದು ಬೇಕೇ ಆಗಿರಲಿಲ್ಲ; ತನ್ನ

ತಾಯಿಯು ಕಳಿಸುವ ದುಡ್ಡಿನ ಒಂದು ಮೂರಾಂಶ ಹಣವನ್ನು ಕೂಡ ಅವನು ತನಗಾಗಿ ವೆಚ್ಚಮಾಡುತ್ತಿರಲಿಲ್ಲ. ಅಂತೆಯೇ ತನ್ನ ತಂದೆಯಿಂದ ಬಂದ ಆಸ್ತಿಯನ್ನೆಲ್ಲ ಅವನಾಗ ಸಂತೋಷದಿಂದ ಒಕ್ಕಲಿಗರಿಗೇ ಬಿಟ್ಟು ಕೊಟ್ಟನು. ಔದಾರ್ಯದಿಂದ. ಈಗೋ ಅವನ ಧನದಾಸೆಗೆ ಪಾರವಿಲ್ಲ. ತನಗಿರುವ ತಿಂಗಳ ಹದಿನೈದುನೂರು ರೂಪಾಯಿಗಳ ಸಂಬಳವೂ ಸಾಲದು; ಹೀಗಾಗಿ ಹೆತ್ತ ತಾಯಿಯೊಡನೆ ಮಾತುಮಾತಿಗೆ ಬಂದು ಜಗಳಾಡಿ ಮೋರೆ ಕಟ್ಟಿಕೊಂಡಿದ್ದ. ಎಳೆತನದಲ್ಲಿ ಅವನ ಅಹಂಕಾರದಲ್ಲಿ ಪಶುತ್ವವು ಬೆಳೆದಿರಲಿಲ್ಲ. ಅದಿಂದು ಬೇಗಿ ಬೆಳೆದು, ಮರವಾಗಿ, ಇದ್ದುದೆಲ್ಲ ತನ್ನ ಸುಖಕ್ಕೇ ಎಂಬುವ ಹುಚ್ಚು ತಲೆಗೇರಿತ್ತು.

ಇಷ್ಟೆಲ್ಲಕ್ಕೂ, ಡಿಮಿಟ್ರಿಯು ಇತ್ತೀಚೆ ತನ್ನನರಿತು ತಾನು ನಡೆಯುವ ದನ್ನು ಬಿಟ್ಟು, ಪರರನ್ನು ನೋಡಿ ನಡೆಯ ಹತ್ತಿದ್ದೇ ಕಾರಣವಾಗಿತ್ತೆನ್ನ ಬಹುದು; ಯಾಕಂದರೆ, ತನ್ನ ತಾನು, ನಂಬಿಕೊಂಡಿರುವದು ಸಾಮಾನ್ಯರ ತುತ್ತಲ್ಲ! ಅದು ದೊಡ್ಡವರ ಮಾತು. ತನ್ನ ತಾ ನಂಬುವದಕ್ಕೆ ಪ್ರತಿ ಯೊಂದನ್ನು ಕುರಿತು ತಾನೇ ಸೂಕ್ಷ್ಮವಾಗಿ, ಆಳವಾಗಿ ಆಲೋಚಿಸಿ, ನಿಷ್ಕರ್ಷ ಮಾಡಿಕೊಂಬ ಶಕ್ತಿ ಬೇಕು. ಅದನ್ನು ಕೂಡ, ಅದು ತನ್ನ ಇಷ್ಟವಸ್ತುವೆಂದಲ್ಲ; ಪ್ರೀತಿಯವಸ್ತುವೆಂದಲ್ಲ; ನ್ಯಾಯಾಧೀಶನು ನ್ಯಾಯದ ತಕ್ಕಡಿಯನ್ನು ಕೈಯಲ್ಲಿ ಹಿಡಿದು, ಕೂದಲೆಳೆಯಷ್ಟು ಕೂಡ ಅತ್ತಿತ್ತ ಅಲುಗಿಸದಂತೆ. ಸ್ವಾರ್ಥವೆಂಬ ಪಶುವು ಮನುಷ್ಯನಲ್ಲಿ ಅಡಗಿ, ಮೇಲೆ ತನ್ನತನದ ಸಭ್ಯ ಹೊದಿಕೆಯನ್ನು ಹೊದ್ದುಕೊಂಡು ಕಂಡ ಕಂಡ ಭಂಡ ಕೆಲಸಗಳನ್ನೆಲ್ಲ ತನ್ನ ತೃಪ್ತಿಗಾಗಿ ನಡಿಸಿರುತ್ತದೆ; ಈ ಸ್ವಾರ್ಥ ಪಶುವಿಗೆ ಬಲಿಯಾಗಿರುವವನಿಗೂ, ತನ್ನ ಕಣ್ಣಿದ್ದು ಪರರ ಕಣ್ಣಿನಿಂದ ನೋಡುವವನಿಗೂ, ಪರಪ್ರತ್ಯಯ ಬುದ್ಧಿಯವನಿಗೂ ತಾನು ವಿಚಾರ ಮಾಡಿ ನಿಷ್ಕರ್ಷೆ ಮಾಡತಕ್ಕದ್ದೇನೂ ಇರುವದಿಲ್ಲ; ಯಾಕಂದರೆ, ಅವರ ಮಟ್ಟಿಗೆ ಮುಂದಿಯ ದಾರಿಯೇ ತನ್ನದು. ಅಲ್ಲಿ ದೇವರ ವಿಚಾರವಿಲ್ಲ. ಈ ಮೋರೆ, ಡಿಮಿಟ್ರಿಯು ಎಂದಾದರೂ. ದೇವರು, ಸತ್ಯ, ಜನ್ಮಸಾರ್ಥಕ್ಯ ದುಡ್ಡುದುಗ್ಗಾಣಿಯ ಹುಚ್ಚುತನ ಇಂಥ ಪರಮಾರ್ಥ. ಪರವಾದ ಮಾತುಗಳನ್ನಾಡಲಾರಂಭಿಸಿದರೆ, ಅವನ ಗೆಳೆಯರು, ನೆಂಟರು,

ಬಂಧು ಬಳಗದವರು, ಸಾಲದ್ದಕ್ಕೆ ಸೋದರತ್ತೆ–ತಾಯಿ ಅವರು ಕೂಡ ಅವನಿಗೆ ' ಸಾಕು ಬಿಡಪ್ಪ, ನಿನ್ನ ಗೊಡ್ಡು ವೇದಾಂತ ' ಎಂದು ಹಾಸ್ಯಮಾಡಿ ಬೀಳುಗಳೆವರು; ಅದೇ, ಅವನು ಕಥೆ ಕಾದಂಬರಿಗಳನ್ನೋದಿ, ಶೃಂಗಾರ ರಸದಿಂದುಕ್ಕುವ ಸಿನೆಮಾ ಚಿತ್ರಗಳನ್ನು ನೋಡಿ, ಅದರೊಳಗೆ ನಡೆದ ಸಂಗತಿಗಳನ್ನು ಹಿಗ್ಗಿಗ್ಗಿ ತಿರುಗಾ ಮುರಗಾ ರುಚಿಮಾಡಿ ಹೇಳಹತ್ತಿದನೆಂದರೆ, ಎಲ್ಲರೂ ಬಾಯಿ ಬಾಯಿ ಬಿಡುವರು. ಅವನನ್ನು ಎಲ್ಲರೂ ಪ್ರೀತಿಸುವರು.

ಇದರಂತೆ, ಡಿಮಿಟ್ರಿಯು ವಯಸ್ಸಿಗೆ ಬಂದಬಳಿಕ ತನ್ನ ಒಡೆತನದಲ್ಲಿ ಇಷ್ಟೊಂದು ಭೂಮಿ ಆಸ್ತಿಗಳನ್ನಿಟ್ಟುಕೊಳ್ಳುವದು ಶುದ್ಧ ಅನ್ಯಾಯವೆಂದು ಬಗೆದು, ತನ್ನ ತಂದೆಯ ಕಡೆಯಿಂದ ಬಂದ ಭೂಸ್ವಾಸ್ತಿಯನ್ನವನು ಒಕ್ಕಲಿಗರಿಗೆ ಒಪ್ಪಿಸಿದಾಗ, ಅವನ ಮನೆಯವರಿಗೆಲ್ಲ ಆಶ್ಚರ್ಯವೇ ಆಶ್ಚರ್ಯ, ಅವರೆಲ್ಲರೂ ಅವನಿಗೆ ಹಾಸ್ಯದಿಂದ ತಲೆಕುಕ್ಕಲಾರಂಭಿಸಿದರು. ಇಷ್ಟಕ್ಕೆ ನಿಲ್ಲದೆ, ಅವರು ' ಹುಚ್ಚಾ ! ಒಕ್ಕಲಿಗರನ್ನೆಲ್ಲ ಶ್ರೀಮಂತರನ್ನಾಗಿ ಮಾಡುವ ಹುಚ್ಚಿಗೆ ಬಿದ್ದು ನೀನು ನಿನ್ನ ಭೂಮಿ ಗದ್ದೆಗಳನ್ನು ಸೂರೆಮಾಡಿದರೂ ಅವರ ಬಡತನವೆಂದಾದರೂ ಮುಗ್ಗೀತೇ ? ದೈವಗೇಡಿಗಳಿಗೆ ಏನು ಕೊಟ್ಟರೂ ಅಷ್ಟೆ ! ಅವರ ದೆಸೆಯಿಂದ ಎಷ್ಟು ಧರ್ಮಾರ್ಥ ಮನೆಗಳನ್ನು ಹೊರಡಿಸಿದರೂ ಅಷ್ಟೇ ! ಅವರ ಬಡತನ ಬಲಿಯುತ್ತ ನಡೆಯುವದೇ ಹೊರ್ತು ಅದು ಕಡಿಮೆಯಾಗದು " ಎಂದು ಅವರೆಲ್ಲರೂ ಡಿಮಿಟ್ರಿಗೆ ಅಂದು ತಲೆಕೀಸರಿಡಿಸುವರು.

ಆದರೆ, ಡಿಮಿಟ್ರಿಯು ದಂಡಿನಲ್ಲಿ ಸೇರಿದಮೇಲೆ ಕೈತುಂಬ ದುಡ್ಡುಗಳಿಸಿ ತನ್ನ ಸಿರಿವಂತ ಗೆಳೆಯರನ್ನು ಕೂಡಿಕೊಂಡು ಜ್ಯೂಜಿನ ಆಟ ಆಡಹತ್ತಿದ. ಮುಂದೆ ಅವನು ಮೆತ್ತಗೆ ದುಡ್ಡಿನ ಕೊರತೆಯಿಂದ ತಾಯಿಯ ಬಂಡವಲಕ್ಕೆ ಒಮ್ಮೊಮ್ಮೆ ಕೈಹಾಕುವನು. ಆಗ ಡಿಮಿಟ್ರಿಯ ತಾಯಿಯು ತನ್ನ ಮಗನು ಇಂಥ ಜನರ ಸಹವಾಸದಲ್ಲಿದ್ದುದಕ್ಕಾಗಿ ವ್ಯಸನಪಡುವಳು; ಮತ್ತು ಅವನಿಗೆ ಸತ್ಸಹವಾಸವಿದ್ದರೆ, ಹೀಗೆ ಮನೆ ಹಾಳು ಮಾಡುವವನಾಗುತಿರಲಿಲ್ಲವೆಂದೂ ಮಿಡುಕುವಳು.

ಡಿಮಿಟ್ರಿಯು ತನಗೆ ತಿಳಿದಂತೆ ನಡೆಯುತ್ತಿದ್ದಾಗ, ನಿಜವಾಗಿಯೂ ಅವನೊಬ್ಬ ಸಾಧು ಸತ್ಪುರುಷನೆಂತಿದ್ದ; ಆದರೆ, ಆಗ ಜನರು, ನಮ್ಮವರು ತಮ್ಮವರೆಂಬುವರು ಅವನಿಗೆ ಹಾಗೆ ಹೀಗೆ ಎಂದು ಅಲ್ಲದ ಸಲ್ಲದ ಹೆಸರಿಟ್ಟು ಅವನನ್ನು ಹುಚ್ಚನನ್ನಾಗಿ ಮಾಡಿದರು. ಅಂತೆಯೇ ಬೇಸತ್ತು ಬೇಲೀ ಹೊಕ್ಕು, ಅವನೀಗ ಜನಸಾಮಾನ್ಯವಾದ ಸುಖದ ದಾರಿ ಹಿಡಿದು, ಯಾರನ್ನೂ ನೋಡದೆ, ತನ್ನ ಸುಖ-ವಿಲಾಸಗಳಲ್ಲಿಯೇ ತಾನು ಓಲಾಡುತ್ತಿದ್ದ; ಒಂದಾನೊಂದು ಕಾಲಕ್ಕೆ ತನ್ನ ವಿವೇಕ ಬುದ್ಧಿಯನ್ನು ನಂಬಿ ನಡೆಯುವ ಡಿಮಿಟ್ರಿಯು ಈಗ ಅದನ್ನು ಒಳಗೇ ದಬ್ಬಿಹಾಕಿ, ಪರರನ್ನೇ ನೋಡಿ ನಡೆಯ ಲಾರಂಭಿಸಿದ. ಮೊತ್ತಮೊದಲು, ತನ್ನ ಬುದ್ಧಿಯನ್ನು ಮಂದಿಗೆ ಅಡವಿಟ್ಟು ನಡೆಯುವ ಈ ದಾರಿಯು ಡಿಮಿಟ್ರಿಗೆ ಒಗ್ಗಲಿಲ್ಲ; ಆದರೆ, ತನ್ನ ತೀವ್ರ ವಿವೇಕ ಬುದ್ಧಿಯ ಉಸಿರು ಕಟ್ಟಿಸಲು ಅವನು ಸಿಗರೇಟು ಸೇದುವ ಮತ್ತು ಸೆರೆ ಕುಡಿಯುವ ದುಷ್ಟ ಚಟಗಳನ್ನು ಮೈಗೆ ಹಚ್ಚಿಕೊಂಡು, ಆ ಬುದ್ಧಿಯನ್ನು ಮಂಕು ಗೊಳಸಿದನು; ಒಮ್ಮೊಮ್ಮೆ, ಅವನ ವಿವೇಕ ಬುದ್ಧಿಯು ಜಾಗೃತವಾಗಿ, ತನ್ನ ದುಷ್ಟ ನಡತೆಗಾಗಿ ಅವನಿಗೆ ಸಾಯುವ ಸಂಕಟದಷ್ಟು ಚಡಪಡಿಕೆ ಯಾಗುವದು. ಅಂತೂ ಇಂತೂ, ಒಳದನಿಯ ಸೊಲ್ಲಡಗಿ ಹೊರದನಿಯು ಗೆದ್ದಿತು. ಸೆಂಟಪೀಟರ್ಸಬರ್ಗಕ್ಕೆ ದಂಡಿನ ಕೆಲಸಕ್ಕೆಂದು ಹೋದ ಮೇಲಂತೂ ಆ ಒಳದನಿಯು ಇನ್ನೊಮ್ಮೆ ತಲೆ ಎತ್ತದಷ್ಟು ದುರ್ಬಲವಾಯಿತು.

ಸಾಮಾನ್ಯವಾಗಿ, ದಂಡಿನ ಜೀವನವೆಂಬದು ಮನುಷ್ಯನ ರೂಪು ಗೆಡಿಸುವದು. ಆ ಜೀವನ ಕ್ರಮದಿಂದ ಮನುಷ್ಯನು ಆಲಸ್ಯನಾಗಿ, ಅವನ ಬೌದ್ಧಿಕ ಜೀವನವೇ ಹಾಳಾಗುವದೆಂದರೂ ಅತ್ಯುಕ್ತಿಯಾಗದು. ಮಾನವ್ಯದ ಸಾಮಾನ್ಯ ಕರ್ಮಗಳನ್ನು ಮರೆಯಿಸಿ, ತಾನು, ತನ್ನ ದಂಡು, ಆ ದಂಡಿನ ಜನರು, ತನ್ನ ಉಡುಪು, ತನ್ನ ನಿಶಾನಿ, ಇದಕ್ಕಿಂತ ಮುಂದೆ ಹೋದರೆ, ತನ್ನ ಮೇಲಾಧಿಕಾರಿ, ಅವರ ಮಾತು ತಟ್ಟನೇ ಪಾಲಿಸುವದು, ಇವಿಷ್ಟನ್ನೇ ಅವನ ಜಗತ್ತನ್ನು ಮಾಡಿ ಬಿಡುತ್ತದೆ. ಇದು ದಂಡಿನೊಳಗೆ ಸೇರುವವರಲ್ಲಿರುವ. ವಾಡಿಕೆಯ ಜೀವನವಾದರೂ, ಇದರೊಳಗೇ ಅವನಿಗೆ ಕೊಂಚ ದ್ರವ್ಯಾನು

ಕೂಲಿ, ದೊಡ್ಡ ದೊಡ್ಡ ಮನೆತನದವರ ಒಡನಾಟ, ಇವಿಷ್ಟು ಒದಗಿದರೆ, ಅಂಥವನ ಕೈಹಿಡಿಯುವವರೇ ಇಲ್ಲ. ಅವನಿಗೆ ಸ್ವರ್ಗಮೂರೇ ಗೇಣು! ಅಂಥವನು ಸ್ವಾರ್ಥವೆಂಬ ಮದಿರೆಯನ್ನು ಕುಡಿದು ಉನ್ಮತ್ತನಾಗುವಲ್ಲೇನು ಆಶ್ಚರ್ಯ? ಒಂದಾನೊಂದು ಕಾಲಕ್ಕೆ ವಿವೇಕಶಾಲಿಯಾಗಿದ್ದ ನಮ್ಮ ಡಿಮಿಟ್ರಿಗೆ ಈ ಸ್ವಾರ್ಥದ ದೆವ್ವ ಬಡಿದುಕೊಂಡಿತು; ಅವನೀಗ ಯಾರ ಹಂಗಿನಲ್ಲಿರದ ಒಬ್ಬ ಸಿಡಿಲಾಳು. ದೊಡ್ಡ ದೊಡ್ಡ ಫಲಾಹಾರದ ಅಂಗಡಿಗಳಲ್ಲಿ ನುಗ್ಗಿ, ಬಾಯಿಗೆ ಬಂದುದನ್ನು ತಿಂದು ಹಾಕಿ, ಕೈಗೆ ಬಂದಷ್ಟು ದುಡ್ಡನ್ನು ಪೋಲು ಮಾಡಿ, ನಾಟಕ, ಸಿನೆಮಾ, ಹೆಂಗಸರೊಡನೆ ವಿಲಾಸ-ಕುಣಿತಗಳಲ್ಲಿ ಮತ್ತನಾಗಿರುವನು. ಇವೀಗ ಅವನ ಮುಖ್ಯ ಕೆಲಸಗಳು.

ಯಾವನೊಬ್ಬ ಸಾಮಾನ್ಯ ಮನುಷ್ಯನು ಈ ತೆರನಾಗಿ ಒಂದೆರಡು ದಿನ ಕಳೆದರೆ ಸಾಕು, ಅವನಿಗೆ ತನ್ನ ಬಾಳಿನ ಬಗ್ಗೆ ಬಹುನಾಚಿಕೆ ಎನಿಸಿ, ತನ್ನ ತನಗೇ ಛೀ ಅಂದುಕೊಳ್ಳುವನು; ಆದರೆ ದಂಡಿನಲ್ಲಿ ಸೇರಿದವನ ಸ್ಥಿತಿಯು ಹಾಗಿರುವದಿಲ್ಲ. ಈ ರೀತಿಯ ಜೀವನವೆಂದರೆ, ಅವನಿಗೊಂದು ಹೆಮ್ಮೆ. ಆದರೊಳಗೆ ಡಿಮಿಟ್ರಿಯು ಒಳ್ಳೇ ಯುದ್ಧದ ಸಂದು ಕಟ್ಟಿನಲ್ಲಿ–ತುರ್ಕರೊಡನೆ ರಷಿಯದವರು ಯುದ್ಧ ಹೂಡಿದಾಗ—ಸೇರಿದ್ದರಿಂದ, 'ದೇಶಕ್ಕಾಗಿ ಪ್ರಾಣ ಒಲಾಗಿಡಲು ದಂಡಿನಲ್ಲಿ ಸೇರಿದವರು, ಈ ರೀತಿ ಸ್ವೇಚ್ಛಾಚಾರಿಗಳಾಗುವದು ಕ್ಷಮ್ಯವಲ್ಲದೆ, ಅವರಿಗದು ಅವಶ್ಯ ಜೀವನವೆಂ' ದು ಅವನು ಆಗಾಗ ಸಾಧಿಸುವನು.

ಇದೀಗ ಇಂದಿನ ಡಿಮಿಟ್ರಿಯ ಮನಃಸ್ಥಿತಿ, ಅವನ ವಿಚಾರಗಳು. ಮನುಷ್ಯನು ಏನೇನೋ ಹುಚ್ಚು ಕಲ್ಪನೆಗಳಿಗೊಳಪಟ್ಟು, ನೀತಿಯ ನಿರ್ಬಂಧನೆಗಳನ್ನು ತಲೆಗೆ ಕಟ್ಟಿಕೊಂಡು, ವ್ಯರ್ಥ ಪೇಚಾಡುವದಕ್ಕಿಂತ, ಅವುಗಳನ್ನೆಲ್ಲ ತಟತಟನೆ ಹರಿದೊಗೆದು ಹಾಯಾಗಿ ಸ್ವೇಚ್ಛಾಜೀವಿಯಾಗಿರುವದು ಎಷ್ಟು ನಿಶ್ಚಿಂತೆ? ಎಷ್ಟು ಸುಸೂತ್ರ? ಎಂದು ಅವನು ಆಗಾಗ್ಗೆ ತನ್ನೊಳಗೆ ತಾನೇ ಸಂತೋಷ ಪಡುವನು.

ಈ ಬಗೆಯಾಗಿ ಎರಡು ಮೂರು ವರ್ಷ ಕಳೆದವು. ಡಿಮಿಟ್ರಿಯು ಮತ್ತೆ ತನ್ನ ಸೋದರತ್ತೆಂದಿರನ್ನು ಕಾಣಲಿಕ್ಕೆ ಬಂದ. ಕೆಲಸ ಆದ ಮೇಲೆ ಅವನು

ಸೋದರತ್ತೆಯಂದಿರನ್ನು ಕಾಣಲಿಕ್ಕೆ ಬಂದಿದ್ದು ಇದೇ. ಕೆಲವೊಮ್ಮೆ 'ಬಂದು ಹೋಗು ಬಂದು ಹೋಗು' ಎಂದೂ ಅವರೂ ಪದೇಪದೇ ಬರೆಯುತ್ತಿದ್ದರು. ಡಿಮಿಟ್ರಿಗೆ ಅವರನ್ನೆಲ್ಲ ಕಾಣಬೇಕೆಂಬ ಮೇಲಾಸೆ ಇದ್ದರೂ, ಕಟೂಷಳನ್ನು ಕಾಣುವ ಒಳ ಆಸೆಯು ಅವನ ಮನಸ್ಸನ್ನು ಒಂದೇಸಮನೇ ಮಿಡುಕಿಸುತ್ತಿತ್ತು; ಮತ್ತೆ ಒಮ್ಮೊಮ್ಮೆ 'ತಾನು ಕಟೂಷಳ ಬಳಿಯಲ್ಲಿರುವಾಗ ಇದ್ದ ಆನಂದ, ಆಕೆಯನ್ನು ಒಂದು ಸಲ ಕಂಡರೆ ಚಳಚಳಿಸುವ ಕೋಲ್ಮಿಂಚನ್ನು ಕಂಡರಾಗುವ ಮನಸಿನ ಬೆಳಕು, ಆಕೆ ಮನೆಯಲ್ಲಿ ಎಲ್ಲಿಯೋ ಒಂದೆಡೆಯಲ್ಲಿದ್ದರೂ, ಅಖಂಡವಾಗಿ ತಾನು ಹೂವಿನ ಸುವಾಸನೆಯನ್ನು ಮೂಸುತಿರುವಂಥ ಮನಸಿನ ಸೊಬಗು,' ಇವುಗಳನ್ನೆಲ್ಲ ತನ್ನೊಳಕ್ಕೆ ತಾನೇ ನೆನೆದುಕೊಂಡು ನಲಿಯುವನು, ಆ ವಿಚಾರ ಲಹರಿಯಲ್ಲಿ ತನ್ನನು ತಾ ತೇಲಿ ಬಿಡುವನು ಮರೆಯುವನು.

ಮಾರ್ಚ ತಿಂಗಳ ಕೊನೆಯ ದಿನ ಗುಡ್‌ಫ್ರಾಯಡೆ ಅಂದು. ಮಳೆಗಾಲ ಪ್ರಾರಂಭವಾಗಿತ್ತು. ಮುಗಿಲಿಗೆ ತೂತು ಬಿದ್ದಂತೆ, ಮನುಷ್ಯನ ಮೈತೋಯಿಸುವಷ್ಟು ಮಳೆಯು ತಟತಟ ಎಂದು ಹನಿಯುತ್ತಿತ್ತು. ಡಿಮಿಟ್ರಿಯ ಅಂಗಿ ಅರಿವೆಗಳೆಲ್ಲ ತೊಯ್ದು ಒದ್ದೆಯಾಗಿದ್ದವು. ಅವನಿಗೆ ಗಡಗಡ ನಡಗು ಮೈಯಲಿ; ಹೀಗಿದ್ದರೂ, ಒಂದು ಬಗೆಯ ಹುರುಪು ಅವನಿಗೆ. ಮನೆಗೆ ಬರುವಾಗ ದಾರಿಯಲ್ಲಿ 'ಮನೆಯಲ್ಲಿ ಅವಳು ಇರಬಹುದೇ' ಎಂಬುದೇ ಅವನ ಹಳವಂಡ; ಗಾಡಿಯ ಗಂಟೆಯ ಸಪ್ಪಳಕ್ಕೆ ಆಕೆ ಹೊರಗೆ ಬರುವಳೇನೋ ಎಂದುಕೊಂಡಿದ್ದ. ಬರಲಿಲ್ಲ. ಮನೆಯ ಆಳು, ಮತ್ತೆ ಸೋದರತ್ತೆ ಸೋಫಿಯಳು ಮೊದಲಿಗೇ ಭೆಟ್ಟಿಯಾದರು.

'ಒಳ್ಳೇದಾಯಿತು. ಬಂದೆ.' ಎಂದು ನಗುಮುಖದಿಂದ ಸೋಫಿಯಳು ಅವನನ್ನು ಮುದ್ದಾಡಿ, "ಮೈಯೆಲ್ಲ ಒದ್ದೆಯಾಗಿದೆಯಲ್ಲ.! ನಿನ್ನ ಕೋಣೆಗೆ ಹೋಗು ಡಿಮಿಟ್ರಿ? ಇಷ್ಟು ಬೇಗ ನಿನಗೆ ಮೀಸೆ ಒಡೆದವಲ್ಲಪ್ಪ! ಅಂತೂ ದೊಡ್ಡವನಾದಿ. ...ಕಟುಷಾ, ಓ ಕಟುಷಾ! ಬೇಗನೇ ಅವನಿಗೊಂದು ಕಪ್ಪು ಕಾಫಿ ತಂದುಕೊಡು. ಕೇಳಿಸಿತೇನು?" ಅಂದಳು.

‘ ಹಾ, ತಂದೆ. ಈಗ ಬಂದೆ.’ ಎಂದಳು. ಡಿಮಿಟ್ರಿಗೆ ಕಿವಿ ಚಾಟಾಗಿರುವ ಮಂಜುಳ ದನಿಯು ಒಳಗಿಂದ ಬಂದೊಡನೆ ಮೈ ಜುಮ್ಮೆಂದಿತು. ಇಷ್ಟುದಿನ ಕತ್ತಲೆಗವಿದ ಕಣ್ಣುಗಳು ಬೆಳಕು ಕಂಡಷ್ಟು ಆನಂದ ಅವನಿಗೆ. ಉಪವಾಸ ವಿದ್ದ ಕಿವಿಗಳಿಗೆ ಪಾರಣೆಯಾದ ಸುಖ. ತನ್ನ ಮೈಮೇಲಿನ ಒದ್ದೆಬಟ್ಟೆಗಳನ್ನೆಲ್ಲ ಬಿಚ್ಚಿಡಲಿಕ್ಕೆ ಡಿಮಿಟ್ರಿಯು ಕೋಣೆಯಲ್ಲಿ ಹೊಕ್ಕನು. ಅಲ್ಲಿದ್ದ ಆಳು ಮಗನಿಗೆ ಕಟೂಷಳ ವಿಷಯವಾಗಿ ಏನೇನೋ ವಿಚಾರಿಸಬೇಕೆಂದು ಡಿಮಿಟ್ರಿಗೆ ಚಪಲ; ಆದರೂ ಅವನಿಗೆ ಸಂಕೋಚ. ಆದುದರಿಂದ ಅವನ ಕ್ಷೇಮಸಮಾಚಾರ ವನ್ನಷ್ಟೇ ಮಾತ್ರ ಕೇಳಿಕೊಂಡ.

ಇಷ್ಟರಲ್ಲಿ, ಬಾಗಿಲಬಳಿಯಲ್ಲಿ ಯಾರೋ ಬಂದಿರುವಂತೆ ಸಪ್ಪಳಾಯಿತು. ಆ ನಡಿಗೆಯ ಸಪ್ಪಳ, ಆ ಚಟುವಟಿಕೆಗಳು ಕಿವಿಗೆ ಬಿದ್ದರಾಯಿತು, ಡಿಮಿಟ್ರಿಗೆ ಆಕೆ ಬಂದಳೆಂದೇ ನಿಶ್ಚಯ, ಮತ್ತು ಅವನ ಅನುಮಾನವು ಎಂದೂ ತಪ್ಪು ತಿರಲಿಲ್ಲ. ಇಂದೂ ಹಾಗಾಯಿತು.

ಡಿಮಿಟ್ರಿಯು ಬಾಗಿಲ ಚಿಲಕತೆಗೆದು ‘ ಒಳಗೆ ಬನ್ನಿ’ ಎಂದ. ಕರಿಗಿನ ಝುಗೆಯ ಮೇಲೆ ಬೆಳ್ಳಕ್ಕಿಯ ಬಣ್ಣದಂತೆ ಅಚ್ಚ ಬೆಳ್ಳನ್ನ ಅಂಗವಸ್ತ್ರವನ್ನು ಕಟ್ಟಿಕೊಂಡು ಎಳೆಹರೆಯದ, ನಳನಳಿಸುವ ಏರು ಯೌವನದ ಆ ತರುಣಿಯು ಚಳ್ವಿಕೆಯ ಓರೆಗಣ್ಣಿನಿಂದ ನೋಡುತ ಮೆಲ್ಲಗೆ ಒಳಗೆ ಕಾಲಿಟ್ಟಳು. ಬಹು ದಿನಗಳಿಂದ ತಾನು ಮನಸಿನಲ್ಲಿಯೇ ಧೇನಿಸುತ್ತಿದ್ದ ಆ ರಮಣೀಯ ಮೂರ್ತಿಯು. ಅಂದಿನದಿಂತಲೂ ಇಂದು ಆಕೆ ಹೆಚ್ಚು ರುಚಿ ಹೆಚ್ಚು ಸುಂದರಿ, ಹೆಚ್ಚು ಸ್ಫುರದ್ರೂಪಿ. ಕೈಯಲ್ಲಿ ಅದೇ ತೆರೆದ ಒಂದು ವಾಸನೆಯ ಸಬಕಾರು ಗಂಜಿಮಾಡಿದ ಎರಡು ಅಂಗವಸ್ತ್ರಗಳು; ಮುಂದಿರುವ ಮೇಜಿನ ಮೇಲೆ ಅವುಗಳನ್ನು ಇಟ್ಟು, ‘ ಡಿಮಿಟ್ರಿ, ಎಲ್ಲವೂ ಸೌಖ್ಯವೇ?’ ಎಂಬೀ ನಾಲ್ಕು ಇನಿಮಾತುಗಳನ್ನು ಆಡಬೇಕಾದರೆ, ಆಕೆಯ ಮುಖವೆಲ್ಲ ನಾಚಿಕೆಯಿಂದ ಕೆಂಪೇರಿ, ಬೆವೆತು, ಮುತ್ತಿನಂತಹ ಹನಿಗಳು ಹಣೆ, ಮೂಗು, ತುಟಿಗಳಲ್ಲಿ ಚಿಮ್ಮಿ ಆಕೆಯ ಸೌಂದರ್ಯವನ್ನು ಇಮ್ಮಡಿಸಿದವು; ಆದರೂ ಧೈರ್ಯ ಮಾಡಿ, ಆಕೆ ‘ ನಿಮಗೆ ಬೇಕಾಗುವ ಸಾಮಾನುಗಳು ಇಲ್ಲಿವೆ ’ ಎಂದು ಹೇಳಿ ಹೊರಟಳು.

ಇಂದು ಡಿಮಿಟ್ರಿಯು ಬಂದುದಕ್ಕಾಗಿ ಎಲ್ಲರಿಗೂ ಹಿಂದಿನಕ್ಕಿಂತ ಹೆಚ್ಚು ಹಿಗ್ಗು. ಅವನೇನೋ ಒಂದೆರಡು ದಿನವಿದ್ದು ಹೋಗಬೇಕೆಂದು ಬಂದವನು; ಆದರೆ, ಕಟೂಷಳನ್ನು ಕಂಡೊಡನೆ, ಆ ಸ್ಥಳವನ್ನು ಬಿಟ್ಟಗಲುವದು ಅವನ ಪ್ರಾಣಕ್ಕೆ ಬಂತು. ಹೊರಡುವ ದಿನ ಮುಂದೆ ಹಾಕಿದ. ಹಿಂದಿನಂತೆ, ಈಗ್ಯೂ ಅವನ ಅಂತರಂಗದಲ್ಲಿ ವಿವೇಕ ಬುದ್ಧಿಯ ಕಿಡಿಯು ತನ್ನಷ್ಟಕ್ಕೆ ತಾನೆ ಹೊತ್ತಿಕೊಂಡು ಮತ್ತೆ ಉರಿಯಲಿಕ್ಕೆ ಮೊದಲುಮಾಡಿತು. ಇಲ್ಲಿರುವದರಿಂದ ತನಗೇನೂ ಪ್ರಯೋಜನವಿಲ್ಲವೆಂದು ಅವನಿಗೆ ಹೊಳೆದಿದ್ದರೂ ತಿಳಿದೂ ತಿಳಿದೂ ತನ್ನ ತಪ್ಪನ್ನು ಕ್ಷಣಹೊತ್ತು ಒಪ್ಪಿ, ಆ ಸುಕುಮಾರ ಮನೋಜ್ಞ ಮೂರ್ತಿಯನ್ನು ಬಿಟ್ಟಿರಲಾಗದೆ ನಿಂತಿದ್ದನು.

ಆಗ ಈಶ್ವರ ರಜೆಯ ದಿವಸ. ನಮ್ಮ ಜಮೀನದಾರ ಒಡತಿಯರಿಗೆ ಕ್ರಿಸ್ತಸೇವೆಯನ್ನು ಸಲ್ಲಿಸಲಿಕ್ಕೆಂದು ಚರ್ಚಕ್ಕೆ ಹೋಗಬೇಕಾಗಿತ್ತು. ಕಟೂಷಳು ಮೊದಲೇ ಹೋಗಿದ್ದಳು. ಕತ್ತಲೆ, ದಾರಿ ಚನ್ನಾಗಿರಲಿಲ್ಲ. ಅಲ್ಲಲ್ಲಿ ಗುಂಡಿಗಳು, ತೆಗ್ಗು-ದಿನ್ನೆಗಳು, ಇಂಥದರೊಳಗಿಂದ ಹೋಗುವದೆಂತು? ಅವರು ಯೋಚನೆಯಲ್ಲಿದ್ದರು. ಅವರಿಗೊಂದು ಒಳ್ಳೇ ಜೊತೆ ಬೇಕಾಗಿತ್ತು. ' ಸಂಗಡ ಯಾರು ಬರಬೇಕು? ' ಎಂದು ಅವರು ಗೊಣಗುವದು ಡಿಮಿಟ್ರಿಯ ಕಿವಿಗೆ ಕೇಳಿಸಿತು. ' ನಾನು ನಿಮ್ಮೊಡನೆ ಬರುವೆ ' ಹೀಗೆಂದು ಕುದುರೆಗೆ ಜೀನು ಹಾಕಲಿಕ್ಕೆ ಹೇಳಿದ. ಸೋದರತ್ತೆಂದಿರ ಮನೆಯೆಂದರೆ, ಅವನಿಗೆ ತನ್ನ ಮನೆಯಾಗಿತ್ತು. ತಾನು ಕಾಲಲ್ಲಿ ಮೊಳಕಾಲವರೆಗಿನ ಬೂಟು, ಕಾಲುಚೀಲು, ತನ್ನ ದಂಡಿನ ಉಡುಪು. ಮೇಲು ಹೊದಿಕೆ ಮುಂತಾದವುಗಳಿಂದ ಅಣಿಯಾಗಿ ಕುದುರೆ ಹತ್ತಿ ನಡೆದನು. ಅನೇಕ ದಿನ ಯಾರೂ ಹತ್ತದೆ, ಬರಿಯ ಮೇಯಿಸಿಮೇಯಿಸಿ ಕಟ್ಟಿದ ಹಳೆ ಕುದುರೆ, ಘುರುಗುಟ್ಟುತ್ತ, ಕಾಲು ಝಾಡಿಸುತ್ತ, ಬಾಲ ಅಲ್ಲಾಡಿಸುತ್ತ ಲುಟು ಲುಟು ನಡೆಯಿತು.

ಇಂದಿನ ಪ್ರವಾಸವೆಂದರೆ, ಡಿಮಿಟ್ರಿಗೆ ಎಂದೂ ಮರೆಯದ ಸಂಗತಿ. ಕುದುರೆ ಹತ್ತಿ ಕತ್ತಲೆಯೊಳಗಿಂದ ನಡೆದಾಗ ಕಾಳರಾತ್ರಿ. ಅಲ್ಲಲ್ಲಿ ಮಂಜು ಬಿದ್ದು ಅದರ ತಳತಳಿಸುವ ಬೆಳಕಿನ ಹೊರ್ತಾಗಿ ಬೇರೆ ಬೆಳಕಿಲ್ಲ. ದೀಪದ ಸಾಲುಗ

ಳಿಂದ ಈಗ ಝಗ ಝಗಿಸುತ್ತಿದ್ದ ಚರ್ಚವು ದೂರಿಂದಲೇ ಕಾಣಿಸಿತು; ಅವರೆ ಡಾರಿ ಕಾಣಿಸುವದು ದುಷ್ಕರ. ದಾರಿಯಲ್ಲಿ ಕೆಲಜನ ಒಕ್ಕಲಿಗರು ಸೇವೆಗೆಂದು ಚರ್ಚಕ್ಕೆ ನಡೆದಿದ್ದರು. ಅವರು ಡಿಮಿಟ್ರಿಯ ಗುರುತು ಹಿಡಿದು, ದೀಪಕ್ಕೆ ಹೆದರಿದ ಕುದುರೆಯ ಕಡಿವಾಣ ಹಿಡಿದು ಕತ್ತಲೆಯೊಳಗಿಂದ ಅದನ್ನು ದಾರಿಗೆ ಒಯ್ದರು. ಅಂತು, ಡಿಮಿಟ್ರಿಯು ಈಗ ಹೇಗೋ ಚರ್ಚಕ್ಕೆ ಬಂದು ತಲ್ಪಿದನು. ಕುದುರೆಯನ್ನು ಕಟ್ಟಲಿಕ್ಕೆ ಒಕ್ಕಲಿಗರಿಗೆ ಹೇಳಿ ತಾನು ಒಳಗೆ ಹೋದನು. ಅಂದು ಕ್ರಿಸ್ತನು ಹುಟ್ಟುವ ಹಬ್ಬ. ಚರ್ಚವೆಲ್ಲವೂ ಹೂ, ದೀಪ ಮತ್ತು ಹೊಸತರದ ಹೊಳಪಿನಿಂದ ಹೊಳೆಯುತ್ತಿತ್ತು. ಒಂದು ಮಗ್ಗಲಿಗೆ ಕೈ ನೂಲಿನಿಂದ ನೇದ ಬಟ್ಟೆಯನ್ನು ಹಾಕಿಕೊಂಡು, ಕಾಲುಗಳಿಗೆ ಉಣ್ಣೆಯ ಬಟ್ಟೆಗಳನ್ನು ಸುತ್ತಿಕೊಂಡು, ನಿಂತಿರುವ ಮುದುಕರು, ಅವರ ಪಕ್ಕದಲ್ಲಿಯೇ ಹೊಸ ಅಂಗಿ, ಹೊಸ ಕೋಟು, ಟೊಂಕಕ್ಕೆ ಪಟ್ಟೆಗಳನ್ನು ಸುತ್ತಿಕೊಂಡು, ಲಕಲಕ ಹೊಳೆಯುವ ಬೂಟುಗಳೊಂದಿಗೆ ನಿಂತಿರುವ ಆ ಯುವಕರು; ಎಡಕ್ಕೆ ನಾನಾಬಗೆಯ ಬಣ್ಣಬಣ್ಣದ ಝಗ, ಕಾಲುಚೀಲು, ಬೂಟುಗಳನ್ನು ಹಾಕಿ ತಲೆಗೆ ರೇಶ್ಮೆಯ ಕರವಸ್ತ್ರಗಳನ್ನು ಸುತ್ತಿಕೊಂಡು ತಾರುಣ್ಯದ ಭರದಿಂದ ಥಳಥಳ ಜೆಳಗುತ್ತ ಓರಿಗೆಯ ಎಳೆ ತರುಣರ ಮನಸೆಳೆಯುತ ನಿಂತಿರುವ ಎಳೆ ಹರೆಯದ ಹೆಣ್ಣುಮಕ್ಕಳು; ಅವರ ಹಿಂದೆ ಸಾದಾ ಉಡುಪಿನಲ್ಲಿ ಹರೆಯಿಳಿದ ಸೌಮ್ಯ ಮುಖಗಳಿಂದಲೂ ಭಕ್ತಿಯಿಂದಲೂ ನಿಂತಿರುವ ತಾಯಂದಿರು, ಎಲ್ಲಕ್ಕೂ ಮುಂದೆ ಮುದ್ದು ಮುದ್ದಾಗಿ, ಅಚ್ಚುಕಟ್ಟಾಗಿ ಹಿಕ್ಕೆ ಬಾಚಿಕೊಂಡು, ಕೂದಲು ಸಡಿಲು ಬಿಟ್ಟುಕೊಂಡು, ಹೂ ಮುಡಿದು ಕೊಂಡು ನಿಂತಿರುವ ಮಾಟಮುಖದ ಚಿಕ್ಕ ಚಿಕ್ಕ ಮುದ್ದುಮಕ್ಕಳು, ಎಲ್ಲಕೂ ಹಿಂದೆ, ದೊಡ್ಡ ದೊಡ್ಡ ಅಧಿಕಾರಿಗಳು, ಸಿರಿವಂತರು, ಪೋಲೀಸ ಆಫೀಸರರು, ಅವರೊಳಗೆ ಮುಂದೆದೆಯಲ್ಲಿ ಕಟೂಷಳು ಬೆಳ್ಳಗಿನ ವಸ್ತ್ರಗಳಲ್ಲಿ ಕರಿಕರಿಯಾಗಿ ನಯವಾಗಿ ಜೋಲು ಬಿದ್ದಿರುವ ಕೂದಲಿನ ಜಡೆಯಲ್ಲಿ ಒಂದು ಗುಲಾಬಿ ಹೂ ಮುಡಕೊಂಡು ಭಯಭಕ್ತಿಯಿಂದ ನಿಂತಿದ್ದಳು,

ಒಟ್ಟಾರೆ, ಚರ್ಚಿನ ದೃಶ್ಯವು ಬಹು ಸುಂದರ, ಗಂಭೀರ, ಉತ್ಕಟಮಯ ವಾಗಿತ್ತು. ಮನಸಿನಲ್ಲಿ ಭಕ್ತಿಯ ತರಂಗಗಳನ್ನೆಬ್ಬಿಸುವ ಪ್ರಾರ್ಥನೆ, ಇಂಪಾದ

ವಾದ್ಯ, ಇವುಗಳಿಂದ ಆ ಚರ್ಚು ದುಮುಗುಟ್ಟುತ್ತಿತ್ತು. ಧರ್ಮೋಪದೇಶಕನು ಕೈಯಲ್ಲೊಂದು ಹೂಗಳಿಂದ ಅಲಂಕರಿಸಿದ ಮೇಣ ಬತ್ತಿಯನ್ನು ಹಿಡಿದು, 'ಕ್ರಿಸ್ತನು ಹುಟ್ಟಿ ಬಂದನು, ಕ್ರಿಸ್ತನು ಹುಟ್ಟಿದನು,' ಎಂದು ತಿರುತಿರುಗಿ ಅಂದನು. ಎಲ್ಲರ ಕಣ್ಣುಗಳು ಅವನ ಕಡೆ ಸೆಳೆದವು; ಹಲವರ ಕಣ್ಣುಗಳಲ್ಲಿ ಭಕ್ತಿ ಭರದಿಂದ ನೀರು ತುಳುಕಿದವು. ಕಟೂಷಳ ಮನಸು ಬಹು ನಿರ್ಮಲ. ಆಕೆಯೆಂದರೆ, ತಿಳಿನೀರಿನ ಒರತೆ. ಕೇಳುವದೇನು? ಇಷ್ಟೆಂದೊಡನೆ ಆಕೆ ಭಕ್ತಿ ನಿರ್ಭರಳಾದಳು. ಕಣ್ಣುಗಳಲ್ಲಿ ನೀರುನಿಂತು ಪಳಪಳ ಹೊಳೆದವು. ಡಿಮಿಟ್ರಿಯು ದೂರಿಂದಲೇ ಇದನ್ನು ನೋಡಿದನು. ಆ ಮುದ್ದು ಮುದ್ದಾಗಿರುವ ಮುಖ ನೋಡಿ ಜೇನು ಹುಟ್ಟಿಗೆ ಜೇನು ಮುಕ್ಕುರುವಂತೆ ಅವನು ಮೆಲ್ಲಗೆ ಆಕೆಯ ಬಳಿ ನಡೆದನು. ಡಿಮಿಟ್ರಿಯನ್ನು ಕಂಡು ಆಕೆಗೆ ಮುಗುಳುನಗೆ. ಅದೇ ಅವನಿಗೆ ಉತ್ಸವ.

ಪ್ರಾರ್ಥನೆಯು ಮುಗಿದ ಮೇಲೆ ಡಿಮಿಟ್ರಿಯು ಅಲ್ಲಿ ನಿಲ್ಲದೆ, ಅಷ್ಟು ಜನರ ದಟ್ಟಣೆಯೊಳಗಿಂದ ಹಾಯ್ದು ಹೊರಗೆ ಬಂದು ಕಟ್ಟೆಯ ಮೇಲೆ ನಿಂತನು. ಹೊರಗೆ ದಾರಿಕಾಯುತ್ತ ನಿಂತಿರುವ ಭಿಕ್ಷುಕರು ಅವನು ಬಂದೊಡನೆ ಸುತ್ತು ಮುತ್ತಿದರು. ಅವನಾದರೂ ತನ್ನ ಜೇಬಿನಲ್ಲಿರುವ ದುಡ್ಡು ಕಾಸುಗಳನ್ನೆಲ್ಲ ಅವರಿಗೆ ಹಂಚಿ ಕಡೆಗಾದನು. ಆಗ ತಾನೇ ಮೂಡಲು ಹರಿದು, ಸೂರ್ಯ ಮೂಡುವದರಲ್ಲಿದ್ದ. ಕಟೂಷಳು ಇನ್ನೂ ಒಳಗೇ ಇದ್ದಳು. ಆಕೆ ಬರುವದನ್ನೇ ನಿರುಕಿಸುತಲಿದ್ದ ಡಿಮಿಟ್ರಿಯು; ಅವನ ಗುರುತಿನ ಒಬ್ಬಿಬ್ಬರು ಮುದುಕರು ಈಸ್ಟರ ಹಬ್ಬದ ಮುದ್ದುಕೊಡಬೇಕೆಂದು ತಲೆ ಅಲ್ಲಾಡಿಸುತ್ತ ಅವನ ಹತ್ತಿರ ಹೋಗಿ, ತಮ್ಮ ಕರವಸ್ತ್ರದಲ್ಲಿ ಮುಚ್ಚಿದ ಒಂದು ತತ್ತಿಯನ್ನು ಅವನ ಕೈಯಲ್ಲಿಟ್ಟು, ಹಿಗ್ಗಿದ ಕಣ್ಣುಗಳಿಂದ ಅಪ್ಪಿಕೊಂಡು ಮೂರುಸಲ ಮುದ್ದಿಟ್ಟರು.

ಕಟೂಷಳು ಈಗ ಒಳಗಿಂದ ಹೊರಗೆ ಬಂದಳು. ಆನಂದದಿಂದ ಆಕೆಯ ಮುಖ ಹೊಳೆಯುತ್ತಿತ್ತು. ತನ್ನ ಮುಂದೆ ನಿಂತಿರುವ ಭಿಕ್ಷುಕರಿಗೆ ದುಡ್ಡು ಕಾಸು ಕೊಟ್ಟಳು. ಒಬ್ಬ ಜಡಭಿಕಾರಿಯು, ಅವನಿಗೆ ಮೂಗಿರಲಿಲ್ಲ. ಅಂಥವನು

ಇತ್ತ ಬಂದು ಒಂದು ಕಾಸು ಬೇಡಿದನು. ಕಟೂಷಳು ಅವನನ್ನು ಹತ್ತಿರಕೆ ಕರೆದು, ಹೇಸಿಕೊಳ್ಳದೆ, ದೈವಿಕ ಆನಂದದಿಂದ ಅವನನ್ನು ಮೂರು ಸಲ ಮುದ್ದಿಸಿದಳು. ಈಗ ಆಕೆಯ ಕಣ್ಣಿಗೆ ಎಲ್ಲವೂ ಚೆಲುವು, ಎಲ್ಲವೂ ಒಳಿತು, ಎಂದೇ ಕಾಣಿಸಿತು. ಡಿಮಿಟ್ರಿಯು ತನ್ನ ನಲ್ಲೆಯನ್ನು ಕಂಡು ಅಲ್ಲಿಯೇ ಹೋಗಿ ನಿಂತನು. ಕಟೂಷಳನ್ನು ಮುದ್ದಿಸಲು ಹತ್ತರ ಹೋದಾಗ ಆಕೆಯು ನಾಚಿಕೆಯಿಂದ ಕೊಂಚ ಅಳುಕಿದಳು; ಆದರೂ ಅವನು ಎರಡು ಸಲ ಆಕೆಗೆ ಮುದ್ದಿಟ್ಟು, ಸ್ವಲ್ಪ ತಡೆದು, ಮೂರನೇಯ ಮುದ್ದನ್ನು ತೆಗೆದುಕೊಂಡೇ ಬಿಡಬೇಕೆಂದು ಗಟ್ಟಿಯಾಗಿ ಅಧರಾಮೃತಸವಿದು ತೃಪ್ತಿಪಟ್ಟಂತೆ ನಸುನಕ್ಕನು.

ಡಿಮಿಟ್ರಿಯು ' ಹೊತ್ತಾಯಿತು. ಚರ್ಚದೊಳಗೆ ಹೋಗುವದಿಲ್ಲವೇ, ' ಅಂದನು. ಕಟೂಷಳು ' ಇಲ್ಲೇ ಸ್ವಲ್ಪೊತ್ತು ಕೂಡ್ರೋಣ ! ' ಎಂದು ಸಿಗ ಬಾರದ ವಸ್ತು ಕೈಗೆ ಬಂದ ಆನಂದದಿಂದಲೂ, ಸ್ವಲ್ಪ ದಾಕ್ಷಿಣ್ಯದಿಂದಲೂ ನುಡಿದಳು. ಇಷ್ಟು ನುಡಿಯುವಾಗ ಆಕೆಯ ಎದೆ ಹಾರುತ್ತಿತ್ತು. ಆಕೆಗೆ ತುಂಬಾ ನಾಚಿಕೆ. ಆದರೂ ಡಿಮಿಟ್ರಿಯಲ್ಲಿ ಒಂದು ಬಗೆಯ ಪ್ರೀತಿ ಇದ್ದುದ ರಿಂದ ನಿಷ್ಕಲ್ಮಷ ದೃಷ್ಟಿಯಿಂದ ಅವನನ್ನು ತಿರುತಿರುಗಿ ಓರೆನೋಟದಿಂದ ನೋಡಿ ಸಂತೋಷಪಟ್ಟಳು; ಆದರೆ, ಆ ಓರೆನೋಟದಲ್ಲಿ ಯಾವ ಬಗೆಯ ವೈಷಯಿಕ ಸುಖದ ಬೆರಕೆ ಇರಲಿಲ್ಲ. ಇದೀಗ ಸ್ತ್ರೀ ಪುರುಷರ ಪ್ರೇಮದ ಅತ್ಯುಚ್ಚ ಸ್ಥಿತಿಯ ಕ್ಷಣ. ಈ ಪ್ರೇಮದಲ್ಲಿ ವಿಷಯದ ಅರಿವು, ತನ್ನ ಅರಿವು ಎನೂ ಇರುವದಿಲ್ಲ. ಇಂದು ಅವರಿಬ್ಬರಲ್ಲೂ ದೈವಿಕ ಪ್ರೇಮದ ಗಾಳಿಯು ಸುಳಿದಿತ್ತು. ಮರುಕ್ಷಣ, ಈಕೆ ಕಟೂಷಳು, ತಾನು ಇಂಥವನು ಎಂಬುವ ಅರಿವು ಹುಟ್ಟಿದಾಕ್ಷಣವೇ ಅದೆಲ್ಲ ಮಾಯವಾಯಿತು. ಕಟೂಷಳೆಂದರೆ, ಪ್ರೇಮದ ಪುತ್ತಳಿ, ಪಾವಿತ್ರ್ಯದ ಮಣಿ ಎಂದು ಅಂದುಕೊಂಡನು.

ಚರ್ಚದ ಕೆಲಸ ಮುಗಿಸಿಕೊಂಡು ಡಿಮಿಟ್ರಿಯು ಅತ್ತೆ ಮುಂತಾದವ ರೊಡನೆ ಮನೆಗೆ ಬಂದನು. ಎಲ್ಲರೂ ಕೂಡಿಕೊಂಡು ಊಟ ಮಾಡಿದರು. ಡಿಮಿಟ್ರಿಯು ದಂಡಿನಲ್ಲಿ ಸೇರಿದಾಗಿನಿಂದ ಅವನಿಗೆ ಸೆರೆ ಕುಡಿತದ ಚಟ. ಅದನ್ನು ತೆಗೆದುಕೊಳ್ಳದೆ ಮನಸು ಸಮಾಧಾನವಿರುತ್ತಿದ್ದಿಲ್ಲ; ಅಂತವನು

ಒಂದು ಗ್ಲಾಸು ಸೆರೆ ತಕ್ಕೊಂಡು, ಅಮಲೇರಿದ್ದರಿಂದ ಮೈಯಲ್ಲಿ ಕೋಟು ಮುಂತಾದ್ದು ಇದ್ದಕ್ಕಿದ್ದಂತೆಯೇ ಮಲಗಿದನು. ಹಾಸಿಗೆಗೆ ಮೈ ಹಚ್ಚುವದೇ ತಡ. ಅವನಿಗೆ ಗಾಢ ನಿದ್ದೆ. ಇಷ್ಟರಲ್ಲಿ ಕೋಣೆಯ ಬಾಗಿಲನ್ನು ಯಾರೋ ಟಕ್ ಟಕ್ ಎಂದು ಬಡಿದ ಸಪ್ಪಳ ಕೇಳಿಸಿತು. ನಿದ್ದೆಗಣ್ಣಿನಲ್ಲಿದ್ದ ಡಿಮಿಟ್ರಿಗೆ ಸ್ವಲ್ಪ ಎಚ್ಚರ; ಸ್ವಲ್ಪ ಮಬ್ಬು. ಕಟೂಷಳೇ ಇರಬಹುದೆಂದು ಅವನಿಗೆ ಹೊಳೆಯಿತು. ತಟ್ಟನೆ ಕಣ್ಣುತಿಕ್ಕಿಕೊಳ್ಳುತ ಮೈಕೈ ಮುರಿದುಕೊಂಡು ಆಕಳಿಸುತ ಎದ್ದು ಕದ ತೆರೆದನು. ' ಕಟೂಷಳೇನು ? ಬಾ ಒಳಗೆ ? ' ಅಂದನು.

ಆಕೆ ಮೆಲ್ಲಗೆ ನಾಚುತ ಒಳಗೆ ಬಂದಳು. ಮೈಯಲ್ಲಿ ಮೊದಲಿನ ಅದೇ ಬಿಳಿಯ ಉಡುಪು; ನಗೆಮುಖದಿಂದ ಡಿಮಿಟ್ರಿಯನ್ನು ನೋಡಿ ' ಅಡಿಗೆ ಯಾಗಿದೆ ' ಎಂದು ಹೇಳಿದಳು.

ಡಿಮಿಟ್ರಿಯು— ' ಇದೇ ಬಂದೆ. ' ಎಂದನುತ ಕೈಯಲ್ಲಿ ಬಾಚಣಿಕೆ ಯನ್ನು ತೆಗೆದುಕೊಂಡು ತನ್ನ ಕ್ರಾಪ ಸರಿಪಡಿಸಿಕೊಳ್ಳಹತ್ತಿದ.

ಕಟೂಷಳು ಒಂದರಕ್ಷಣ ನಿಂತಳು. ಡಿಮಿಟ್ರಿಯು ತನ್ನ ಕೈಯಲ್ಲಿಯ ಬಾಚಣಿಕೆಯನ್ನು ಕೆಳಗೆ ಇಟ್ಟು ಒಂದು ಹೆಜ್ಜೆ ಮುಂದಿಟ್ಟನು; ಕೂಡಲೇ ಕಟೂಷಳು ಗರ್‍ರನೆ ತಿರುಗಿ ಲಗುಬಗೆಯಿಂದ ಹೊರಟಳು.

ಡಿಮಿಟ್ರಿಗೆ ಹೊಟ್ಟೆಯಲ್ಲಿ ಏನೋ ಒಂದು ವಿಧದ ಕಲಿವಿಲಿ. ' ನಾನೇಕೆ ಆಕೆಯನ್ನು ಹಾಗೇ ಹೋಗಗೊಟ್ಟೆ. ನಿಲ್ಲಿಸಿದ್ದರೆ ಆಗುತ್ತಿತ್ತು. ' ಹೀಗೆಂದು ಅವನು ಆಕೆಯ ಹಿಂದಿಂದೆ ದಡದಡನೆ ಓಡಿ ಆಕೆಯನ್ನು ಹಿಡಿದು ನಿಲ್ಲಿಸಿ ' ಕಟೂಷಾ ! ನಿಲ್ಲು ' ಅಂದನು.

' ಯಾಕೆ ? ಏನು ಕೆಲಸ ? ' ಅಂದಳು.

' ಏನಿಲ್ಲ. ಸುಮ್ಮನೆ ! ' ಎಂದು ಆಕೆಯನ್ನು ಕಣ್ಣುತುಂಬನೋಡಿ ಅಪ್ಪಿಕೊಂಡನು.

' ಹಾಗೆ ಮಾಡಬಾರದು. ಡಿಮಿಟ್ರಿ ? ಹಾಗಲ್ಲ. ' ಎಂದು ನಾಚಿ ನುಡಿದಾಗ ಆಕೆಯ ಮುಖ ಕೆಂಪೇರಿತು. ಕಣ್ಣಲ್ಲಿ ನೀರುನಿಂತವು; ತನ್ನ

ಕೊರಳಿಗೆ ಹಾಕಿದ ಕೈಯನು ಮೆಲ್ಲಗೆ ತೆಗೆದು ನಡೆದಳು. ಡಿಮಿಟ್ರಿಯು ಆಕೆಯನ್ನು ಬಿಟ್ಟನು; ಆದರೆ ಆವನ ಮನಸು ಕಲಕಾಗಿ ತನ್ನೊಳು ತಾನೇ ಒದ್ದಾಡಿದನು. ಆಕೆಯೊಡನೆ ಹಾಗೆ ನಡೆವುಕೊಂಡದ್ದು ತಪ್ಪೆಂದು ತಿಳಿದು, ಹೊಗುತ್ತಿದ್ದವಳನ್ನು ಹಿಡಿದು ತರುಬಿ ಮತ್ತೊಮ್ಮೆ ಮುತ್ತಿಟ್ಟನು.

ಇದು ವರೆಗೆ ಅವನು ಮುದ್ದುಗಳಲ್ಲಿ ಯಾವ ಬಗೆಯ ವಿಷಯದ ಕೊಂಡಿ ಇರಲಿಲ್ಲ. ಅದು ಈಗಿನ ಮುದ್ದಿನಲ್ಲಿ ತುಂಬಿತ್ತಾಗಿ ಆಕೆಗೆ ಅನಿಸಿ, 'ಇದೇನು, ಡಿಮಿಟ್ರಿ ? ಹೀಗೇಕೆ ಮಾಡುವೆ ?' ಎಂದು ಕಟೂಷಳು ತನ್ನ ದೇನೋ ಘಾತವಾಯಿತೆಂಬಂತೆ ಕೆಟ್ಟ ದನಿಯಿಂದ ಕೂಗಿದಳು. ಡಿಮಿಟ್ರಿಯ ಮನಸೂ ಕಚ್ಚ ಅಂದಿತು.

ಅವನು ಸುಮ್ಮನೆ ಮುಖ ಸಣ್ಣಗೆ ಮಾಡಿಕೊಂಡು ಭೋಜನ ಶಾಲೆಗೆ ಬಂದ. ಸೋದರತ್ತೆಂದಿರು, ಅತಿಥಿಗಳು ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು ಡಿಮಿಟ್ರಿಯ ಮನಸಿನಲ್ಲಿ ಬಿರುಗಾಳಿ. ಅವನಿಗೆ ಕಟೂಷಳ ವಿಚಾರವೇ ವಿಚಾರ, ಆಕೆಯ ಮುದ್ದು ತೆಗೆದುಕೊಂಡದ್ದರ ಸ್ಪರ್ಶಸುಖವನ್ನವನು ತಿರುಗಿ ಮುರಗಿ ನೆನಪು ಮಾಡಿ ಮಾಡಿಕೊಂಡು ಅದೇ ಸುಖದಲ್ಲಿಯೇ ತೇಲುವನು. ಅದೇ ಗುಂಗಿನಲ್ಲಿಯೇ ಊಟವಾಯಿತು. ಕಟೂಷಳ ಸ್ಪರ್ಶಸುಖವು ನೆನಪಾದೊಡನೆ, ಅವನ ಮೈ ಜುಮ್ಮೆಂದು ಮನಸು ಅದನ್ನೇ ನೆನಿಸಿಕೊಂಡು ಸುಖಪಡುವದು

ಊಟವಾದಬಳಿಕ ಡಿಮಿಟ್ರಿಯು ತನ್ನ ಕೋಣೆಗೆ ಹೋದ. ಮನಸು ಸ್ವಸ್ಥವಿಲ್ಲದ್ದರಿಂದ ನಿದ್ದೆಬರಲಿಲ್ಲ. ಎದ್ದು ಅತ್ತಿತ್ತ ಹೆಜ್ಜೆ ಹಾಕಹತ್ತಿದ. ಮನಸಿನಲ್ಲಿ ಕಟೂಷಳ ಮೂರ್ತಿ ಮನೆ ಮಾಡಿಕೊಂಡು, ಆಕೆಯ ಹೆಜ್ಜೆಯ ಸಪ್ಪಳ ಕೇಳಿದಂತೆ ಭ್ರಮೆ ಅವನಿಗೆ. ಅವನ ಮನದೊಳಗೆ ಈಗ ತಾನೇ ಕಾಮದೇವನು ಎಚ್ಚತ್ತು, ಮೆಲ್ಲಗೆ ತಲೆಯೆತ್ತಲಿಕ್ಕೆ ಮೊದಲು ಮಾಡಿದ್ದನು. ಅದರಿಂದ ಡಿಮಿಟ್ರಿಯ ಶುದ್ಧ ನಿರ್ಮಲ ಹೃದಯದಲ್ಲಿಯ ತಿಳಿನೀರು ಕಲಕಾಗಿ, ವಿವೇಕರಾಜನು ಆ ಸ್ಥಳಬಿಟ್ಟಿದ್ದನು. ಅಂದಮೇಲೇನು ? ಈಗ ಪಶುಹೃದಯನಾದ ಕಾಮದೇವನು ಅವನ ಹೃದಯದ ಆಳದಲ್ಲಿ ತಾಂಡವ ನಡಿಸಿದ್ದನು.

ಆಕೆಯನ್ನು ಯಾವಾಗ ಕಂಡೇನೋ ಎಂಬುವ ತವಕ ಡಿಮಿಟ್ರಿಗೆ. ಮೂಗು ಆಕೆಯ ಸುಗಂಧ ಮೈ ವಾಸನೆಯನ್ನೇ ಮೂಸುವದು, ಚಂಚಲ ಮನೋಹರ ರೂಪವನ್ನೇ ಕಣ್ಣು ನೆನಿಸುವದು; ಆದರೂ ಆಕೆಯ ಭೆಟ್ಟಿಯಿಲ್ಲ. ಕಟೂಷಳಿಗೂ ಆದೇನೋ ಅವನ ವಿಷಯದಲ್ಲಿ ಸಂಧೇಹವುಂಟಾಗಿ ಮುಖ ತೋರಿಸಲು ಹಿಂದು ಮುಂದೆ ನೋಡುವಳು. ಹೀಗೆ ತಪ್ಪಿಸುವಷ್ಟು ತಪ್ಪಿಸಿದಳು. ಕೊನೆಗೆ, ಯತ್ನ ಮೀರಿತು. ಸಾಯಂಕಾಲಕ್ಕೆ ಮನೆಗೆ ಬಂದ ಅತಿಥಿಗಳ ಹಾಸಿಗೆ ಹಾಕಲಿಕ್ಕೆ ಡಿಮಿಟ್ರಿಯು ಇದ್ದ ಮಗ್ಗಲಿನ ಕೋಣೆಗೆ ಹೋಗಬೇಕಾಯಿತು. ಕಟೂಷಳಿಗೆ ಹೆದರಿಕೆ. ಅದೇ ಟಕ್ಕಿನಿಂದ ಮೆಲ್ಲಗೆ ಸದ್ದು ಮಾಡದೆ, ಉಸಿರುಕೂಡ ಗಟ್ಟಿಯಾಗಿ ಬಿಡದೆ, ಮಗ್ಗಲಿನ ಕೋಣೆಗೆ ಬಂದಳು. ಸರ್ವಾಂಗದಿಂದಲೂ ಕಟೂಷಳನ್ನೇ ಕಾಯುತ್ತಿದ್ದ ಡಿಮಿಟ್ರಿಯು ಆಕೆಯ ಬರವನ್ನು ಮೂಸಿದನು. ಮೆಲ್ಲಗೆ ತಿಳಿಯಗೊಡದಂತೆ ಆಕೆಯ ಹಿಂದಿಂದೆ ಕಳ್ಳ ಹೆಜ್ಜೆಯಿಂದ ನಡೆದನು.

ಕಟೂಷಳು ಕೋಣೆಯಲ್ಲಿ ಹೊಕ್ಕು ಹಾಸಿಗೆ ಝಾಡಿಸಿ, ಮೇಲೆ ತಲೆದಿಂಬುಗಳನ್ನು ಸರಿಯಾಗಿಟ್ಟು, ಆದರ ಮೇಲೆ ಮಗ್ಗಲಾಸಿಗೆ ಹಾಸಬೇಕೆಂದು ಹಿಂದಿರುಗಿದಳು. ಬೆನ್ನಿಂದೇ ಡಿಮಿಟ್ರಿಯು. ನೋಡಿ ನಕ್ಕಳೇನೋ ಸರಿ!

ಆದರೆ ಆ ನಗೆಯಲ್ಲಿ ಸಂತಸದ ಹಿಗ್ಗು ಇರಲಿಲ್ಲ; ಬೆದರಿಕೆಯ ಕುಗ್ಗು, ಮಾತ್ರ ಸ್ಪಷ್ಟವಾಗಿ ಕಂಡಿತು. ನೀನು ನಡೆಯಿಸಿರುವ ಈ ಹುಡುಗಾಟಿಕೆಯು ಸರಿಯಲ್ಲ ಎಂಬುದನ್ನು ಸಾರಿ ಸಾರಿ ಹೇಳುವಂತೆ ಮುಖಲಕ್ಷಣವಿತ್ತು. ಇದು ಡಿಮಿಟ್ರಿಯ ಒಳಗಣ್ಣಿಗೆ ಝಗ್ಗನೆ ಮಿಂಚಿದಂತಾದರೂ ,ಅದು ಬಹಳೊತ್ತಿನ ವರೆಗಿರಲಿಲ್ಲ. ಆಗಿನ ಮಟ್ಟಿಗೆ ಹಿಂಜರಿದನು. ವಿವೇಕ ದೀಪವು ಮತ್ತೊಮ್ಮೆ ಢಾಳಾಯಿತು. ಕಟೂಷಳ ವಿಷಯದಲಿ ಅವನ ಮೊದಲಿನ ನಿಷ್ಕಲ್ಮಷ ಪ್ರೇಮವು ಬೆಳಗಿತು. ಆದರ ಸುಖವನ್ನನುಭವಿಸಿ ಆನಂದ ಪಟ್ಟ; ಮರುಕ್ಷಣ ಮತ್ತೆ ಕಗ್ಗತ್ತಲೆ. 'ಕೈಗೆ ಸಿಕ್ಕ ಮೀಸಲು ಬೇಟೆಯನ್ನು ಬಿಡುವದುಂಟೇ? ಈ ಸಂಧಿಯನ್ನು ಹಾಗೇ ಹೋಗಗೊಡದಿರು;' ಎಂದು ಪಶು-ಶುನವು ಒಳಗೆ ಒಂದೇ ಒಂದು ಗಲಾಟೆ ನಡಿಸಿದ್ದಿತು. ಅದು ತನ್ನ ಹುಚ್ಚು,

ವಾಸನೆಯನ್ನು ಹಿಂಗಿಸಿಕೊಳ್ಳುವ ಗಡಿಬಿಡಿಯನ್ನು ನಡಿಸಿದ್ದರಿಂದ ವಿವೇಕ ವಾಣಿಯ ಸಪ್ಪಳವು ಬಲು ಸಣ್ಣಾಗಿತ್ತು; ಬರುಬರುತ, ಅಂತರಂಗದಲ್ಲಿ ಪಶು ಭಾವನೆಯ ಆಳಿಕೆಯೇ ಹೆಚ್ಚಾದಂತೆ, ವಿವೇಕ ವಾಣಿಯ ಸೊಲ್ಲಡಗಿತು; ಅದು ಆಗಿನವುಟ್ಟಿಗೆ ಇದ್ದೂ ಇಲ್ಲದಾಯಿತು.

ವಿವೇಕಶಾಲಿಯಾದ ಡಿಮಿಟ್ರಿಯ ಮನದಲ್ಲೀಗ ಅವಿವೇಕ ರಾಯನ ರಾಜ್ಯ. ಕೇಳುವದೇನು? ಆ ಎಳೆ ಹುಡಿಗೆಯ ಮೈಮೇಲೆ ಮರಹುಂಬನಂತೆ ಹುಚ್ಚನಾಗಿ ಹೋದನು; ಮತ್ತು ಆಕೆಯನ್ನಪ್ಪಿಕೊಂಡು ಅದೇ ತಾನೇ ಹಾಸಿಟ್ಟ ಹಾಸಿಗೆಯ ಮೇಲೆ ಆಕೆಯನ್ನಪ್ಪಿಕೊಂಡೇ ಕುಳಿತನು. 'ಡಿಮಿಟ್ರಿ, ನನ್ನನ್ನು ಬಿಡು. ಹೋಗುವೆ. ಯಾರೋ ಬರುವ ಸಪ್ಪಳ ಕೇಳುತಿದೆ.' ಎಂದು ಕರುಣ ದನಿಯಿಂದ ನುಡಿದು ತಟ್ಟನೆ ಅವನ ಕೈಬಿಡಿಸಿಕೊಂಡು ಕಡೆಗಾದಳು. 'ಒಳ್ಳೇದು. ಈಗ ಬೇಡ. ರಾತ್ರಿ ನಿನ್ನ ಕಡೆ ಬರುವೆ ಹಾಗಾದರೆ. ಒಬ್ಬಳೇ ಇರುವಿಯಷ್ಟೇ!' ಎಂದು ಪಿಸುಗುಟ್ಟಿದನು.

'ಅದೇನು ನೀನು ಪಿಸುಗುಟ್ಟುವದು? ಹಾಗಂದರೆ ಏನು?' ಎಂದು ತನ್ನ ತುಟಿಯಲ್ಲಿಯೇ ಆಕೆ ಆಡಿದಳು. ಡಿಮಿಟ್ರಿಗೆ ಕೊಂಚದಿಗಿಲು. ಹೇಳಿದರೆ ಏನೋ ಎಂತೋ ಎಂದು. ತನ್ನ ಮನಸು ಕಟೂಷಳ ವಿಷಯದಲ್ಲಿ ಕೆಟ್ಟು ಹೋದುದಕ್ಕೆ ಅವನಿಗೇ ನಾಚಿಕೆ; ಆದರೆ, ಅದೀಗ ಮೇರೆಗೆಟ್ಟು ಬೆಳೆದಿತ್ತು. ವಿವೇಕಕ್ಕೆ ಅವಕಾಶವೇ ಇರಲಿಲ್ಲ.

ಸಂಜೆ ಕಳೆದು ರಾತ್ರಿ ಆಯಿತು. ಎಲ್ಲರೂ ಊಟ ಮಾಡಿಕೊಂಡು ತಮ್ಮ ತಮ್ಮ ಕೋಣೆಗಳಿಗೆ ಮಲಗ ಹೋಗಲು ಸಜ್ಜಾದರು. ಡಿಮಿಟ್ರಿಗೆ ಸೊಗಸಿಲ್ಲ. ಸದಾಶಿವಗೆ ಅದೇ ಧ್ಯಾನವೆಂಬಂತೆ ಕಟೂಷಳ ಧ್ಯಾನವೇ ಧ್ಯಾನ. ಎಲ್ಲರೂ ಹಾಸಿಗೆಯ ಮೇಲೆ ಹೊರಳಾಡುತ್ತ ಹರಟುತ್ತ ಮಲಗಿ ಗುರಿಕೆ ಹೊಡೆಯಲಾರಂಭಿಸಿದರು. ಡಿಮಿಟ್ರಿಗೆ ಕಣ್ಣಿಗೆ ಕಣ್ಣು ಹತ್ತಿರಲಿಲ್ಲ. ಮೆಲ್ಲಗೆ ಎಲ್ಲರೂ ಮಲಗಿರುವರೇನೋ ಎಂದು ಮಗ್ಗಲಿನ ಮೂರು ನಾಲ್ಕು ಕೋಣೆಗಳಲ್ಲಿ ಇಣಿಕಿ ಹಾಕಿ ನೋಡಿದ. ಎಲ್ಲರಿಗೆ ನಿದ್ದೆ ತುಂಬಾ ಆವರಿಸಿತ್ತು. ಹೊರಗಿನ ಸೃಷ್ಟಿಯೆಲ್ಲ ತಂಪಿನಿಂದ ತುಂಬಿತ್ತು. ಸಿಳ್ಳೆಂದು ತಂಪು ಗಾಳಿಯು ಬಂದು

ಮೈಯಲ್ಲಿ ಸೇರಿತೆಂದರೆ, ಮೈ ಎಂಬುದು ಮುದುಡಿಕೊಳ್ಳುವದು. ಅತ್ತಲಿಂದ ನದಿಯು ಹರಿಯುವ ದಡದಡ ಸಪ್ಪಳವು ಅಖಂಡವಾಗಿ ಕೇಳಿಸುವದು. ಇಂಥ ಪ್ರಶಾಂತ ಮತ್ತು ಮೈಕೊರೆಯುವ ಚಳಿಯ ಹೊತ್ತಿನಲ್ಲಿ ಡಿಮಿಟ್ರಿಯ ಮನಸಿನಲ್ಲಿ ಮಹಾಯುದ್ಧ ನಡೆದಿತ್ತು. ಅವನಿಗೆ ಅರೆಕ್ಷಣವಾದರೂ ಸಮಾಧಾನವಿಲ್ಲ. ಏನೋ ಅಂತಾರಲ್ಲ ಕಾಮಾಂಧರಿಗೆ ನಿದ್ರೆ ಇಲ್ಲ ಸುಖವಿಲ್ಲ ವೆಂದು. ಹಾಗೆ.

ಅಂತೂ, ಎಲ್ಲರೂ ಮಲಗಿರುವದನ್ನು ನೋಡಿ ಡಿಮಿಟ್ರಿಯು ತೊತ್ತುಗಳ ಮಲಗುವ ಕೋಣೆಗೆ ಬಂದ. ಅವನ ಎದೆಗುಂಡಿಯು ಹೆದರಿಕೆಯಿಂದ ಬಡಿದು ಕೊಳ್ಳುವದು ಅವನಿಗೆ ಕೇಳಿಸುತಲಿತ್ತು. ಹಿಡಿದು ಬಿಟ್ಟು ಅವನು ಸಾವಕಾಶ ವಾಗಿ ಉಸಿರಾಡಿಸುತ್ತಿದ್ದ. ಗಟ್ಟಿಯಾಗಿ ಉಸಿರಿಸಿದರೆ, ಯಾರಿಗಾದರೂ ತನ್ನ ಹೆಜ್ಜೆಯ ಸಪ್ಪಳ ಕೇಳಿಸುವದೋ ಹೇಗೆಂದು. ತೊತ್ತುಗಳ ಕೋಣೆಯಲ್ಲಿ ಮಿಣಿಮಿಣಿ ದೀಪ ಒಂದು. ಮೇಜಿನ ಮಗ್ಗಲಲ್ಲಿ ಕಟೂಷಳು ತನ್ನ ಮುಂದಿರುವ ಮೇಜನ್ನೇ ನೋಡುತ್ತ ವಿಚಾರ ಪರವಶಳಾಗಿ ಕುಳಿತಿದ್ದಳು. ಡಿಮಿಟ್ರಿಯು ಕಿಟಕಿಯೊಳಗಿಂದ ಮೆಲ್ಲಗೆ ಹಣಿಕಿ ಹಾಕಿ ನೋಡಿದ. ಚಿಂತೆಯಲ್ಲಿ ಮುಳುಗಿ ಚಡಪಡಿಸುತ್ತಿರುವ ಕಟೂಷಳ ದುಕ್ಕದ ಮುಖ ಕಣ್ಣಿಗೆ ಬಿತ್ತು. ಕರುಣಹುಟ್ಟಿ 'ಪಾಪ!' ಎಂದು ಮನಸಿನಲ್ಲಿ ಅಂದುಕೊಂಡ; ಕ್ಷಣ ಹೊತ್ತು ಪಶುವಾಸ ನೆಯು ಅಡಗಿತು; ಮತ್ತೆ ಯಥಾ ಪ್ರಕಾರ ಅದರ ಸಾಮ್ರಾಜ್ಯ.

ಡಿಮಿಟ್ರಿಯು ಕಿಟಕಿಯ ಹತ್ತಿರವೇ ನಿಂತು ಬಾಗಿಲನ್ನು ಪಟಪಟ ಬಡಿದನು. ಕಟೂಷಳು ಹೆದರಿದಂತೆ ತಟ್ಟನೇ ಎದ್ದಳು. ಮೈನಡುಗಿ, ಜೋರಾಗಿ ಬೆವರಿತು, ಮುಖವು ಹುಚ್ಚುಚ್ಚಾಯಿತು. ಸಪ್ಪಳಾದದ್ದೇನೆಂದು ನೋಡಲು ಆಕೆ ಕಿಟಕೆಯಲ್ಲಿ ಇಣಿಕಿ ಹಾಕಿ ನೋಡಿದಳು. ಕಿಟಕಿಗೆ ಕನ್ನಡಿ ಇದ್ದುದರಿಂದ ಆಚೆಯ ಮಗ್ಗಲಿನದೇನೂ ನಿಚ್ಚಳವಾಗಿ ಕಾಣಲಿಲ್ಲ. ಕಣ್ಣಿಗೆ ಬೆಳಕು ಬರದಂತೆ ಮೇಲೆ ಕೈ ಹಿಡಿದು ಚಿವಗಣ್ಣಿನಿಂದ ನೋಡಿದಳು. ಯಾರೋ ನಿಂತಂತೆ ಕಾಣಿಸಿತು. ಸ್ವಲ್ಪ ನಿಟ್ಟಿಸಿ ನೋಡಲಾಗಿ ಡಿಮಿಟ್ರಿಯೇ ಎಂದು ಗುರುತಿಸಿದಳು. ಕೊಂಚ ಗಾಂಭಿರ್ಯದ ನಗೆಯು ಮುಖವನ್ನು ಅರಳಿಸಿತು.

ಡಿಮಿಟ್ರಿಗೆ ಸ್ವಲ್ಪ ಧೈರ್ಯ; ಆದರೂ ಕಟೂಷಳ ಮನಸಿನಲ್ಲಿಯ ದುಗುಡ ಹೋಗಿರಲಿಲ್ಲ. ಡಿಮಿಟ್ರಿಯು ಮತ್ತೊಮ್ಮೆ ಸರಿಯಾಗಿ ಕಿಟಕಿಯಲ್ಲಿ ಮುಖ ವಿಟ್ಟು ಅಂಗಳದಲ್ಲಿ ಬರಲಿಕ್ಕೆ ಕೈಯಿಂದ ಕಟೂಷಳಿಗೆ ಸನ್ನೆ ಮಾಡಿದ; ಆಕೆ ತಲೆ ಹಾಕಿ ಮತ್ತೆ ಕೋಣೆಯಲ್ಲಿಯೇ ಉಳಿದಳು. ಡಿಮಿಟ್ರಿಗೆ ಚಪಲ. ಇನ್ನೂ ಎಕೆ ಹೊರಗೆ ಬರಲಿಲ್ಲವೆಂದು. ಆಕೆಯನ್ನಿನ್ನು ಕೂಗಿ ಕರೆಯಬೇಕೆನ್ನು ವಷ್ಟರಲ್ಲಿ ಕಟೂಷಳು ಬಾಗಿಲ ಬಳಿ ಹೋದಳು. ಅಷ್ಟರಲ್ಲಿ ಕಟೂಷಳ ಹೆಸರು ಗೊಂಡು ಯಾರೋ ಕರೆದಂತಾಯಿತು. ಡಿಮಿಟ್ರಿಯು ಮೆಲ್ಲಗೆ ಹಿಂಜರಿದು ಮಗ್ಗ ಲಾದನು. ಹತ್ತಿಯನ್ನು ಹಿಂಜಿಹರವಿದಂತೆ ವಾತಾವರಣದಲ್ಲಿ ಮಂಜು ಮುಸುಕಿ ಮುಂದಿನದೇನೂ ಕಾಣಿಸುತ್ತಿರಲಿಲ್ಲ. ಅತ್ತ ನದಿಯು ಹರಿಯುವ ದಡದಡ ಸಪ್ಪಳವು ಎಡೆಬಿಡದೆ ಒಂದೇ ತಾಲದಿಂದ ನಡೆದಿತ್ತು. ಯಾವ ಕಡೆಯಲ್ಲಿಯೋ ಕೋಳಿಯು ಕುಕೂ—ಕೂ ಎಂದು ಕೂಗಿತು; ಅದು ಹೊರ್ತು ಸುತ್ತುಮುತ್ತೆಲ್ಲ ನೀರವ.

ಒಂದೆರಡು ನಿಮಿಷ ಡಿಮಿಟ್ರಿಯು ದಾರಿಕಾಯ್ದನು. ಮನಸಿನ ತರಾತುರಿಯು ಹೆಚ್ಚಿತು. ಸುಮ್ಮನಿರಲಿಕ್ಕಾಗದೆ, ಮತ್ತೆ ಕಿಟಕಿಯ ಹತ್ತರ ಹೋಗಿ ಒಳಗೆ ನೋಡಿದನು. ದೀಪ ಉರಿಯುತ್ತಿತ್ತು; ಕಟೂಷಳು ಮೇಜಿನ ಬಳಿಯಲ್ಲಿಯೇ ಮೊದಲಿನಂತೆ ವಿಚಾರದಲ್ಲಿ ಮುಳುಗಿ ಕುಳಿತಿದ್ದಳು. ಯಾವು ದನ್ನು ಮಾಡಲಿಕ್ಕೂ ಮನಸು ಸಿದ್ಧವಿಲ್ಲ. ಇಷ್ಟರಲ್ಲಿ, ಡಿಮಿಟ್ರಿಯು ಮತ್ತೆ ಕಿಟ ಕಿಯ ಬಾಗಿಲತಟ್ಟಿದ. ಓಡಿಹೋಗಿ ಬಾಗಿಲ ತೆರೆದಳು. ಡಿಮಿಟ್ರಿಯು ಬಾಗಿಲ ಹೊರಮಗ್ಗಲಿನ ಕಟ್ಟೆಯ ಮೇಲೆನಿಂತಿದ್ದು, ಆಕೆ ಬಂದೊಡನೆ ಅಪ್ಪಿಕೊಂಡ. ಇಬ್ಬರಿಗೂ ಮಾತಿಲ್ಲ. ಒಬ್ಬರ ಮುಖ ಒಬ್ಬರು ನೋಡುತ್ತ ಅದೇ ಸ್ಥಿತಿಯಲ್ಲಿ ದ್ದರು. ಮತ್ತೆ ಹೊರಗೆ ಯಾರೋ ಬಂದ ಹೆಜ್ಜೆಯ ಸಪ್ಪಳ. ಕೈಬಿಡಿಸಿಕೊಂಡು ಕಟೂಷಳು ತಟ್ಟನೆ ಅವಸರದಿಂದ ತನ್ನ ಕೋಣೆಗೆ ಹೋಗಿ ಒಳಗಿಂದ ಬಾಗಿಲ ಚಿಲಕ ಹಾಕಿಕೊಂಡಳು.

ಡಿಮಿಟ್ರಿಯ ಮನಸಿನ ಒದ್ದಾಟಕ್ಕೆ ಪಾರೆ ಇಲ್ಲ. [illegible] [illegible] ಗಿಂದ ಹೊರಗೆ ಬಂದ [illegible] [illegible] [illegible]ಸುತ್ತಿದ್ದ. ಮತ್ತೆ

ಬಾಗಿಲ ಬಳಿಹೋಗಿ ತಟ್ಟಿದನು. ಕಿಟಕಿಯಲ್ಲಿ ಇಣಿಕಿದನು. ಕಟೂಷಳು ಮನಸ್ಸಿಲ್ಲದೆ ಸುಮ್ಮನೆ ಹೊದ್ದುಕೊಂಡು ಕಣ್ತೆರೆಕೊಂಡೆ ಮಲಗಿದ್ದಳು. ಡಿಮಿಟ್ರಿಯು ' ಕಟೂಷಾ, ಕಟೂಷಾ!' ಎಂದು ಮೆಲ್ಲಗೆ ಕೂಗಿದ; 'ಹೋಗು ಹೋಗು' ಎಂದು ಸಿಟ್ಟಿನಿಂದ ಕೈಮಾಡಿದಳು, ಮತ್ತೆ 'ಏನು ಹಾಗೆ ಮಾಡಿದರೆ, ನೀನನ್ನುವದಾದರೂ ಏನು ? ನಿನ್ನ ಸೋದರತ್ತೆಂದಿರು ಕೇಳಿದರೆ ಬೈದಾರು? ' ಎಂದು ಸಿಟ್ಟಸಿಟ್ಟಿನಿಂದ ಪಿಸುಗುಟ್ಟಿದರೂ, ಅವನನ್ನು ಕೂಡಲಿಕ್ಕೆ ಆತುರವಿರುವಂತೆ ಆಕೆಯ ಮುಖವೆಲ್ಲವೂ ಮಾತಾಡುತಿದ್ದಿತು. ಡಿಮಿಟ್ರಿಯು ಮಹಾ ಸೂಕ್ಷ್ಮಜ್ಞ-ಅವನಿಗೀ ಸೂಚಿ ತಿಳಿಯಿತು.

'ಕಟೂಷಾ! ಬಾಗಿಲ ತೆರೆ. ಒಂದು ಕ್ಷಣ ಒಳಗೆ ಬರುತೇನೆ. ದಯವಿಟ್ಟು ಬಾಗಿಲ ತೆರೆ ' ಎಂದು ದೈನಾಸ ಬಿಟ್ಟು ಕೇಳಿದ. ಅವನ ಮೈಮೇಲೆ ಈಗ ಎಚ್ಚರವಿಲ್ಲ. ಕಟೂಷಳು ಏನೂ ಮಾತನಾಡದೆ, ಸುಮ್ಮನಿದ್ದು, ಕಾಲು ಸದ್ದುಮಾಡದೆ ಬಂದು ಒಳಗಿನ ಚಿಲಕ ತೆಗೆದಳು. ಅದರ ಸಪ್ಪಳ ಕೇಳಿ ಡಿಮಿಟ್ರಿಯ ಮನಸಿಗಾದ ಆನಂದಕ್ಕೆ ಪಾರವಿಲ್ಲ. ಬಾಗಿಲ ತೆರೆದು ಒಳಗೆ ನುಗ್ಗಿ, ಇದ್ದಕಿದ್ದಂತೆ ಕಟೂಷಳನ್ನು ಬಿಗಿದಪ್ಪಿ, ಎರಡೂ ಕೈಗಳಿಂದೆತ್ತಿಕೊಂಡು ಹೊರಟು ' ನನ್ನ ಬಿಡು, ಬೇಡ, ನಾನು ಹೋಗುತೇನೆ. ಇದೇನು ಹೀಗೆ ಮಾಡಿದರೆ! ' ಹೀಗೆಂದು ಆಕೆಯು ಲಜ್ಜೆಯಿಂದ ಪಿಸುಗುಟ್ಟುತ್ತಿರುವಾಗಲೇ ಡಿಮಿಟ್ರಿಯು ಆಕೆಯನ್ನು ತನ್ನ ಕೋಣೆಗೆ ಒಯ್ದನು.

ಅದಾಗ ಚಂದ್ರನು ಮೂಡುವ ಸಮಯ. ಡಿಮಿಟ್ರಿಯು ಕೋಣೆಯಿಂದ ಹೊರಕ್ಕೆ ಬಂದು, ಬಹುವಿಚಾರಪರನಾಗಿ ' ಈಗ ಆದದ್ದೇನು ? ಇದರ ಅರ್ಥವೇನು? ಇದು ಸುಖವೋ! ದುಃಖವೋ! ಇಡೀ ಪ್ರಪಂಚವೇ ಇದರೊಳಗೆ ಬಿದ್ದು ಹೊರಳಾಡುತಿದೆಯಲ್ಲ ? ಯಾರಿಗೂ ಇದು ತಪ್ಪಿದ್ದಲ್ಲವಲ್ಲಾ ! ' ಹೀಗೆಂದುಕೊಂಡು ಹುರುಪುಗೆಟ್ಟವನಾಗಿ ಮತ್ತೆ ತನ್ನ ಕೋಣೆಗೆ ಮಲಗ ಹೋದನು.

ಮರುದಿನ ಬೆಳಗ್ಗೆ ಎದ್ದನು. ಡಿಮಿಟ್ರಿಯು ಇಂದು ಊರಿಗೆ ಹೋಗಬೇಕಿತ್ತು. ಕಳೆದ ರಾತ್ರಿ ನಡೆದದ್ದೆಲ್ಲ ಅವನ ಎದೆಯ ಒಂದು ಮೂಲೆಯಲ್ಲಿ ಒಂದೇ ಸಮನಾಗಿ ಸುಡುತ್ತಿತ್ತು; ಆದರೆ, ಅದೇ ಎದೆಯ ಇನ್ನೊಂದು ಮೂಲೆ

ಯಲ್ಲಿ ತನ್ನ ಮನಸಿನ ಆಸೆಯನ್ನು ತೀರಿಸಿಕೊಂಡು ಬಿಟ್ಟೆನಲ್ಲ ಎಂದು ಅವಿವೇಕವು ಗರುವ ಪಡುತ್ತಿತ್ತು; ಇವೆರಡರ ತೆರೆಯು ನಿಂತ ಬಳಿಕ ಆಳವಾದ ಎದೆಯೊಳಗೆ ಎಲ್ಲಿಯೋ ಟುಕು ಟುಕು ಜೀವ ಹಿಡಿದುಕೊಂಡು ಹುದುಗಿಕೊಂಡಿದ್ದ ವಿವೇಕವಾಣಿಯು 'ಅಯ್ಯಾ.' ನೀನು ದೊಡ್ಡ ತಪ್ಪು ಮಾಡಿದಿ; ಇದರ ಪ್ರಾಯಶ್ಚಿತ್ತವನ್ನು ನಿನ್ನ ದೇಸೆಯಿಂದ— ಆಕೆಯ ದೆಸೆಯಿಂದಲ್ಲ—ನೀನು ತೆಗೆದುಕೊಂಡೇ ತೀರಬೇಕು.' ಎಂದು ಮೆಲ್ಲಗೆ ಸ್ಪಷ್ಟವಾಗಿ ನುಡಿಯಿತು. ತನ್ನ ಈ ಕೆಟ್ಟ ಕಾರ್ಯವು ಬೈಲಿಗೆ ಬಿದ್ದರೆ ತನಗೆಷ್ಟು ನಾಚಿಕೆ? ಒಳ್ಳೇದು. ಇನ್ನುಮುಂದೆ ಪಾಪ ಬಡವಿಯಾದ ಆ ಕಟೂಷಳ ಗತಿ ಏನು? ಎಂಬುವ ವಿಚಾರ ತೆರೆಗಳು ಬಂದೊಡನೆ ಅವನಿಗೆ ಬಹು ಕಸವಿಸಿ ಯಾಗುವದು. ಆದದ್ದಾಯಿತು. ಇನ್ನು, ಆಕೆಯನ್ನು ಕಂಡು ಏನಾದರೂ ಕೊಟ್ಟು ಪ್ರೀತಿಯನ್ನಾದರೂ ತೋರ್ಪಡಿಸಬೇಕು ಎಂದು ಮನಸು ಮಾಡಿದನು.

ತಾನು ಊರಿಗೆ ಹೊರಡುವ ದಿನ ಕಟೂಷಳನ್ನು ಕಾಣಬೇಕೆಂದು ಅಲ್ಲಲ್ಲಿ ಬೆದಕಿದನು; ಹೆಂಗಸರ ಬಳಿ ಒಳಗೆ ಕೆಲಸದಲ್ಲಿದ್ದಳು; ಹೊರಗೆ ಬರಲಿಕ್ಕೆ ಕಣ್ಸನ್ನೆ ಮಾಡಿದನು. ಅವನನ್ನು ಕಂಡೊಡನೆ ಕಟೂಷಳ ಮುಖ ಕೆಂಪೇರಿತು; ನಾಚಿದಳು. ತಾನೂ ಕಣ್ಸನ್ನೆಯಿಂದ ತೊತ್ತುಗಳ ಕೋಣೆಯ ಹತ್ತಿರ ನಿಂತಿರಲು ಹೇಳಿದಳು. ಸಂಧಿಸಾಧಿಸಿ, ಅವನನ್ನು ಯಾರಿಲ್ಲದ ಸ್ಥಳದಲ್ಲಿ ಕಂಡಳು. 'ನಾನು ಹೋಗುತ್ತೇನೆಂದು ಹೇಳಲಿಕ್ಕೆ ಬಂದಿದ್ದೆ' ಎಂದು ಅನ್ನುತ್ತ ತನ್ನ ಕೈಯೊಳಗಿದ್ದ ಒಂದು ಮುಚ್ಚೋಲೆಯನ್ನು 'ಇದರಲ್ಲಿ ನೋಟು—' ಇಷ್ಟಂದು ಕೈಯಲ್ಲಿಡ ಹೋದನು. ಕಟೂಷಳು ಹುಬ್ಬುಗಂಟಿಕ್ಕಿ 'ಸಾಕು' ಎಂದೆನ್ನುವ ಹಾಗೆ ಗೋಣ ಅಲ್ಲಾಡಿಸಿ ಅವನ ಕೈ ದೂರಕ್ಕೆ ಸರಿಸಿದಳು.

'ಹಾಗಲ್ಲ. ನೀನು ಇದನ್ನು ತೆಗೆದುಕೊಳ್ಳಲಿಕ್ಕೆ ಬೇಕು' ಹೀಗೆಂದು ಆ ಮುಚ್ಚೋಲೆಯನ್ನು ಆಕೆಯ ಮೈಮೇಲೆ ಎಸೆದು, ನೊಂದುಕೊಂಡವ ನಂತೆ ನರಳುತ್ತ ತನ್ನ ಕೋಣೆಗೆ ನಡೆದ. ಇದಕ್ಕಿಂತ ನಾನು ಇನ್ನೇನು ಮಾಡ

ಬೇಕು ? ಪ್ರಪಂಚದೊಳಗಿನವರು ಮಾಡಿದ್ದನ್ನೇ ನಾನಾದರೂ ಮಾಡಿರುವೆ! ಜಗತ್ತಿಗೆ ಹೊರ್ತು ಇರುವೆನೇ ನಾನು ?'' ಹೀಗೆಂದು ಮನಸು ಸಮಾಧಾನ ಪಡಿಸಿಕೊಳ್ಳಲಿಕ್ಕವನು ಯತ್ನಿಸಿದ. ಪ್ರಯೋಜನವಾಗಲಿಲ್ಲ. ತಾನು ಆಕೆ ಬಡವಿಯನ್ನು ಕೆಡಿಸಿದೆನಲ್ಲಾ ಎಂಬುವ ಮೀರಿದ ತಾಪವು ಆತನ ಎದೆಯಲ್ಲಿ ಸುಡಲಾರಂಭಿಸಿತು.

ಅಂತರಂಗದಲ್ಲಿ ತಾನು ಮಾಡಿದ ಪಾಪ ಕೃತಿಯು ಅಂಖಡವಾಗಿ ಅವನನ್ನು ಹುರಪಳಿಸತೊಡಗಿತು; ತಾನು ನೀಚ, ಕ್ರೂರ, ಹೇಡಿ ಎಂದು ತನ್ನನ್ನು ಬೈದುಕೊಂಡ; ಜರಿದುಕೊಂಡ. ಇಷ್ಟು ದಿವಸ ತಾನು ದೊಡ್ಡವ, ಉದಾರ, ಎಂದು ಮಂದಿಯಿಂದ ಹೊಗಳಿಸಿಕೊಳ್ಳುವ ಅವನ ಮನಸು ಈ ಹೊತ್ತು ನಾಚಿಕೊಂಡಿತು; ಆದರೆ, ತಾನು ಹೊಸದಾಗಿ ಕೈಕೊಂಡ ಉದ್ಯೋಗ, ಯುದ್ಧದ ಗಲಾಟೆ, ಅದರ ದೆಸೆಯಿಂದ ಮಾಡತಕ್ಕ ಹಲವು ಕೆಲಸ ಇವುಗಳಲ್ಲಿ ಅವನಿಗೆ ಹಿಂದು–ಮುಂದಿನದನ್ನು ನೆನಿಸಕೊಳ್ಳಲಿಕ್ಕೆ ಸಹ ಈಗ ವೇಳೆ ಉಳಿಯದೆ ಎಲ್ಲವನ್ನು ಮರೆತನು.

ತರುವಾಯ, ಯುದ್ಧದ ಗಲಭೆ ಮುಗಿದ ಬಳಿಕ, ಎಂದೋ ಒಮ್ಮೆ ತನ್ನ ಸೋದರತ್ತೆಂದಿರ ಭೆಟ್ಟಿಗೆಂದು ಹೋದ. ಅಲ್ಲಿ ಕಟೂಷಳು ಕಾಣಲಿಲ್ಲ. ಎಲ್ಲಿ ಅಂತ ವಿಚಾರಿಸಿದ. ಕೆಟ್ಟು ಹೋಗಿ ಎಲ್ಲಿಯೋ ಹಡೆದಿರುವಳಂತೆ ಎಂದು ಹೇಳಿದರು. ಅವನ ಮನಸು ಕಳವಳಗೊಂಡಿತು. ಸೋದರತ್ತೆಂದಿರು ' ಕೆಟ್ಟ ಜಾತಿಯ ಹೆಣ್ಣು. ತಾಯಿಯಂತೆ ಮಗಳು. ನಾವೇನೋ ಹಚ್ಚಿಕೊಂಡಿದ್ದೆವು. ಬಾಳ್ವೆಮಾಡಿಕೊಂಡಿರುವ ಹೆಣ್ಣೇ ಅದು ? ' ಹೀಗೆಂದುದರಿಂದ ತನ್ನ ಮೇಲಿನ ತಪ್ಪು ಹೋಯಿತೆಂದು ಅವನು ಆಗ ಸಮಾಧಾನಪಟ್ಟನು. ಮೊಟ್ಟಮೊದಲು ಅವಳೆಲ್ಲಿರುವಳು ಹುಡುಕಬೇಕೆಂದುಕೊಂಡ. ಆದ ಪಾಪನ್ನು ನೆನಿಸಿಕೊಂಡು ಫಲವೇನೆಂದು ಮತ್ತೆ, ' ಹೋಗಲಿ ' ಎಂದು ಸುಮ್ಮನಾದನು.

ಆದರೆ, ಈಗ ಕೋರ್ಟಿನಲ್ಲಿ ಇಬ್ಬರೂ ಭೆಟ್ಟಿಯಾದ ಸಂದರ್ಭದಿಂದ ಅವನಿಗೆ ಹಿಂದಿನದೆಲ್ಲ ನೆನೆಪಾಯಿತು. ತಾನು ವಿಷಯ ಭೋಗಕ್ಕೆ ಮೆಚ್ಚಿ ಆಕೆಯ ಆಯುಷ್ಯವನ್ನೇ ಹಾಳು ಮಾಡಿದ ಕ್ರೂರಕೃತ್ಯಕ್ಕೆ ಮನನೊಂದು

ಕೊಂಡನು. ಮತ್ತು ಆ ಪಾಪಕ್ಕೆ ಪ್ರಾಯಶ್ಚಿತ್ತ ತೆಗೆದುಕೊಳ್ಳದೆ, ಕಳೆದ ಹತ್ತುವರ್ಷಗಳಿಂದಲೂ ಎಚ್ಚರಗೇಡಿಯಾಗಿ ಇದ್ದುದಕ್ಕಾಗಿ ಕಣ್ಣೀರಿಟ್ಟನು; ಆದರೂ ತಾನು ಮಾಡಿದ ತಪ್ಪು ಬೈಲಿಗೆ ಬಂದೀತೆಂಬುವ ಅಂಜಿಕೆಯು ಅವನಿಗೆ ತಪ್ಪಿರಲಿಲ್ಲ. ಅದು ಒಳಗಿಂದೊಳಗೆ ಅಳುಕುತ್ತಿತ್ತು.

ಇಂತಹ ಹೊಯ್ದಾಟದ ಮನಃಸ್ಥಿತಿಯಲ್ಲಿ ಕೋರ್ಟಿಗೆ ನಡುವಿನ ಬಿಡುವು ಸಿಕ್ಕಿತು. ಜ್ಯೂರಿಯವರ ಕೋಣೆಗೆ ಹೋದನು. ಅಲ್ಲಿ ಕುಳಿತ ಬೇರೆ ಜ್ಯೂರಿಯವರು ಏನೇನು ಮಾತಾಡುತಿರುವರೆಂಬುವನ್ನೆಲ್ಲ ಕೇಳುತ್ತ ಒಂದು ಕಿಟಕಿಯ ಹತ್ತರ ಸ್ವಸ್ಥವಾಗಿ ಯೋಚನಾಪರನಾಗಿ ಹೊಗೆಬಿಡುತ್ತ ಕುಳಿತನು. ಜ್ಯೂರಿಯಲ್ಲಿಯ ಯಾರಾದರೂ ಇವನಿಗೆ ಪ್ರಶ್ನ ಕೇಳಿದರೆ, ಬಾಯಿಬಿಚ್ಚಿ ಏನೂ ಆಡದೆ, ಬರೇ ಗೋಣು ಅಲ್ಲಾಡಿಸುವನು; ತಲೆ ಹಾಕುವನು. ಇಷ್ಟೇ ಅವನ ಮಾತು.

ಬಿಡುವಿನ ವೇಳೆ ಮುಗಿಯಿತು. ಡಣಡಣ ಗಂಟೆಯ ಸಪ್ಪಳಾಯಿತು. ಎಲ್ಲರೂ ಮತ್ತೆ ಕೋರ್ಟಿಗೆ ಹೊರಟರು. ಈಗ ಡಿಮಿಟ್ರಿಯ ಮನಸಿನಲ್ಲಿ ವಿಚಾರಗಳ ಕೋಲಾಹಲ. ತಾನು ಜ್ಯೂರಿ ಇರುವೆನೆಂಬ ಅರಿವು ತಪ್ಪಿ, ತಾನೊಬ್ಬ ಅಪರಾಧಿ, ತನ್ನ ವಿಚಾರಣೆಯೇ ನಡೆದಿರುವದೇನೋ ಎಂದು ಅವನಿಗೆ ಹೆದರಿಕೆ. ತನ್ನತಾ ಅಳೆದು ತಿಳಿದ ಹಾಗೆಲ್ಲ ಅವನಿಗೆ ತಾನೆಂದರೆ, ಹೇಳಿ ಮಾಡಿಸಿದ ಲಫಂಗ ಫಟಿಂಗನೆಂದೂ, ತನ್ನ ಅಪರಾಧಗಳ ಎಚ್ಚರ ತನಗಿಲ್ಲವೆಂದೂ ಮನಸಿಗೆ ಹೊಳೆಯಿತು. ತನ್ನಂಥ ಪಾಪಿಯು ಹೀಗೆ ನಾಲ್ಕು ಮಂದಿ ಪ್ರತಿಷ್ಠಿತರಲ್ಲಿ ಕುಳಿತು ಜ್ಯೂರಿಯಾಗುವದೆಂದರೆ ನಾಚಿಕೆಯ ಕೆಲಸ, ಮೀರಿದ ಅನ್ಯಾಯವೆಂದು ಮನಗಂಡನು; ಆದರೇನು? ಜಗವೇ ಇಂಥವರಿಂದ ತುಂಬಿ ತುಳುಕುತ್ತಿರುವಾಗ ನನ್ನೊಬ್ಬನ ಪಾಡೇನೆಂದು ಮತ್ತೆ ವಿವೇಕ ವಾಣಿಯ ತಲೆಮೆಟ್ಟಿ, ವಾಡಿಕೆಯಂತೆ ಒಳ್ಳೇ ಗಂಭೀರ ಮುದ್ರೆಯಿಂದಲೂ, ದೊಡ್ಡಿಸ್ತನದ ಸೆಡವಿನಿಂದಲೂ, ಎಲ್ಲರಂತೆ ಜ್ಯೂರಿಯವರು ಕೂಡ್ರುವ ಸ್ಥಳದಲ್ಲಿ ಕಾಲ ಮೇಲೆ ಕಾಲಿಟ್ಟುಕೊಂಡು ಕುಳಿತನು.

ಕೆಲ ಹೊತ್ತು ವಿಶ್ರಾಂತಿಗೆಂದು ಕರದೊಯ್ದು ಸೆರೆಯಾಳುಗಳನ್ನು ಪೋಲೀಸರು ಒಳಗೆ ಕರತಂದರು. ಹಲವು ಹೊಸ ಮುಖಗಳು ಕಾಣಿಸಿದವು. ಸಾಕ್ಷಿಗಾರರ ಸಾಕ್ಷಿಗಳು ನಡೆದವು. ಅವರವರ ಹೆಸರು, ಜಾತಿ, ಇರುವ ಸ್ಥಳ, ಉದ್ಯೋಗ ಮುಂತಾದವುಗಳನ್ನು ಕೇಳಿ ಆಯಿತು. ಮೊಟ್ಟಮೊದಲು ವೇಶ್ಯಾ ಗ್ರಹದ ಒಡತಿಯಾದ ಕಿಟೀವ್ವಾ ಎಂಬುವಳ ಸಾಕ್ಷಿನಡೆಯಿತು. ಅದರಲ್ಲಿ ತನ್ನ ಗ್ರಹಕ್ಕೆ ಬಂದ ಸೈಬೀರಿಯದ ಸಿರಿವಂತವರ್ತಕನು ಕಟೂಷಳಿಗೆ ಮರುಳಾಗಿದ್ದ ಮುಂತಾದ ಸಂಗತಿಗಳನ್ನು ತನಗೆ ಗೊತ್ತಿದ್ದಂತೆ ಹೇಳಿ, ಒಟ್ಟಾರೆ, 'ಆಕೆ ಒಳ್ಳೇ ಜಾಣೆ, ಕಲಿತವಳು. ದೊಡ್ಡ ಮನೆತನದವಳು.' ಎಂದು ಅಭಿಪ್ರಾಯ ಪಟ್ಟಳು. ಇಷ್ಟೊತ್ತಿನ ವರೆಗೆ ಎಲ್ಲಿಯೋ ನೋಡುತ್ತಲೂ, ಒಮ್ಮೊಮ್ಮೆ ಕಿಟೀವ್ವಳನ್ನೇ ಮಿಕಿಮಿಕಿ ಮಂಕಾಗಿ ನೋಡುತ್ತಲೂ ಇದ್ದ ಕಟೂಷಳು ಒಮ್ಮಿಂದೊಮ್ಮೆ ಕಣ್ಣು ತಿರುಗಿಸಿದಳು. ನ್ಯಾಯಾಧೀಶನ ಬಳಿ ಕುಳಿತ ಡಿಮಿಟ್ರಿಯ ಕಡೆಗೆ ಕಣ್ಣು ಹೋಯಿತು. ಆಕೆಯ ಮುಖವು ಔದಾಸೀನ್ಯದಿಂದ ಗಂಭೀರವಾಗಿ, ಬರುಬರುತ್ತ ದುಃಖದ ಕಳೆ ಇಳಿಯಿತು. ಡಿಮಿಟ್ರಿಯು ಕಟೂಷಳನ್ನುಸುಮ್ಮನೆ ಶೂನ್ಯದೃಷ್ಟಿಯಿಂದ ನೋಡುತ್ತಿದ್ದ ಹಾಗೆಯೇ ಆಕೆಯ ಚೀವುಗಣ್ಣು, ಅವುಗಳಲ್ಲಿ ಲಕಲಕ ಹೊಳೆಯುವ ಚಂಚಲ ಗುಡ್ಡಿಗಳನ್ನು ನೆನಿಸಿಕೊಂಡನು.

ಆ ಭರದೊಳಗೆ, ಆಂದಿನ ಆ ಭೀಕರ ಕಾಳರಾತ್ರಿ ಹಿಂಜಿದರಳೆಯ ಪರದೆ ಬಿಟ್ಟಂತಿರುವ ದಟ್ಟಾದ ಮಂಜು, ಕಳೆಗುಂದಿದ ಆ ಸೊಟ್ಟ ಚಂದ್ರ, ತಾನು ಕತ್ತಲೆಯಲ್ಲಿ ಹುದುಗಿಕೊಂಡು ನಿಂತಿರುವದು, ತನ್ನನ್ನು ಕಟೂಷಳು ನೋಡುತ್ತಿದ್ದ ಕರಿಕರಿಯಾದ ಆ ನೇರಿಲ ಕಣ್ಣುಗಳು ಅವನ ಮನಸಿನಲ್ಲಿ ಸ್ಫುರಿಸಿದವು. 'ನನ್ನ ಗುರುತಿಸಿರುವಳು' ಎಂದು ಹೆದರಿ ಗಕ್ಕನೆ ಹಿಂದೆ ಸರಿದನು, ಆಕೆಗಿನ್ನೂ ಗುರುತು ಆಗಿರಲಿಲ್ಲ. ಕಟೂಷಳು ಏನೋ ಜ್ಞಾಪಕ ಮಾಡಿಕೊಂಡು ಉಸ್ಸೆಂದು ನ್ಯಾಯಾಧೀಶನ ಕಡೆ ದೃಷ್ಟಿಹೊರಳಿಸಿದಳು. ಡಿಮಿಟ್ರಿಯೂ ಉಸುರ್ಗರೆದ. ಹಕ್ಕಿಯ ಬೇಟೆಗೆಂದು ಹೋದಾಗ ಮೊದಲೇ ಗಾಯಗೊಂಡ ಹಕ್ಕಿಯನ್ನೊಂದು ತನ್ನ ಮಬ್ಬಿನಲ್ಲಿಯೇ ತಾನು ಕೊಂದುದಕ್ಕೆ ಕನಿಕರ,

ಮನಸ್ತಾಪ, ತಲೆಯಲ್ಲೇನೊ ಗೊಂದಲ. ಸಾಗಿ ಸಾಗದು ಬುದ್ಧಿ. ಮಂಕಾಗಿ ಕುಳಿತುಬಿಟ್ಟ. ಹೃದಯದೊಳಗೆ ನಡೆಯಿತು ಯುದ್ಧ ಕೋಲಾಹಲ.

ಸಾಕ್ಷಿಗಾರರ ಸಾಕ್ಷಿಗಳು ಮುಗಿದವು; ಅವರನ್ನು ಮಾತಿನ ಮಲಕಿನಲ್ಲಿ ಹಿಡಿಯಲು ವಕೀಲರು ಅಡ್ಡತಿಡ್ಡ ಪ್ರಶ್ನೆಗಳನ್ನು ಕೇಳಿ ಆಯಿತು. ಪಬ್ಲಿಕ್ ಪ್ರಾಸಿಕ್ಯೂಟರರು, ಮತ್ತು ಬೇರೆ ಬೇರೆ ಪಕ್ಷದ ವಕೀಲರೂ ಪುರಾವೆಗಾಗಿ ಇರಿಸಿದ ಒಂದು ಹರಳು ಕೆಚ್ಚಿದ ಉಂಗುರ, ಮತ್ತು ವಿಷಹಾಕಿದ ಕಾಜಿನ ನಳಿಗೆಯನ್ನು ನ್ಯಾಯಾಧೀಶನು ಜ್ಯೂರಿಯವರಿಗೆ ಒಪ್ಪಿಸಿದನು. ಮೇಲುಗಡೆ ಅವುಗಳಿಗೆ ಚೀಟಿಹಚ್ಚಿ ಮುದ್ರೆಯೊತ್ತಿದ್ದರು.

ಆ ಸಾಮಾನುಗಳನ್ನು ಸಾಕ್ಷಿದಾರರು ನೋಡುನೋಡುತಿರುವ ಹಾಗೆಯೇ, ಪಬ್ಲಿಕ್ ಪ್ರಾಸಿಕ್ಯೂಟರರು ಎದ್ದುನಿಂತು 'ಡಾಕ್ಟರ ಪರೀಕ್ಷೆಯ ವಿಚಾರವೇನಾಯಿತೆಂಬುದನ್ನು ಮೊದಲು ಓದೋಣಾಗಬೇಕು' ಎಂದರು. ನ್ಯಾಯಾಧೀಶನಿಗೆ ಸ್ವಿಸ್‌ದೇಶದ ತನ್ನ ಹೊಸ ನಲ್ಲೆಯಳನ್ನು ಕಾಣುವತನಕ ಆದರದೆಸೆಯಿಂದ ಆಡಾವುಡಿಯಿಂದ ಖಟ್ಲೆ ಮುಗಿಸುವ ಅವಸರ.

ಸಿರಸದಾರನು ಕೈಯಲ್ಲಿ ಡಾಕ್ಟರ ರಿಪೋರ್ಟನ್ನು ತಕ್ಕೊಂಡು ಆ ಉ ಎಂದು ಅಲ್ಲಲ್ಲಿ ನಿಂತು ನಿಂತು ಅದನ್ನು ಓದಲಾರಂಭಿಸಿದನು. ಅದರಲ್ಲಿ ಕೊಲೆಯಾದ ಸ್ಮೆಲ್‌ಕವ್ಹನ ವಯಸ್ಸು ನಾಲವತ್ತು, ನಿಲುವು ಎತ್ತರ, ಅವನ ಹೊಟ್ಟೆಯೊಳಗಿನ ಮಾಸಂವು ಹಸುರಾಗಿತ್ತು. ಮುಂತಾದ ವಿಷಯಗಳು ಅಡಕಾಗಿದ್ದವು. ಅಂತೂ, ಒಮ್ಮೆ ಸಿರಸದಾರನು ಆ ರಗಳೆಯನ್ನೋದಿ ಮುಗಿಸಿದ. ನ್ಯಾಯಾಧೀಶನು ಇಷ್ಟೊತ್ತಿನವರೆಗೆ ತನ್ನ ಹಣೆಗೆ ಕೈಯಿಟ್ಟುಕೊಂಡು ಕೇಳುತ್ತಿದ್ದವನು 'ಹುಶ್' ಎಂದು ನಿಟ್ಟುಸಿರುಬಿಟ್ಟು ಗೋಣು ಮೇಲಕ್ಕೆತ್ತಿದ. ಆದರೆ ಸಿರಸದಾರನು ಮತ್ತೆ ಒಳಪರೀಕ್ಷೆಯ ವಿವರಗಳನ್ನು ಓದಹತ್ತಿದ. ಮೊದಲೇ ತಲೆಚಿಟ್ಟೆಂದು ಯಾವಾಗ ಓದಿ ಮುಗಿಸುವನೋ ಎಂದುಕೊಂಡಿದ್ದ. ಆದರೆ ಬೇಸರ್ರಿಯದ ಮತ್ತೆ ಓದಲು ಮೊದಲು ಮಾಡಿದ್ದರಿಂದ ಸುಮ್ಮನೆ ಕಣ್ಣು ಮುಚ್ಚಿಕೊಂಡು ಕುರ್ಚಿಯ ಮೇಲೆಯೇ ಒರಗಿಬಿಟ್ಟ. 'ಈ ಹಾಳು ರಗಳೆ, ಈ ಆಕಾಶಪುರಾಣವನ್ನು ಓದುವದರಿಂದೇನು? ಎಂದು ಕೆಲವರು ಬೇಸತ್ತು ಅಲ್ಲಗಳೆದರು.

ವಿಮರ್ಶೆವಿಚಾರಣೆಗಳು ತೀರಿದವು. ನ್ಯಾಯಾಧೀಶನು ಪಬ್ಲಿಕ್ ಪ್ರಾಸಿಕ್ಯೂಟರನಿಗೆ ಮಾತಾಡಹೇಳಿದರು. ಅವನು ಎದ್ದುನಿಂತು ಎಡೆತಡೆಯಿಲ್ಲದೆ ಅಖಂಡವಾಗಿ ಒಂದು ಒಂದುವರೆ ಗಂಟೆಯ ವರೆಗೆ ತನ್ನ ಮಾತಿನ ಹರಿಯನ್ನು ಬಿಡಲಿಲ್ಲ. ನಡುವೆ ಒಂದೆರಡು ಸಾರಿ ಮಾತ್ರ ಅವನು ತನ್ನ ಉಗುಳು ನುಂಗಲಿಕ್ಕೆ ನಿಂತಿರಬಹುದು. ತೀರಿತು. ಅಷ್ಟರಲ್ಲಿ ಅವನು ಅಪರಾಧಗಳ ಬುಡಕ್ಕೆ ಇಳಿದು ಸಮಾಜದಲ್ಲಿ ಇಂಥ ಅಪರಾಧಗಳಾಗಲಿಕ್ಕೆ ಯಾವ ಯಾವ ಕಾರಣಗಳಾಗುತ್ತವೆಂಬುದನ್ನು ಜೀವನತತ್ವಶಾಸ್ತ್ರದೃಷ್ಟಿಯಿಂದ ಮೊತ್ತ ಮೊದಲು ವಿವರಿಸಿದನು; ಆಮೇಲೆ, ಕೊಲೆಗೀಡಾದ ವರ್ತಕ, ಅವನ ಸ್ವಭಾವ, ಅವನು ವೇಶ್ಯೆಯರ ಬಲೆಯಲ್ಲಿ ಸಿಕ್ಕಿದ್ದು, ಹುಚ್ಚು ಔದಾರ್ಯ, ಮತ್ತು ನಂಬಿಗೆಗೀಡಾಗಿ ತನ್ನ ಜೀವವನ್ನು ತಾನೇ ಕೊಂದುಕೊಂಡ ಸಂಗತಿಯನ್ನು ಹೇಳಿದನು. ತರುವಾಯ, ಮಿಕ್ಕ ಇಬ್ಬರು ಸೆರೆಯಾಳುಗಳ ತಪ್ಪನ್ನು ಮುಂಡಿಸಿ, ' ನಿಜವಾಗಿ ನೋಡಿದರೆ, ಈ ಖಟ್ಲೆಯ ಸೂತ್ರಧಾರಳು ಮಾಸ್ಲೋವಳು ' ಎಂದು, ತನ್ನೆದುರಿನಲ್ಲಿ ನಿಂತಿರುವ ಆಕೆಯನ್ನು ಕಡೆಗಣ್ಣಿನಿಂದ ನೋಡಿ, ' ಈಕೆಯೇ ಈ ಖಟ್ಲೆಗೆಲ್ಲ ಮುಖ್ಯ ಬೀಜ. ತನ್ನ ಸಾಕಿ ಸಲಹಿದವರನ್ನು ಅಗಲಿ, ಕೆಟ್ಟ ಚಾಳಿಗೆ ಬಿದ್ದು, ತಾನು ಕೆಟ್ಟು ಮಂದಿನ್ನ ಕೆಡಿಸಿ, ಅಷ್ಟಕ್ಕೆ ತೃಪ್ತಿಯಾಗದೆ ಸೂಳೆತನಕ್ಕೆ ನಿಂತು, ಸೂಳೇಮನೆ ಸೇರಿದಳು. ಕಲಿತವಳಿದ್ದುದರಿಂದ ಅಲ್ಲಿಗೆ ಬರುವ ಜನರು ಬಲುಬೇಗ ಈಕೆಯ ಮೋಹನಾಸ್ತ್ರಕ್ಕೆ ವಶರಾಗುತ್ತಿದ್ದರು. ಸ್ಮೆಲ್‌ಕವ್ವನು ಒಳ್ಳೆಯ ಮಿದು ಮನಸಿನವ. ಭಾರೀ ಸಿರಿವಂತ. ಕರಳು ಕರಗಿಸುವ ಕಟೂಷಳ ಮಾತಿಗೆ ಮರುಳಾದ. ತನ್ನಲ್ಲಿರುವ ದುಡ್ಡು ದುಗಾಣಿ, ಉಂಗುರ ಮುಂತಾದ್ದನ್ನು ಕೊಟ್ಟುಬಿಟ್ಟ. ಅವನ್ನೆಲ್ಲಾ ಎತ್ತಿ ಹಾಕಲಿಕ್ಕೆ ಆಮೇಲೆ ಈಕೆ ಅವನನ್ನು ಕೊಂದಳು. ' ಅಂದನು.

' ಜ್ಯೂರಿಯ ಗೃಹಸ್ಥರೇ ? ಇದುನೋಡಿ. ಈ ಅಪರಾಧಿಗಳ ಪ್ರಾಣ, ಅವರ ಮುಂದಿನ ಆಯುಷ್ಯವೆಂಬುದೆಲ್ಲ ನಿಮ್ಮ ಕೈಯಲ್ಲಿದೆ, ಇಷ್ಟೇಅಲ್ಲ, ಒಂದು ಬಗೆಯಿಂದ ಸಮಾಜದ ಹಣೆಬರಹಗಾರರೇ ನೀವೆಂದರೂ ಸಲ್ಲುವದು.

ಇದನ್ನು ಚನ್ನಾಗಿ ಮನದಟ್ಟು ಮಾಡಿಕೊಂಡು, ನೀವು ಖಟ್ಲೆಯ ತೀರ್ಪನ್ನು ಕೊಡುವಿರೆಂದು ಆಸೆ. ಅಪರಾಧದ ಮಹತ್ವ, ಇಂಥವುಗಳಿಂದ ಸಮಾಜದ ಮೇಲಾಗುವ ದುಷ್ಪರಿಣಾಮ ಇವುಗಳನ್ನೆಲ್ಲ ನೀವು ಮರೆಯಲಾಗದು." ಎಂದು ನ್ಯಾಯಾಧೀಶನು ಎಚ್ಚರಿಕೆ ಕೊಟ್ಟನು.

ಪಬ್ಲಿಕ್‌ಪ್ರಾಸಿಕ್ಯೂಟರನು ಮತ್ತೆ ಎದ್ದು ನಿಂತು, "ಮಾಸ್ಲೋವಳು ವೇಶ್ಯಾಗೃಹಕ್ಕೆ ಬಂದ ಆ ಶ್ರೀಮಂತ ವರ್ತಕನನ್ನು ಮರುಳುಮಾಡಿದಳು; ಆತನ ಮನಒಲಿಸಿ, ಅವನಲ್ಲಿದ್ದುದನ್ನೆಲ್ಲ ದೋಚಿಕೊಂಡಳು. ತನ್ನ ತಪ್ಪು ಗಳೆಲ್ಲ ಬೆಳಕಿಗೆ ಬರಬಾರದೆಂದು ಅವನಿಗೆ ವಿಷಕೊಟ್ಟು ಕೊಂದಳು." ಎಂದು ಮತ್ತೊಮ್ಮೆ ಹೇಳಿ ತನ್ನ ಮಾತು ಮುಗಿಸಿದ.

ತರುವಾಯ, ಬೇರೆ ಇಬ್ಬರು ಅಪರಾಧಿಗಳ ವಕೀಲನು ಮುಂದೆ ಬಂದು ತಮ್ಮ ಪಕ್ಷಕಾರರ ಅಂಬೋಣವನ್ನು ಮಂಡಿಸಿ, ತಮ್ಮ ಪಕ್ಷಕಾರರದು ಇದರಲ್ಲೇನೂ ತಪ್ಪಿಲ್ಲ. ದಿನಾಲು ನೂರಾರು ರೂಪಾಯಿ ದುಡಿಯುವವರು. ಅವರಿಗೇನು ದುಡ್ಡಿನ ಆಸೆ; ತಪ್ಪೆಲ್ಲ ಮಾಸ್ಲೋವಳದು. ಒಂದುವೇಳೆ, ಕಳವು ಮಾಡುವದರಲ್ಲಿ ಅವರದೂ ಪಾಲು ಇತ್ತೆಂದು ಇಟ್ಟುಕೊಂಡರೂ, ವಿಷಕೊಡುವದರಲ್ಲಿ ಅವರು ಪಾಲುಗಾರರಿದ್ದಿಲ್ಲವೆಂಬುದು ಸ್ವತೇವ ಸಿದ್ಧ; ಆದ್ದರಿಂದ ಇವರನ್ನು ಬಿಡಬೇಕು ಎಂದು ತಮ್ಮ ಪಕ್ಷ ಮಂಡಿಸಿದರು.

ಆಮೇಲೆ, ಮಾಸ್ಲೋವಳ ವಕೀಲನ ಸರತಿ ಬಂತು. ತನ್ನ ಪಕ್ಷಕಾರಳನ್ನು ಉಳಿಸಲು ಅವನೂ ತನ್ನ ಕೈಲಾದ ಮಟ್ಟಿಗೆ ತರ್ಕವಾದ ಹೂಡಿದ; ಆದರೂ ಧೈರ್ಯ ಕಡಿಮೆ. ಮನಸಿನಲ್ಲಿ ಭಯ, ಅಂತು, ಮಾತಿಗೆ ಮೊದಲು ಅವನು "ನನ್ನ ಪಕ್ಷಕಾರಳು ಕಳವಿನಲ್ಲಿ ಸೇರಿದ್ದು ನಿಜ; ಆದರೆ ಆಕೆ ಉದ್ದೇಶ ಪೂರ್ವಕವಾಗಿ ಅವನಿಗೆ ವಿಷಕೊಟ್ಟಳೆಂಬುದು ಸುಳ್ಳು. ನಿದ್ದೆ ಬರುವ ಪುಡಿಯೆಂದು ತಿಳಿದು ಅವಳದನ್ನವನಿಗೆ ಕೊಟ್ಟದ್ದು, ಎಂದು ಹೇಳಿ ಹಾಗೆ ಮುಂದಕೆ ಮಾತು ಬೆಳಿಸಿ, ಗಂಡಸರು ಕ್ರೂರರು, ಬಡಪಾಯಿಗಳಾದ ಅನಾಥ ಹೆಣ್ಣು ಮಕ್ಕಳಿಗೆ ಇಲ್ಲದ ಆಸೆ ಹಚ್ಚಿ ಹೇಗೆ ಕೆಡಿಸಿ ದಾಂಗೇಡು ಮಾಡುತ್ತಾ ರೆಂಬುದನ್ನು ಕುರಿತು ಹೆದರುತ್ತ ಹೇಳಿದನು. ನ್ಯಾಯಾಧೀಶನು ಆ ವಿಷಯ ವನ್ನು ಸವಿಸ್ತರವಾಗಿ ಮಂಡಿಸಲಿಕ್ಕೆ ಅವನಿಗೆ ಪ್ರೋತ್ಸಾಹಿಸಿದನು.

ಇಷ್ಟಾದ ಮೇಲೆ, ನ್ಯಾಯಾಧೀಶನು ಅಪರಾಧಿಗಳಿಗೆ ತಮ್ಮ ತಮ್ಮ ಅಂಬೋಣಗಳನ್ನು ಮಂಡಿಸಲು ಆಜ್ಞಾಪಿಸಿದನು. ಮೊದಲನೇ ಆರೋಪಿಗಳು 'ತಮಗೇನೂ ಗೊತ್ತಿಲ್ಲ. ಎಲ್ಲ ತಪ್ಪೂ ಮಾಸ್ಲೋವಳದೇ' ಎಂದು ತಪ್ಪಿನ ಹೊರೆಯನ್ನೆಲ್ಲ ಅವಳೊಬ್ಬಳ ಮೇಲೆಯೇ ಹೇರಿ ತಾವು ಪಾರಾದರು, ಮಾಸ್ಲೋವಳು ಕೆಳಗೆ ಮುಖ ಮಾಡಿಕೊಂಡು ಕುಳಿತವಳು, ಮುಖವೆತ್ತಿ ಬೇಟೆಗಾರರು ಬೆನ್ನಟ್ಟಿದ ಜಿಂಕೆಯಂತೆ ಹೆದರಗಣ್ಣಿನಿಂದ ಸುತ್ತುಮುತ್ತು ನೋಡಿದಳು. ಅಳು ಒತ್ತರಿಸಿತು. ಮುಖಕ್ಕೆ ಕೈ ಇಕ್ಕಿ, ತಡೆಯಲಾರದೆ ಬಿಕ್ಕಿ ಬಿಕ್ಕಿ ಅಳ ಹತ್ತಿದಳು. ಇಲ್ಲಿಯವರೆಗೆ ಡಿಮಿಟ್ರಿಗೆ ತನ್ನ ತಪ್ಪು ಸಾಕಷ್ಟು ಮನಸಿಗೆ ಹೊಳೆದಿರಲಿಲ್ಲ. ಈಗ ಅವನ ಕರುಳು ಕದಡಿತು. ಹೊಟ್ಟೆಯಲ್ಲಿ ಕೆಟ್ಟ ಸಂಕಟವಾಯಿತು. ಕಣ್ಣಲ್ಲಿ ನೀರು ಚಿಮ್ಮಿದವು. ಇದನ್ನು ಯಾರಿಗೂ ತೋರಗೊಡಬಾರದೆಂದು ಕಣ್ಣಿಗೆ ಕನಡಕ ಮರೆಮಾಡಿದ. ಜೇಬಿನಲ್ಲಿಯ ಕರವಸ್ತ್ರವನ್ನು ತೆಗೆದು ಮೂಗು ಒರಸಿಕೊಂಡನು. ತನ್ನ ತಪ್ಪು ಬಯಲಿಗೆ ಬರಬಹುದೇನೋ ಎಂಬ ಭಯವು ಅವನನ್ನು ಎಂದು ಇಲ್ಲದಷ್ಟು ಇಂದು ಬಾಧಿಸಿತು.

ಸೆರೆಯಾಳುಗಳ ಕಡೆಯ ಅಂಬೋಣ ಕೇಳಿದ್ದಾಯಿತು. ನ್ಯಾಯಾಧೀಶನು ಖಟ್ಲೆಯ ಸಾರಾಂಶವನ್ನು ಸ್ವಲ್ಪದರಲ್ಲಿ ತಿಳಿಸಲಿಕ್ಕೆಂದು ಮಾತಾಡಹತ್ತಿದನು. 'ಯಾವುದೊಂದು ವಸ್ತುವನ್ನು ಬೀಗ (ಕೀಲಿ)ಹಾಕಿ ಇಟ್ಟಿರಲಿ, ಇಡದೆ ಇರಲಿ, ಅದನ್ನು ಕೇಳದೆ ತೆಗೆದುಕೊಳ್ಳುವದೆಂದರೆ, ಕಳವೇ ಸರಿ. ಒಬ್ಬನನ್ನು ಕೊಲ್ಲುವ ದೆಂದರೆ ಕೊಲೆ, —ವಿಷಹಾಕಿ ಕೊಂದಿರಲಿ, ಮತ್ತ್ಯಾವ ಬಗೆಯಿಂದ ಕೊಂದಿರಲಿ.' ಎಂದು ಹೇಳಿ ಅಂತೂ ಇಂತೂ ಖಟ್ಲೆಯನ್ನು ಮುಗಿಸಿಬಿಡುವ ಗಡಿಬಿಡಿಯಲ್ಲಿದ್ದನು. ಅವನಿಗೆ ತನ್ನ ಅಚ್ಚುಮೆಚ್ಚಿನ ನಲ್ಲೆಯ ಕಡೆ ಮನಸು ಎಳೆಯುತ್ತಿತ್ತು; ಆದುದರಿಂದ ಅಲ್ಲಿ ತೂಗುಹಾಕಿದ್ದ ಗಡಿಯಾರವನ್ನು ತಿರುತಿರುಗಿ ನೋಡಿ, ಐದಕ್ಕೆ ಇನ್ನೂ ನಾಲ್ಕೈದು ನಿಮಿಷ ಅವಕಾಶವಿದೆ ಎಂದು ತಿಳಿದು, ಜ್ಯೂರಿಯವರನ್ನು ಕುರಿತು, 'ನಿಮ್ಮ ಮೇಲೆ ಹೆಚ್ಚಿನ ಹೊಣೆ ಇದೆ. ನಿಮಗೆ ಕಟ್ಟಳೆಯಿಂದ ಕೊಡಲಾಗಿರುವ ಹಕ್ಕುಗಳನ್ನು ನೀವು ಬಹು ವಿಚಕ್ಷಣೆಯಿಂದ ಬಳಸತಕ್ಕದ್ದು; ಅವುಗಳ ದುರುಪಯೋಗ ಮಾಡಲಾಗದು.

ನೀವೆಂದರೆ ಈಗ ಕೇವಲ ವ್ಯಕ್ತಿಗಳಲ್ಲದೆ ಸಮಾಜದ ವಿವೇಕಶಕ್ತಿ; ಆದುದರಿಂದ ಸುಟ್ಟಾಗಿ ನುಡಿಯುವ ಮಾತುಗಳನ್ನು ಒಡೆಯತಕ್ಕದ್ದಲ್ಲ ' ಎಂದು ಎಚ್ಚರಿಕೆ ಕೊಟ್ಟನು.

ನ್ಯಾಯಾಧೀಶನ ಮಾತನ್ನೆಲ್ಲ ಕಟೂಷಳು ಕಣ್ಣು ಮಿಳುಕಿಸದೆ, ಎವೆಗೆ ಎವೆ ಹಚ್ಚದೆ ಕೇಳುತ್ತಿದ್ದಳು. ಡಿಮಿಟ್ರಿಯು ಮಾತ್ರ ಆಕೆಯನ್ನೇ ನೆಟ್ಟ ಗಣ್ಣಿನಿಂದ ನೋಡುತ್ತಿದ್ದ ಹಾಗೆ ಅವನ ಕಣ್ಣಿಗೆ ಹಿಂದಿನ ದೃಶ್ಯಗಳೆಲ್ಲ ಚಿತ್ರ ಚಿತ್ರವಾಗಿ ಬಂದು ಮುಕುರುತ್ತಿದ್ದವು.

ಕಟೂಷಳ ಮೈಯಲ್ಲಿ ಈಗ ಸೆರೆಮನೆಯ ನಿಲುವಂಗಿ, ತಕ್ಕವಟ್ಟಿಗೆ ತುಂಬಿಕೊಂಡ ಆಕೆಯ ಮೈ-ಮುಖ-ಎದೆ ಹಣೆ ಮತ್ತು ಗಲ್ಲಗಳ ಮೇಲೆ ಒಂದೆರಡು ನೀರಿಗೆಯ ಗೆರೆಗಳು, ಕಣ್ಣುಗಳು ಕೊಂಚ ಉಬ್ಬಿದಂತೆ, ಹೀಗೆಲ್ಲ ಮುಖದಲ್ಲಿ ಬದಲಾವಣೆಯಾಗಿದ್ದರೂ, ಹಿಂದೆ ಈಸ್ಟರ ಹಬ್ಬದ ರಾತ್ರಿ ತಾನು ಕಂಡ ಆ ಕಳೆ ಕಳೆಯಾಗಿರುವ ಬೆಡಗಿನ ಮಾಟಾದ ನಗುಮುಖದ ತನ್ನ ಮೋಹದ ಮುದ್ದಿಯು ಈಕೆಯೇ ಎಂದು ಈಗ ಚನ್ನಾಗಿ ಗುರುತಿಸಿದನು. ಆಗ ಅವನ ಆನಂದಕ್ಕೆ ಪಾರವಿರಲಿಲ್ಲ. ' ಅಹಹ! ಏನಿದಚ್ಚರಿ? ಇಷ್ಟು ದಿನ ನನ್ನ ಕಣ್ಣಿಗೆ ಬೀಳದೆ, ಇಂದು ನಾನು ಜ್ಯೂರಿ ಇರುವ ಕಾಲಕ್ಕೆ-ಅದು ಕೂಡ ಸೆರೆಯಾಳಿನ ವೇಷದಲ್ಲಿ—ಈಕೆಯನ್ನು ನೋಡಿದ್ದು ಎಂತಹ ವಿಲಕ್ಷಣ ಯೋಗವಿದು? ಈ ವ್ಯಾಜ್ಯವಾದರೂ ಕೆಸರೊಳಗಿನ ಕಂಬ. ಯಾವ ಕಡೆ ಒಲಿಯುವದೋ ಯಾರಿಗೆ ಗೊತ್ತು! ' ಹೀಗೆಂದು ತನ್ನಲ್ಲಿಯೇ ತಾನು ಆಳೆಯುತ್ತ ತೆಪ್ಪಗೆ ಕುಳಿತನು.

ತನ್ನ ಅಪರಾಧವು ಅವನ ಮನಸಿನಲ್ಲಿ ಎಡೆಬಿಡದೆ ಕಟೆಯುಹತ್ತಿತು. ಇದೆಲ್ಲ ತನ್ನ ತಪ್ಪಿನ ಪರಿಣಾಮವೇ ಎಂದು ಒಂದು ಸಲ ಅಂದುಕೊಳ್ಳು ವನು; ಇನ್ನೊಂದು ಸಲ ಏನೂ ಅನ್ನಲಿಕ್ಕಾಗದೆ ಕಣ್ಮರೆ ಮಾಡುವನು. ಆದರೂ, ವಿವೇಕಶಕ್ತಿಯ ಮಿಂಚು ಝುಗ್ಗನೇ ಎದೆಯಲ್ಲಿ ಮಿಂಚಿದೊಡನೆ ಅವನಿಗೆ ತನ್ನ ಪಾಶವೀ ಕೃತಿಗಳ ನೆನಪಾಗಿ ನಡುಗುವನು. ಮೈ ಜುಮ್ಮೆಂದು ನಿಮಿರುವದು. ಎದೆಬಡಿದುಕೊಳ್ಳುವದು. ತನ್ನ ಜೀವನವೇ ಬಿರುಗಾಳಿಯ ಹೊಡೆತಕ್ಕೆ ಸಿಲುಕಿ ಹೊಯ್ದಾಡಿದಂತೆ ಭಾಸವಾಗುವದು.

ಕೊನೆಯಲ್ಲಿ ನ್ಯಾಯಾಧೀಶನು ಕೆಲವು ಪ್ರಶ್ನೆಗಳ ಪಟ್ಟಿಯನ್ನು ಜ್ಯೂರಿಯ ಮುಖಂಡನ ಕೈಗೆ ಕೊಟ್ಟನು. ಜ್ಯೂರಿಯವರು ಕೋರ್ಟಿನಿಂದೆದ್ದು ಒಬ್ಬರಹಿಂದೊಬ್ಬರು ಏಕಾಂತ ಕೋಣೆಗೆ ಹೋದರು. ನ್ಯಾಯಾಧೀಶನೂ ಹೊರಟನು. ತತ್ ಕ್ಷಣವೇ ಒಬ್ಬ ಬಿಚ್ಚುಗತ್ತಿಯ ಸಿಪಾಯಿಯು ಬಂದು ಹೆಗಲಮೇಲೆ ಕತ್ತಿಯನ್ನಿಟ್ಟುಕೊಂಡು ಕಾವಲಮಾಡುತ್ತ ನಿಂತನು. ಇತ್ತ ಕೋಣೆಯಲ್ಲಿ ಜ್ಯೂರಿಯವರಲ್ಲಿ ಚರ್ಚೆ ನಡೆಯಿತು. ಡಿಮಿಟ್ರಿಯು ತಾನೊಬ್ಬ ಜ್ಯೂರಿ ಇದ್ದರೂ, ಕಟೂಷಳದು ಯಾವ ತಪ್ಪೂ ಇಲ್ಲವೆಂದು ಮನಗಂಡು ಎಲ್ಲರ ಚರ್ಚೆಯನ್ನು ಸುಮ್ಮನೆ ಕೇಳುತ್ತ ಕುಳಿತಿದ್ದ. ಕಟೂಷಳ ಹತ್ತಿರ ಬೀಗದ ಕೈ ಇದ್ದು, ಆಕೆ ದುಡ್ಡು ಕದ್ದದ್ದು ಅಪರಾಧ; ಆದರೆ, ಅವನನ್ನು ಕೊಲ್ಲಬೇಕೆಂದು ಆಕೆಯ ಉದ್ದೇಶ ಇಲ್ಲದ್ದರಿಂದ ಆ ತಪ್ಪನ್ನು ಆಕೆಯ ಮೇಲೆ ಹೊರಿಸಲಿಕ್ಕೆ ಬರುವದಿಲ್ಲ,' ಎಂದ. ಇನ್ನೊಬ್ಬನು ಅವನ ಬಾಯಿ ಬಡಿದನು. ಇಷ್ಟರಲ್ಲಿ ಗಣಗಣ ಗಂಟೆ ಬಾರಿಸಿತು.

ನ್ಯಾಯಾಧೀಶನು ಕೋರ್ಟಿನಲ್ಲಿ ಬಂದು ಕುಳಿತನು. ಜ್ಯೂರಿಯವರೂ ಬಂದರು. ಕಟೂಷಳು ಕಳವು-ಬಿಳವು ಮಾಡಿರದೆ, ಯಾವ ಉದ್ದೇಶವಿಲ್ಲದೆ ವರ್ತಕನಿಗೆ ವಿಷ ಹಾಕಿರುವಳು' ಎಂದು ಕೆಲವರ ಮತ್ತು ತನ್ನ ಮತವಿದ್ದಂತೆ ನ್ಯಾಯಾಧೀಶನು ಹೇಳಿದನು.

'ಹೀಗನ್ನುವದೆಂದರೆ ಆಕೆಯನ್ನು ಸೈಬಿರಿಯಕ್ಕೆ ಹದ್ದುಪಾರು ಮಾಡುವಂತೆಯೇ ಇವೆ. ಆಕೆ ನಿರಪರಾಧಿ.' ಎಂದು ಡಿಮಿಟ್ರಿಯು ಮೆಲ್ಲಗೆ ನುಡಿದು, ತನ್ನ ಹತ್ತಿರ ಕುಳಿತಿರುವ ಮತ್ತೊಬ್ಬ ಜ್ಯೂರಿಯ ಕಡೆ ಕಣ್ಣು ಹೊರಳಿಸಿ 'ಏನು? ನೀವೂ ಹೀಗೇ ಅನ್ನುವಿರಷ್ಟೇ?' ಅಂದನು.

'ಹೌದು. ಖಂಡಿತ ಆಕೆ ಪೂರಾ ನಿರ್ದೋಷಿ!' ಎಂದು ಅವನಂದನು.

'ಹುಂ. ಏನು? ನಿಮ್ಮ ಅಂಬೋಣವೇನು? ಎಂದು ನ್ಯಾಯಾಧೀಶನು ಜ್ಯೂರಿಯವರ ಮುಖ ನೋಡಿ ಕೇಳಿದನು.

ಎಲ್ಲರೂ ತಮ್ಮ ತಮ್ಮೊಳಗೆ ಮಾತಾಡಿಕೊಂಡು ನ್ಯಾಯಾಧೀಶನಿಗೆ ತಮ್ಮ ಅಭಿಪ್ರಾಯ ತಿಳಿಸಿದರು. ಅವನು ಸ್ವಲ್ಪ ಹೊತ್ತು ಒಳಗೆ ಹೋದನು.

ಡಿಮಿಟ್ರಿಯು ತನ್ನ ಮುಂದೆ ನಿಂತಿರುವ ಸೆರೆಯಾಳುಗಳನ್ನು ನೋಡಿದ. ಅವರ ಮುಖದ ಮೇಲೆ ನೀರು ಇರಲಿಲ್ಲ. ಕಟೂಷಳು ನಗುನಗುತ್ತ ಕುಳಿತಿದ್ದಳು. ಆಕೆಯ ಬಿಡುಗಡೆಯಾಗುವದೇನೋ ಅಂದುಕೊಂಡಿದ್ದ ಡಿಮಿಟ್ರಿಯು; ಮತ್ತು ಆಕೆ ಊರಲ್ಲಿದ್ದರೆ, ಆಕೆಯನ್ನು ಹೇಗೆ ಒಲಿಸಿಕೊಳ್ಳಬೇಕೆಂಬುವ ವಿಚಾರವಿನ್ನೂ ಬಗೆ ಹರಿದಿರಲಿಲ್ಲ; ಆದರೆ ಆಕೆಯನ್ನು ಸೈಬೀರಿಯಕ್ಕೆ ಗಡಿಪಾರು ಮಾಡುವ ರೆಂಬ ವಿಚಾರ ತಿಳಿದೊಡನೆ ಅವನ ಎದೆ ಧಸ್ಸೆಂದಿತು.

ತರುವಾಯ, ನ್ಯಾಯಾಧೀಶನು ತನ್ನ ಕೈಯಲ್ಲಿ ಕಾಗದ ಹಿಡಿದು ಕೊಂಡು ತನ್ನ ಚೇಂಬರದಿಂದ ಬಂದವನು, ತನ್ನ ಅಧಿಕಾರದ ಠೀವಿಯಿಂದ ತನ್ನ ತೀರ್ಪನ್ನು ಭರ ಭರ ಓದಿ ತೋರಿಸಿದನು. ಆದರಲ್ಲಿ ಕಟೂಷಳಿಗೆ, ಅವಳ ಜೊತೆಯಲ್ಲಿದ್ದ ಒಕ್ಕಲಿಗನಿಗೆ, ಸೈಬೀರಿಯಾಕ್ಕೆ ಗಡಿಪಾರಿನ ಶಿಕ್ಷೆ ಎಂದು ಹೇಳಿದ. ಮತ್ತೊಬ್ಬ ಹೆಂಗಸಿಗೆ ಮೂರು ವರ್ಷ ಸೆರೆಮನೆಯ ವಾಸ ಎಂದು ಶಿಕ್ಷೆ ಹೇಳಿದ. ಆದನ್ನು ಕೇಳಿ, ಕಟೂಷಳು 'ನಾನು ನಿರ್ದೋಷಿ, ನನ್ನದೇನೂ ತಪ್ಪಿಲ್ಲ.' ಎಂದು ಕೋರ್ಟಿನಲ್ಲಿ ಪ್ರತಿಧ್ವನಿಯಾಗುವಂತೆ ನುಡಿದು, ತನ್ನ ಹಿಮ್ಮಗ್ಗಲಿಗಿರುವ ಬಾಕಿನ ಮೇಲೆ ಕುಳಿತು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಡಿಮಿಟ್ರಿಗೆ ಈಗ ಕಸವಿಸಿ. ಅವನ ದುಷ್ಟವಿಚಾರಗಳೆಲ್ಲ ಎಲ್ಲಿಯೋ ಓಡಿದವು. ಕಟೂಷಳು ಕುಳಿತಲ್ಲಿಗೆ ಹುಚ್ಚನಂತೆ ಓಡುತ್ತಹೋಗಿ ಆಕೆಯನ್ನೂ ಮಿಕಿಮಿಕಿ ನೋಡುತ್ತ ಹುಚ್ಚನಂತೆ ನಿಂತನು. ಸುತ್ತು ಮುತ್ತಿನ ಜನರು ಇದೇನೆಂದು ನೊಡಲಿಕ್ಕೆ ನೆರೆದರು. ಎದ್ದು ಕಟೂಷಳು ಅಳುತ್ತ ಬಿಕ್ಕುತ್ತ, ತನ್ನ ಕರವಸ್ತ್ರ ದಿಂದ ಕಣ್ಣೊರಸಿಕೊಳ್ಳುತ್ತ ಒಂದೊಂದು ಹೆಜ್ಜೆ ನಡೆಯಹತ್ತಿದಳು. ಡಿಮಿಟ್ರಿಯ ಕಡೆಗೆ ಆಕೆಯ ಲಕ್ಷ ಹೋಗಿರಲಿಲ್ಲ. ಡಿಮಿಟ್ರಿಯು ಆಕೆಯ ಹಿಂದಿಂದೆ ನಾಲ್ಕು ಹೆಜ್ಜೆ ನಡೆದಂತೆ ಮಾಡಿ. ಏನೋ ಮನಸಿನಲ್ಲಿ ಹೊಳೆದು, ಸಮೀಪದಲ್ಲಿಯೇ ಇರುವ ನ್ಯಾಯಾಧೀಶನ ಕಡೆ ಗಡಿಬಿಡಿಯಿಂದ ಹೋಗಿ 'ಮಹಾಸ್ವಾಮಿ, ಈಗಾಗಲೇ ತಾವು ತೀರ್ಪು ಹೇಳಿದ ವ್ಯಾಜ್ಯದ ವಿಚಾರವಾಗಿ ನಾನು ತಮಗೆ ಕೆಲವು ಮಾತು ಹೇಳಬೇಕಾಗಿದೆ. ನಾನೊಬ್ಬ ಜ್ಯೂರಿ' ಎಂದನು.

“ ಆಗತ್ಯವಾಗಿ ಹೇಳಬಹುದು. ಸಂತೋಷ. ನಿಮಗೇನು ಆಗಬೇಕಾಗಿದೆ ಈಗ ? ” ಎಂದು ಕೇಳಿದನು.

“ ಏನಂದರೆ, ಕಟೂಷಳು ವಿಷಹಾಕಿದ ಅಪರಾಧ ಮಾಡಿಲ್ಲ; ಹೀಗಿದ್ದರೂ ಆಕೆಗೆ ಗಡಿಪಾರಿನ ಶಿಕ್ಷೆ ಹೇಳಲಾಗಿದೆಯಲ್ಲಾ? ಎಂದು ಔದಾಸೀನ್ಯದಿಂದ ನುಡಿದನು. ”

‘ ಹಾಗೆಂದರೇನು? ನಿಮ್ಮೆಲ್ಲರ ಅನುಮತಿಯಿಂದಲೇ ಕೋರ್ಟು ಆಕೆಗೆ ಶಿಕ್ಷೆ ಹೇಳಿದೆ’ ಎಂದು ನ್ಯಾಯಾಧೀಶನು ಅಂದನು; ಅಷ್ಟರಲ್ಲಿ ‘ ಕೊಲ್ಲಬೇಕೆಂದು ಆಕೆಯ ಉದ್ದೇಶವಿರಲಿಲ್ಲ ’ ಎಂಬ ಮಾತುಗಳು ನೆನಪಾಗಿ, ಅವಸರದಲ್ಲಿ ತಾನು ಅವುಗಳನ್ನು ಆಡಲಿಕ್ಕೆ ಮರೆತೆನೆಂದನು.

‘ ಹಾಗಿದ್ದರೆ, ಆ ತಪ್ಪನ್ನು ಈಗ ಸರಿಪಡಿಸಲಿಕ್ಕಾಗದೇ ? ’ ಎಂದು ಡಿಮಿಟ್ರಿಯು ಪ್ರಶ್ನೆ ಮಾಡಿದ.

‘ ಅದಕ್ಕೇನು ಅಡ್ಡಿ ? ನೀವು ವಕೀಲರೊಡನೆ ಮಾತಾಡಬಹುದು ಆ ಬಗ್ಗೆ ’ ಎಂದು ನ್ಯಾಯಾಧೀಶನು ಉತ್ತರಕೊಟ್ಟ.

‘ ಆದರೆ, ನೀವು ಹೀಗೆ ಮಾಡಿದ್ದು ಭಯಂಕರವಲ್ಲವೇ ! ’ ಎಂದ ಡಿಮಿಟ್ರಿಯು.

‘ ಇದು ನೋಡಿ. ಕೊಲ್ಲುವ ಉದ್ದೇಶವಿಲ್ಲದ ’ ಎಂಬುವ ವಿಶೇಷ ಪದಗಳನ್ನು ಜ್ಯೂರಿಯುವರಾದ ನೀವು ಹಾಕಿದ್ದರೆ, ಆಕೆಗೆ ಬಿಡುಗಡೆಯಾಗಬಹುದಾಗಿತ್ತು.

‘ ಹೌದು. ಹಾಗೆ ನಾವು ಮಾಡದೆ ಇದ್ದುದು ಅಕ್ಷಮ್ಯ ತಪ್ಪು ’ ಎಂದನು ಡಿಮಿಟ್ರಿಯು.

‘ ಅಂದ ಮೇಲೆ, ಅದಕ್ಕೆ ಯಾರೇನು ಮಾಡುವದು ? ’ ಎಂದು ನ್ಯಾಯಾಧೀಶನು ನಕ್ಕು, ಅವನ ಮುಖವನ್ನೇ ನೋಡ ಹತ್ತಿ, ‘ ಇಷ್ಟವಿದ್ದರೆ, ನೀವು ಆಪೀಲು ಮಾಡಿರಿ ’ ಎಂದ.

‘ ಆಗಲಿ. ನಿಮ್ಮ ಹೇಳಿಕೆಯಂತೆ ಮಾಡುವೆ ’ ಅಂದನು.

' ನಮಸ್ಕಾರ, ನನ್ನಿಂದ ನಿಮಗೇನಾದರೂ ಪ್ರಯೋಜನ ಆಗಬೇಕಿದ್ದರೆ, ಇದೋ, ನನ್ನ ವಿಳಾಸವನ್ನು ನಿಮಗೆ ಕೊಟ್ಟಿರುವೆ. ' ಹೀಗೆಂದು ನ್ಯಾಯಾಧೀಶನು ತನ್ನ ಮೋಟಾರಿನಲ್ಲಿ ಕುಳಿತು ನಡೆದನು.

ನ್ಯಾಯಾಧೀಶನೊಡನೆ ತಾನು ಮಾತನಾಡಿದ್ದು, ಅವನು ತನಗೆ ಸಮಾಧಾನವಾಗುವಂತೆ ಉತ್ತರ ಕೊಟ್ಟುದು, ಇವುಗಳಿಂದ ಡಿಮಿಟ್ರಿಗೆ ಕೊಂಚ ಹಾಯವೆನಿಸಿತು; ಆದರೂ, ಆಕೆಯ ಹಳವಂಡ ತಪ್ಪಲಿಲ್ಲ. ' ಹೇಗಾದರೂ ಆಗಲಿ, ಏನಾದರೂ ಆಗಲಿ, ಆಕೆಯನ್ನುಳಿಸಲಿಕ್ಕೆ, ಆಕೆಯ ಜೀವಮಾನವು ಆದಷ್ಟು ಸುಖಕರವಾಗುವಂತೆ ಕೈಲಾದುದನ್ನು ನಾನು ಮಾಡದೆ ವಿಧಿ ಇಲ್ಲ. ಅದೇನೂ ತಪ್ಪಿದ್ದಲ್ಲ. ನಾನದನ್ನು ಮಾಡಿಯೇ ತೀರಬೇಕು, ' ಎಂದು ತಿರುಗಿ ಕೋರ್ಟಿಗೆ ಹೋಗಿ, ಅಲ್ಲಿರುವ ಒಬ್ಬಿಬ್ಬ ತನ್ನ ಗುರುತಿನ ವಕೀಲರ ಸಲಹೆ ಕೇಳಿದ. ಅವರು ಅವನಿಗೆ ಸಹಾಯ ಮಾಡಲು ವಚನವಿತ್ತರು. ಅದಕ್ಕೆ ಹತ್ತಿದಷ್ಟು ವೆಚ್ಚನ್ನು ನಾನು ಸಹಿಸುವೆನೆಂದನು. ಏನೂ ಚಿಂತೆ ಬೇಡ ಎಂದು ಅವರು ಧೈರ್ಯಕೊಟ್ಟರು.

ಡಿಮಿಟ್ರಿಗೆ ಈಗ ಮೊದಲಿಗಿಂತ ಹೆಚ್ಚು ಶಾಂತವಾಯಿತು ಮನಸು. ಅಷ್ಟರಲ್ಲಿ ತಂಗಾಳಿ ಸುಳಿಯಿತು. ಅದರಿಂದಂತೂ ಮನಸು ಹೆಚ್ಚು ಹಗುರೆನಿಸಿತು. ಅತ್ತಿತ್ತ ನೋಡುತ್ತ ಹೋಗುವಷ್ಟರಲ್ಲಿಗೆ ಟ್ರಾಮುಗಾಡಿ ಅತ್ತಿಂದ ಭರ್ರನೆ ಬಂದಿತು. ಅದರಲ್ಲಿ ಚಟ್ಟನೆ ಜಿಗಿದು ಕೂತುಕೊಂಡು ಕೋರ್ಚಾಜಿನಳ ಮನೆಗೆ ಬಂದಿಳಿದನು.



# ೭ ಅಂತರಂಗದ ಕದ ತೆರೆಯಿತು.




ಮಹಾಸ್ವಾಮಿ? ಒಳಗೆ ನಡೆಯಬೇಕು,' ಎಂದು ಬಲು ಆದರದಿಂದ ಬಾಗಿಲಲ್ಲಿ ನಿಂತಿದ್ದ ಕಾವಲುಗಾರನು ಅಂದು, ಸದ್ದಾಗದಂತೆ ಬಾಗಿಲು ತೆರೆದು 'ನಿಮ್ಮ ದಾರಿಕಾಯುತ್ತಿದ್ದಾರೆ ಒಳಗೆ. ಎಲ್ಲರೂ ಊಟಕ್ಕೆ ಕುಳಿತಿದ್ದಾರೆ. ನೀವು ಬಂದರೆ ಒಳಗೆ ಬಿಡಬೇಕೆಂದೂ ಹೇಳಿಟ್ಟಿದ್ದಾರೆ.' ಹೀಗೆಂದು ಡಿಮಿಟ್ರಿಯ ಸಂಗಡ ನಾಲ್ಕು ಹೆಜ್ಜೆ ಹೋದನು.

ಡಿಮಿಟ್ರಿಯು 'ಯಾರಾದರೂ ಹೊಸಬರು ಇರುವರೇನು?' ಎಂದು ತನ್ನ ಮೈಮೇಲಿನ ಓವ್ಹರಕೋಟನ್ನು ಬಿಚ್ಚುತ್ತ ಕೇಳಿದ.

'ಯಾರೋ ಒಬ್ಬಿಬ್ಬರು ಮಾತ್ರ ಕಾಣಿಸುತ್ತಾರೆ' ಅಂದನವನು.

ಡಿಮಿಟ್ರಿಯು ಹಾಗೇ ಲಗುಬಗೆಯಿಂದ ಮೇಲಕ್ಕೆ ಹೋದನು. ಮುಮ್ಮಗಲಿನಲ್ಲಿರುವ ವಿಶಾಲವಾದ ಪಡಸಾಲೆಯನ್ನು ದಾಟಿ ಸೀದಾ ಅವನು ಭೋಜನಶಾಲೆಗೆ ನಡೆದ. ಅಲ್ಲಿ ಕೋರ್ಚಾಜಿನ ಕುಟುಂಬದವರೆಲ್ಲರೂ ಊಟಕ್ಕೆ ಸುತ್ತುಮುತ್ತು ಕುಳಿತಿದ್ದರು. ಕೋರ್ಚಾಜಿನ ಮನೆಯ ಹಿರಿಯನು ಮೇಲು-ಗಡೆಯಲ್ಲಿ ಅಧ್ಯಕ್ಷತೆಯಿಂದ ಕುಳಿತಿದ್ದನು; ಅವನ ಎಡಬಲ ಭಾಗಕ್ಕೆ ದುಂಡಗೆ ಮಿಕ್ಕ ಅತಿಥಿಗಳು, ಹೆಂಗಸರು, ಮನೆಯವರು; ಇನ್ನೊಂದು ಮಗ್ಗಲಿಗೆ ಮಿಸಿಯು ಒಬ್ಬಳೇ ಕುಳಿತಿದ್ದಳು.

'ಓಹೋ. ಬಂದಿರಾ! ಚನ್ನಾಯಿತು. ಕೂತುಕೊಳ್ಳಿರಿ! ಈಗ ತಾನೇ ನಾವೂ ಕುಳಿತಿದ್ದೇವೆ.' ಎಂದು ಬಾಯಲ್ಲಿಯ ಅನ್ನವನ್ನು ಮೆಲ್ಲುತ್ತ, ತನ್ನ ಕೆಂಗಣ್ಣುಗಳನ್ನು ಮೇಲಕ್ಕೆ ಮಾಡುತ್ತ' ನುಡಿದನು ಕೋರ್ಚಾಜಿನ ಮನೆತನದ ಹಿರಿಯನು. ಕೋರ್ಚಾಜಿನ ಕುಟುಂಬದವರನ್ನು ಡಿಮಿಟ್ರಿಯು ಚನ್ನಾಗಿಬಲ್ಲ; ಹಲವು ಬಾರಿ ಅವರ ಮನೆಯಲ್ಲಿ ಉಂಡಿದ್ದ ತಿಂದಿದ್ದ; ಹೀಗಿದ್ದರೂ, ಇಂದು, ಅವನಿಗೆ ಕೋರ್ಚಾಜಿನ ಮನೆತನದ ಹಿರಿಯ ಮನುಷ್ಯನನ್ನು—ಉಣ್ಣುವಾಗ

ಅವನು ಚಪ್ಪರಿಸುತಿರುವ ಕೆಂಪಗಿನ ತುಟಿ, ವಾಸ್ಕೋಟಿನಲ್ಲಿ ಹುಗಿದಂತಿರುವ ಅವನ ಕೊಬ್ಬಿದ ಗೋಣು, ಹೂಂ ಅಂತ ಮೇಯ್ದು ಮೇಯ್ದು ನೆಣಬೆಳೆದ ಗೂಳಿಯಂತಹ ಅವನ ಮೈಕಟ್ಟು, ಇವೆಲ್ಲ ಡಿಮಿಟ್ರಿಗೆ ಅಸಹ್ಯವನ್ನುಂಟು ಮಾಡಿದವು. ಮತ್ತು ತನ್ನ ಕೈ ನಡಿಯುತ್ತಿದ್ದಾಗ ಅವನು ಜನರನ್ನು ಎಷ್ಟು ಕ್ರೂರವಾಗಿ ದಂಡಿಸುತಿದ್ದ, ಎಳ್ಳಷ್ಟು ದಯೆ-ಮಾಯೆಯಿಲ್ಲದೆ ಅವರನ್ನು ಎಷ್ಟು ಹೊಡೆಬಡಿಮಾಡುತ್ತಿದ್ದ ಎಂಬುದನ್ನು ನೆನಸಿಕೊಂಡ. ಅವನಿಗೆ ಹೇಗೇಗೋ ಆಯಿತು. ಶ್ರೀಮಂತಿಕೆಯು ಮನುಷ್ಯನ ಕೈಯಿಂದ ಎಂತೆಂತಹ ಅಮಾನುಷ ಕೃತಿಗಳನ್ನು ಮಾಡಹಚ್ಚುತ್ತದೆಂಬುದರ ನೆನಪಾಗಿ, ಅವನಿಗೆ ದಂಗುಬಡಿದಂತಾಯಿತು; ಆದರೂ, ಡಿಮಿಟ್ರಿಯು ಎಲ್ಲರಿಗೆ ' ಶೇಕಹ್ಯಾಂಡ ' ಮಾಡುತ್ತ ಸುತ್ತು ತಿರುಗಿ ಮಿಸಿಯ ಹತ್ತರಿರುವ ಬರಿದಾದ ಸ್ಥಳದಲ್ಲಿ ಕೂಡ ಬೇಕೆಂದಿದ್ದ. ಆದರೆ, ಹಿರಿಯನಾದ ಕೋರ್ಚಾಜಿನನು ತನ್ನಬದಿಯಲ್ಲಿರುವ ಮೇಜಿನ ಹತ್ತರ ಕುಳ್ಳಿರಲು ಬಲವಂತ ಮಾಡಿದ. ಅವನು ' ಆಗಲಿ ' ಎಂದು ಅಲ್ಲಿಯೇ ಕುಳಿತು ಒಂದೊಂದಾಗಿ ಸಾಮಾನುಗಳನ್ನು ತೆಗೆದುಕೊಂಡು ಗಸಗಸನೆ ತಿನ್ನಲಾರಂಭಿಸಿದ. ಬಾಯಲ್ಲಿ ತುತ್ತಿಡುವವರೆಗೆ ತನಗೆಷ್ಟು ಹಸಿವೆ ಯಾಗಿದೆಂಬುದರ ಅರಿವು ಅವನಿಗಿರಲಿಲ್ಲ.

' ಏನು? ಸಮಾಜದಲ್ಲಿಯ ಅನೀತಿಯ ಬೀಜಗಳನ್ನೆಲ್ಲ ಬೇರು ಸಹಿತ ಕಿತ್ತು ತೆಗೆಯುವದಾಯಿತೇ? ' ಎಂದು ಸೊಟ್ಟಗಣ್ಣಿನಿಂದ ನೋಡುತ್ತ ಅಲ್ಲಿ ಕುಳಿತಿರುವನೊಬ್ಬನು ಕೊಕ್ಕಿ ನುಡಿದು, 'ಇದ್ದರೆ ಇಂಥ ಜ್ಯೂರಿಯವರಿರಬೇಕು- ಅಪರಾಧಿಗಳನ್ನು ಬಿಟ್ಟು, ನಿರಪರಾಧಿಗಳನ್ನು ದಂಡಿಸುವವರು ' ಅಂದನು.

ಸಮೀಪದಲ್ಲಿಯೇ ಕುಳಿತ ಕೋರ್ಚಾಜಿನನು ' ಸಮಾಜದಲ್ಲಿಯ ಅನೀತಿಯ ಬೀಜಗಳನ್ನು ಕೀಳುವವರೇ' ಎಂದು ತಿರುತಿರುಗಿ ನುಡಿದುನಕ್ಕನು. ಅವನಿಗೆ ಡಿಮಿಟ್ರಿಯಲ್ಲಿ ಒಳ್ಳೇ ವಿಶ್ವಾಸ, ಆದರ.

ಡಿಮಿಟ್ರಿಗೆ ಇಬ್ಬರ ಮಾತಿನದೂ ಅರ್ಥವಾಯಿತು. ಮತ್ತೊಬ್ಬನು ಆಡಿದ ಕೊಕ್ಕಿ ಮಾತುಗಳು ಎದೆಯಲ್ಲಿ ನಟ್ಟವು; ಆದರೂ, ಯಾವನ್ನೂ ಲಕ್ಷಿಸದಂತೆ ತನ್ನಷ್ಟಕ್ಕೆ ತಾನು ಉಣ್ಣುತ್ತಿದ್ದ.

'ಇರಲಿ ಅದೆಲ್ಲ. ಈಗೇನು ತೆಗೆದುಕೊಂಡು ಮಾಡುವದು?' ಎಂದು ಮಿಸಿಯು ಮುಗುಳುನಗೆಯಿಂದ ನಕ್ಕು 'ಅವರು ಊಟ ಮಾಡಲಿ' ಅಂದಳು.

ಆದರೆ, ಅಲ್ಲಿ ಊಟಕ್ಕೆ ಬಂದಿದ್ದ ಮತ್ತೊಬ್ಬ ಅತಿಥಿಯು ಸುಮ್ಮನಿರದೆ ತನ್ನ ಬಾಯಿ ಹರಿಬಿಟ್ಟು, ಅನ್ಯಾಯದಿಂದ ಆ ಹೆಣ್ಣುಮಗಳನ್ನು ಗಡಿಪಾರಿನ ಶಿಕ್ಷೆಗೆ ಗುರಿಮಾಡಿದ ಜ್ಯೂರಿಯವರನ್ನು ಸಿಟ್ಟಿನಿಂದ ಬಯ್ಯತೊಡಗಿದ.

ಇಂದು ಮಿಸಿಯಳ ಉಡುಪು ತೊಡಪು ದಿನದಂತೆ ಬಹು ಅಚ್ಚುಕಟ್ಟಾಗಿ, ಚೊಕ್ಕಟವಾಗಿದ್ದಿತು.

ಡಿಮಿಟ್ರಿಯು ಊಟ ತೀರಿದ್ದನ್ನು ತಿಳಿದು ಮಿಸಿಯು ಅವನ ಮುಖವನ್ನು ಮಿಟಿಮಿಟಿ ನಿಂತು ನಿಂತು ನೋಡಿ 'ಯಾಕೋ ಬಹು ಹಸಿದಂತೆ ಕಾಣಿಸಿತು'! ಅಂದಳು.

ಡಿಮಿಟ್ರಿಗೆ ಕೋರ್ಚಾಜಿನ ಮನೆಯೆಂದರೆ, ಮನಸಿಗೊಂದು ಸೊಗಸು. ನೊಂದ ಹೃದಯಕ್ಕೊಂದು ಸಮಾಧಾನದ ಸ್ಥಳ; ಮೇಲಾಗಿ, ಅಲ್ಲಿಯವರೆಲ್ಲರೂ ಅವನಿಗೆ ವಿಶೇಷ ಆದರಮಾಡುತ್ತಿದ್ದರು. ಇದರಿಂದ ಅವನಿಗೆ ಅವರ ಮನೆಗೆ ಆಗಾಗ್ಗೆ ಹೋಗಿಕುಳ್ಳಿರಬೇಕೆನಿಸುತ್ತಿತ್ತು; ಆದರೆ, ಇವತ್ತು ಅದೇಕೋ ಡಿಮಿಟ್ರಿಗೆ ಅವರ ಮನೆಯೆಂದರೆ ತಲೆಬೇಸರಿಕೆ, ಎಲ್ಲವೂ ತಲೆಚಿಟ್ಟು, ಯಾವಾಗಾದರೊಮ್ಮೆ ಬಂದಾಗೆಲ್ಲ ಕೋರ್ಚಾಜಿನರ ಮನೆಯ ಬಾಗಿಲ ಕಾಯುವವನಿಂದ ಮೊದಲು ಮಾಡಿಕೊಂಡು, ಅವರ ಮನೆಯ ತೊಟ್ಟಿಲುಗಳು, ಸುತ್ತಲಿನ ಸಾಮಾನು, ಅವರಲ್ಲಿಯ ಚಿತ್ರ, ಆಳುಹೋಳು, ಇವುಗಳನ್ನು ಕಂಡರೂ, ಅವನಿಗೇನೋ ಒಂದುಬಗೆಯ ಪ್ರೀತಿಯ ಗಾಳಿ ಮೈಸೇರಿದಂತೆ ಸುಖವೆನಿಸುವದು; ಆದರೆ ಇಂದು ಅದೆಲ್ಲ ತಿರುವು ಮುರುವು. ಆ ಮುದ್ದುಮುಖದ, ಮೃದುಮಧುರ ಮಿಸಿಯಳೂ ಅದೇಕೋ ಅವನಿಗೆ ಮೋಹಗೊಳಿಸಲಿಲ್ಲ. ಆಕೆಯಲ್ಲಿ ಅಡಗಿದ ವ್ಯಂಗಗಳೆಲ್ಲ ಕಂಡವು. ಊಟವಾದ ಮೇಲೆ ಎಲ್ಲರೂ ಸುವಾಸನೆಯ ನೀರಿನಿಂದ ಬಾಯಿ ತೊಳೆದುಕೊಂಡು ಬೇರೆ ಮೇಜಿಗೆ ಹೋಗಿ ಅಲ್ಲಿ ಕುಳಿತು ಮಾತನಾಡಹತ್ತಿದರು.

ಮಿಸಿಯಳಿಗೆ ಡಿಮಿಟ್ರಿಯ ಕಡೆಗೆ ತಿರುತಿರುಗಿ ನಗು ಮುಖದಿಂದ ನೋಡಿ ಕೆದರಿ ಕೆದರಿ ಮಾತಾಡುವ ಆಸೆ. ಡಿಮಿಟ್ರಿಯ ಮನಸಿಗೆ ಸೊಗಸಿರಲಿಲ್ಲ. 'ನಮ್ಮ ತಾಯಿಯನ್ನು ಕಾಣಲಿಕ್ಕೆ ಬರುವಿರ್ಯಾ!' ಎಂದು ಮಿಸಿಯು ಡಿಮಿಟ್ರಿಗೆ ಪ್ರಶ್ನೆ ಮಾಡಿದಳು. ಅವನು ಒಲ್ಲದ ದನಿಯಿಂದ 'ಹೌದು, ಹೌದು. ಭೆಟ್ಟಿಯಾಗಬೇಕು' ಎಂದು ಮಾತಾಡಿದರೂ, ಅವನ ಮುಖವು ಭೆಟ್ಟಿ ಬೇಡ ಎಂಬುವ ಭಾವವನ್ನೇ ತೋರುತ್ತಿತ್ತು.

ಡಿಮಿಟ್ರಿಗೂ ಕೋರ್ಚಾಜಿನ ಕುಟುಂಬದವರಿಗೂ ಅವನ ತಾಯಿಯಿಂದಲೂ ವಿಶೇಷ ಋಣಾನುಬಂಧ; ಮೇಲಾಗಿ, ಡಿಮಿಟ್ರಿಯು ಬಲು ಜಾಣನೆಂದು ಮನೆಗೆ ಬಂದಾಗೆಲ್ಲ ಕೋರ್ಚಾಜಿನ ಮನೆಯವರು ಅವನನ್ನು ಬಂಗಾರ ಕಂಡಂತೆ ಮಾಡುತ್ತಿದ್ದರು; ಆದುದರಿಂದ, ಅವನು ಮಿಸಿಯಳನ್ನು ಮದುವೆಯಾಗಬೇಕೆಂದು ಎಲ್ಲರ ಅಪೇಕ್ಷೆ. ಮಿಸಿಯಳಿಗೆ ವಯಸ್ಸಾಗಿತ್ತು; ಆಕೆಗೆ ಮದುವೆಯ ಬಯಕೆ; ಆದರೆ, ಡಿಮಿಟ್ರಿಯನ್ನೇ ಮದುವೆಯಾದೇನು. ಅವನೇ ತನಗೆ ತಕ್ಕವರ. ಅವನು ತನ್ನವನಾಗಬೇಕು. ಎಂಬ ಹಂಬಲ; ಆದುದರಿಂದ ತನ್ನ ತಾಯಿಗೆ ಅವನ ಭೆಟ್ಟಿಮಾಡಿಸಬೇಕೆಂದು ಆಸೆ.

ಡಿಮಿಟ್ರಿಯನ್ನು ಕಂಡು ಮಿಸಿಯಳು ಒನಪಿನಿಂದ 'ಈವತ್ತೇಕೋ ತಮ್ಮ ಮುಖ ಬಾಡಿದಂತಿದೆ. ಏನಾದರೂ ವಿಶೇಷ ಸಮಾಚಾರವಿದೆಯೋ? ಕೋರ್ಟಿನ ವ್ಯಾಜ್ಯದ ಗದ್ದಲವೇನು? ಎಂದು ಮೆಲ್ಲಗೆ ಮಾತಿನ ಎಳೆ ತೆಗೆದಳು. ಡಿಮಿಟ್ರಿಯು ಬಹು ನಾಚಿಕೊಂಡಂತೆ ಮಾಡಿ, ತನಗೆ ಗೊತ್ತಿರುವ ಸಂಗತಿಯನ್ನು ಹೇಳಲು ಒಪ್ಪಲಿಲ್ಲ 'ಅದೇನದು? ಹೇಳದಂಥ ಸುದ್ದಿಯು?' ಎಂದು ಆಕೆ ಬಾಯಿಬಿಟ್ಟು ಪ್ರಶ್ನೆ ಮಾಡಿದಳು. ಮುಖಕ್ಕೆ ಗಂಟು ಹಾಕಿದಂತೆ ಮಾಡಿ 'ನಾನು ಹೇಳಲಾರೆ' ಎಂದು ಏನೋ ವಿಶೇಷ ಸಂಗತಿ ನಡೆದಿರುವಂತೆಯೂ, ಅದು ಯಾರ ಮುಂದೆ ಆಡದಷ್ಟು ಮಹತ್ವದ್ದಿರುವಂತೆಯೂ, ಅವನು ಮುಖಭಾವವನ್ನು ತೋರ್ಪಡಿಸಿದನು. 'ಒಳ್ಳೇದು. ಹಾಗೇ ಆಗಲಿ' ಎಂದು ಗೋಣು ಅಲ್ಲಾಡಿಸಿ ಮಿಸಿಯು ಹೊರಟಳು.

ಈ ಹೊತ್ತಿನಲ್ಲಿ ಏನಾದರೂ ಸ್ವಲ್ಪ ಸಡಿಲು ನಡೆಯನ್ನು ತೋರಿಸಿದ್ದರೆ, ಪರಿಣಾಮ ನೆಟ್ಟಗಾಗದೆಂದು, ಡಿಮಿಟ್ರಿಯು ಮನಸು ಬಿಗಿಹಿಡಿದುಕೊಂಡೇ ಇದ್ದನು. ಒಂದು ದೃಷ್ಟಿಯಿಂದ ಮಿಸಿಯಳ ಮನ ನೋಯಿಸಿದಕ್ಕಾಗಿ ಅವನಿಗೆ ಮನದಲ್ಲಿ ಏನೋ ಒಂದು ವಿಧದ ವ್ಯಸನ; ಆದರೂ ನಿರ್ವಾಹವಿಲ್ಲದೆ, ಡಿಮಿಟ್ರಿಯು ಮಿಸಿಯಳ ಹಿಂದಿಂದೆ ಸುಮ್ಮನೆ ಕೋರ್ಚಾಜಿನ ರಾಣಿಯಿರುವ ಕೋಣೆಗೆ ಹೊರಟನು. ಕೋರ್ಚಾಜಿನ ರಾಣಿಯು ಹಿರಿಯ ಮನುಷ್ಯಳು. ಮಿಸಿಯಳ ತಾಯಿ. ಆಕೆಯ ಹೆಸರು ಸೋಫಿಯಾ ಎಂದು.

ಇಷ್ಟೊತ್ತಿನ ವರೆಗೆ ಎಲ್ಲರೂ ಕೂಡಿದ ಸಂತೋಷಕೂಟಕ್ಕೆ ಈ ರಾಣಿಯು ಬಂದಿರಲಿಲ್ಲ; ಅವಳಿಗೆ ಅದು ಸೇರುತ್ತಿರಲಿಲ್ಲ; ಆದ್ದರಿಂದ ಒಬ್ಬಳೇ ಕುಳಿತುಕೊಂಡು ಉಣ್ಣುವಳು. ಆಕೆಯ ಕೋಣೆಗೆ ಡಿಮಿಟ್ರಿಯು ಹೋದನು. ಸುಂದರವಾದ ಜಮಖಾನೆಯನ್ನು ಹಾಸಿ ಕುರ್ಚಿ, ಮೇಜು, ಕೋಚ, ಬಗೆ ಬಗೆಯ ಚಿತ್ರಪಟ, ಚಂದಾದ ಕನ್ನಡಿ ಮುಂತಾದ ಸಿರಿವಂತಿಕೆಯ ಸಾಮಾನುಗಳಿಂದ ಶಿಂಗರಿಸಿದ ಕೋಣೆ. ಸೋಫಿಯಾ ರಾಣಿಯು ಒಂದು ಅಲಂಕಾರದ ಕೋಚದ ಮೇಲೆ ಕುಳಿತಿದ್ದಳು. ಹತ್ತರವೇ ಇರುವ ಚಿಕ್ಕ ಮೇಜಿನ ಮೇಲೆ ಕಾಫಿಯ ಕಪ್ಪು. ಸೋಫಿಯಳು ತೆಳುವಾದ ಉದ್ದನ್ನ ಹೆಂಗಸು. ತಲೆಯಲ್ಲಿ ಕಾಡಿಗೆಯಂಥ ಕರಿಕರಿಯಾದ ಕೂದಲು. ಮುಖದಲ್ಲಿ ಮನತಣಿಸುವಂಥ ದೊಡ್ಡ ದೊಡ್ಡ ಕಣ್ಣುಗಳು. ಹಲ್ಲುಗಳು ಮಾತ್ರ ಕೊಂಚ ಉದ್ದ; ಒಟ್ಟಾರೆ ಆಕೆಯ ಮುಖಕ್ಕೆ ಮುದಿಕಳೆ ಬಂದಿದ್ದರೂ, ತಾನು ಹರೆಯದವಳೆಂದು ನಟಿಸುವ ಹವ್ಯಾಸ ಆಕೆಗೆ. ಅವಳ ಬಳಿಯಲ್ಲಿಯೇ ಒಬ್ಬ ಡಾಕ್ಟರ ಕುಳಿತಿದ್ದ. ಅವನಿಗೂ ಆಕೆಗೂ ಅನೀತಿಯ ಸಂಬಂಧವಿದ್ದ ಸುದ್ದಿ ಡಿಮಿಟ್ರಿಯ ಕಿವಿಗೆ ಈ ಮೊದಲೇ ಬಂದಿತ್ತು; ಆದರೂ ಇಂದು, ಅವರಿಬ್ಬರೂ ಒಂದೇ ಕೋಚದ ಮೇಲೆ ಕುಳಿತದ್ದನ್ನು ಕಂಡು ಡಿಮಿಟ್ರಿಗೆ ಅಸಹ್ಯವೆನಿಸಿತು.

ಮಿಸಿಯಳು ಡಿಮಿಟ್ರಿಯ ಸಂಗಡ ಒಳಗೆ ಬಂದು ಅಲ್ಲಿ ಅವನನ್ನು ಬಿಟ್ಟು, 'ತಾಯಿಯೊಡನೆ ಮಾತನಾಡುವದಾದ ಬಳಿಕ ನನ್ನೆಡೆಗೆ ಬನ್ನಿರಿ' ಎಂದು ನುಡಿದು ಹುಸಿ ನಕ್ಕು, ಸದ್ದುಮಾಡದೆ ನಡೆದಳು.

ತಾಯಿಯು ಡಿಮಿಟ್ರಿಯನ್ನು ಏಕೋ ಕೊಂಚ ಓರೆಗಣ್ಣಿನಿಂದಲೂ, ಇವನೇಕೆ ಈಗ ಬಂದನೆಂಬುವ ಸಲ್ಲದ ಕಣ್ಣುಗಳಿಂದಲೂ ನೋಡಿ, ನಕ್ಕು 'ಬನ್ನಿ. ಕುಳಿತುಕೊಳ್ಳಿ. ಎಲ್ಲಾ ಆರೋಗ್ಯವೇ? ಏನು ವಿಶೇಷ?' ಎಂದು ಮಾತಿಗೆ ಮೊದಲು ಮಾಡಿದಳು; ಮತ್ತು 'ಈಗ ತಾನೇ ನೀವು ಬೇಸತ್ತು ಕೋರ್ಟಿನಿಂದ ಬಂದಂತೆ ಕಾಣುತ್ತದೆ. ನಿಮ್ಮಂಥ ಸಹೃದಯರಿಗೆ ಅದು ಪೂರಾ ತ್ರಾಸದಾಯಕವೇ ಸರಿ.' ಎಂದು ಉಪಚಾರದ ಮಾತಾಡಿದಳು.

'ಹೌದು, ನಿಮ್ಮ ಮಾತು ನಿಜ.' ಎಂದು ಡಿಮಿಟ್ರಿಯು ಉತ್ತರ ಕೊಟ್ಟಂತೆ ಮಾಡಿ ಮತ್ತೆ 'ಆದರೂ ಮನುಷ್ಯನನ್ನು ಆವರಿಸುತ್ತದೆ ಆಗಾಗ್ಗೆ ನಿರಾ....ಅದರಿಂದ, ಹೀಗೀಗೇ ಎಂದು ನಿರ್ಣಯ ಹೇಳಲು ಮನುಷ್ಯನಿಗೆ ಹಕ್ಕು ಇಲ್ಲ.' ಅಂದು ಸುಮ್ಮನಾದನು.

ಡಿಮಿಟ್ರಿಯ ಮಾತು ಕೋರ್ಚಾಜಿನರಾಣಿಯ ಮನಸಿಗೆ ನಿಜವೆಂದು ಹೊಳೆದಂತೆ ಎನಿಸಿತು. ಸಾಮಾನ್ಯವಾಗಿ ತನ್ನೊಡನೆ ಮಾತಾಡಲಿಕ್ಕೆಂದು ಬರುವವರನ್ನೆಲ್ಲ ಹೊಗಳುವದೊಂದು ಆಕೆಯ ಸ್ವಭಾವ. ಅದರಂತೆ ಹೊಗಳಿ ದೇಶಾವರಿನಕ್ಕು, 'ಒಳ್ಳೇದು! ಆ ನಿಮ್ಮ ಚಿತ್ರಪಟದ ವಿಷಯವೇನು? ಅದನ್ನು ಕಂಡರೆ ನನಗಂತೂ ಬಲು ಪ್ರೀತಿ. ನನ್ನ ಮೈಯಲ್ಲಿ ನೆಟ್ಟಗಿದ್ದರೆ, ನಾನೆಂದೋ ಆದನ್ನು ನೋಡಲಿಕ್ಕೆ ಹೋಗುತ್ತಿದ್ದೆ; ಆದರೆ ಶಕ್ತಿ ಉಳಿದಿಲ್ಲ ಈಗ.' ಎಂದು ನುಡಿದಳು.

'ಈಗ ಅಂತಹ ವಿಚಾರವನ್ನೆಲ್ಲ ನಾನು ಬಿಟ್ಟಿರುವೆ.' ಎಂದು ಸಮಾಧಾನ ಹೇಳಿದನು. ಆಕೆಯ ದೇಶಾವರಿ ನಗೆ ಮತ್ತು ಮುಖ ನೋಡಿ ಮಣಿಹಾಕುವ ಪದ್ಧತಿ, ಇವುಗಳನ್ನು ಕಂಡು ಅವನಿಗೆ ಸ್ವಲ್ಪ ಜಿಹಾಸೆ ಹುಟ್ಟಿತು. 'ಇಷ್ಟೆಲ್ಲ ಸುಳ್ಳಿನಸುರುಳೀ ಸುತ್ತಲು, ದೇಶಾವರಿ ಮಾತಾಡಲು ಈಕೆಗೆ ಆದೆಂತು ನಾಚಿಕೆಯಾಗುವದಿಲ್ಲವೋ' ಎಂದು ತನ್ನೊಳಗೆ ತಾನು ಅಂದುಕೊಂಡು ಹುಬ್ಬುಗಂಟಿಕ್ಕಿದನು.

ಡಿಮಿಟ್ರಿಯ ಮನಸು ಈಗ ಸ್ವಸ್ಥವಿಲ್ಲವೆಂದು ಆಕೆ ಮನಗಂಡು ಮಿಸಿಯಳು ನಿಮ್ಮ ದಾರಿ ಕಾಯುತ್ತಲಿರುವಳು! ಆಕೆಯ ಕಡೆಗಿಷ್ಟು ಹೋಗಿ

ಮಾತಾಡಬಹುದು. ಇಷ್ಟವಿದ್ದರೆ? ” ಎಂದಳು. ಡಿಮಿಟ್ರಿಯು ಚಟ್ಟನೆ ಎದ್ದು ಕೈಗೆ ಬರಿಯ ಎಲಬುಗಳೇ ಹತ್ತುವ ಆಕೆಯ ಕೈ ಅಲ್ಲಾಡಿಸಿ ನಡೆದನು.

ದಾರಿಯಲ್ಲಿ ಕೋರ್ಚಾಜಿನ ಮನೆತನದ ಮತ್ತೊಬ್ಬ ಹೆಣ್ಣುಮಗಳು ಮತ್ತು ಮಿಸಿಯು ಭೆಟ್ಟಿಯಾದರು. ‘ ಅದೇನು ? ಇಂದು ನಿಮ್ಮ ಮನಸು ಬಹು ಕುಗ್ಗಿದೆ ! ಇದು ಜ್ಯೂರಿಯಾದದ್ದರ ಪರಿಣಾಮವೇನು ? ” ಎಂದು ಹತ್ತರಇದ್ದ ಮತ್ತೊಬ್ಬ ಹೆಂಗಸು ಚುಚ್ಚಿ ಮಾತಾಡಿದಳು.

“ ಹೌದು ಕ್ಷಮಿಸಿರಿ ! ಇಂದು ನನ್ನ ಮನಸ್ಸು ಸ್ಥಿರವಿಲ್ಲ. ಅದೇಕೋ ಒಂದು ಬಗೆಯ ಹುರುಹುರು ಮನಸಿಗೆ.” ಅಂದನು.

‘ ಅದೇನು ಇಷ್ಟೊಂದು? ’

‘ ಅದರ ಮಾತೆತ್ತಬೇಡಿರಿ. ’ ಅಂದನು ಡಿಮಿಟ್ರಿಯು. ‘ ನಾವೆಂದೂ ಸುಳ್ಳಾಡಬಾರದು. ನಿಜವನ್ನೇ ಆಡಬೇಕೆಂದು ಹಿಂದಕ್ಕೆ ನೀವು ಹೇಳುತ್ತಿದ್ದ ದನ್ನು ಈಗ ಮರೆತಿರೇನು? ಆಗ, ಎಷ್ಟೆಷ್ಟೋ ಸತ್ಯದ ಪುರಾಣವನ್ನೇ ಬಿಚ್ಚುತ್ತಿದ್ದಿರಲ್ಲ! ಅದೆಲ್ಲ ಈಗೆಲ್ಲಿ ಮಾಯವಾಯಿತು? ’ ಎಂದು ಮಿಸಿಯಳನ್ನು ನೋಡಿ, “ ಯಾಕೆ ಹೌದಲ್ಲ? ಮಿಸಿ? ” ಎಂದು ಹುಬ್ಬುಹಾರಿಸಿ ನುಡಿದಳು.

ಡಿಮಿಟ್ರಿಯು ಸುಮ್ಮನಿರದೆ, ‘ ಅದು ಹುಡುಗಾಟಿಕೆ. ನನ್ನಮಟ್ಟಿಗೆ ಹೇಳಬೇಕೆಂದರೆ, ಎಂದೂ ಸತ್ಯ ಮಾತಾಡದಷ್ಟು ಕೆಟ್ಟವನು.’ ಎಂದು ಸಣ್ಣ ಮುಖಮಾಡಿ ಅಂದನು.

‘ ಇದು ನೋಡಿ. ನಿಮ್ಮ ತಪ್ಪನ್ನು ತಿದ್ದಿಕೋ ಬೇಡಿರಿ; ಆದರೆ ನಾವು ಇಷ್ಟು ಕೆಡಲಿಕ್ಕೆ ಕಾರಣವೇನೆಂಬುದನ್ನು ಹೇಳಿರಿ.’ ಎಂದು ಡಿಮಿಟ್ರಿಯನ್ನು ಲಕ್ಷಿಸದೆ ನುಡಿದಳು ಆ ಹೆಂಗಸು.

‘ ತನ್ನ ಮನಸ್ಸು ಸ್ವಸ್ಥವಿಲ್ಲೆಂದು ಬಾಯಿಂದ ಒಪ್ಪಿಕೊಳ್ಳುವದಕ್ಕಿಂತ ಹೆಚ್ಚಿನ ತಪ್ಪು ಇನ್ನಾವದಿರಬೇಕು? ನನ್ನಿಂದಾಗದು ಹೀಗನ್ನುವದು ಎಂದೂ ಆಗದು. ಮತ್ತು ನನಗೆಂದೂ ಹಾಗೆ ಆನಿಸುವದೂ ಇಲ್ಲ. ಇರಲಿ. ನೀವು ನಮ್ಮ

ಜೊತೆ ಬಂದರೆ, ನಿಮ್ಮ ಮನಸಿನ ಖಿನ್ನತೆಯನ್ನು ನಿವಾರಿಸಲು ಯತ್ನಿಸುವೆವು.' ಎಂದು ಡಿಮಿಟ್ರಿಯನ್ನು ಕುಡಿನೋಟದಿಂದ ನೋಡಿ ಮಿಸಿಯು ಎಂದಳು.

ಡಿಮಿಟ್ರಿಗೆ ಕಟ್ಟ್ಯಾಡಿಸಿದಷ್ಟು ಆನಂದವಾಯಿತು; ಆದರೂ, ಇನ್ನು ಇಲ್ಲಿ ನಿಂತು ಪ್ರಯೋಜನವಿಲ್ಲೆಂದು 'ಕ್ಷಮಿಸಿ' ಎಂದು ಕೇಳಿಕೊಂಡು ಮನೆದಾರಿ ಹಿಡಿದನು.

'ಇಗೋ! ನೋಡಿರಿ! ನಾಳೆ ನೀವು ಬಂದೇ ತೀರಬೇಕು. ಅಂ' ಮಿಸಿಯು ಹೀಗಂದು 'ಯಾವಳಲ್ಲಿಯೋ ಇವರ ಮನಸ್ಸು ಸಿಲುಕಿಕೊಂಡಂತೆ ಕಾಣಿಸುತ್ತದೆ' ಎಂದು ಮತ್ತೇನೇನೋ ಆಡುವಷ್ಟರಲ್ಲಿ ಆಕೆಯ ಮುಖ ಕಂದಿ ಕುಂದಿತು. 'ಆಗಲಿ. ಯಾರಿಗೂ ಒಳಿತು ಕೆಡಕು ದಿನಗಳು ತಪ್ಪಿಲ್ಲ' ಎಂದು ಸುಮ್ಮನಾದಳು.

ಮೈಮೇಲೆ ಎಚ್ಚರವಿಲ್ಲದೆ, ತನ್ನ ಬಾಯಲ್ಲಿಯೇ 'ನಾಚಿಕೆಗೇಡಿ, ಮೂರ್ಖ ಹುಚ್ಚು' ಹೀಗಂದುಕೊಳ್ಳುತ್ತ ದಿನಾಲು ಹಾಯ್ದು ಹೋಗುವ ಬೀದಿಗಳೊಳಗಿಂದ ಡಿಮಿಟ್ರಿಯು ಮನೆಗೆ ನಡೆದ. ಮನಸಿನ ಖಿನ್ನತೆಯ ಇನ್ನೂ ಬೆಳಗಿರಲಿಲ್ಲ. ಆಕೆ ಮನಸಿನಿಂದ ನನ್ನನ್ನೇ ನಂಬಿದ್ದು ನಾನೂ ಆಕೆಯನ್ನು ನಂಬಿರುವೆ. ಇನ್ನು ಕೈ ಬಿಡುವದೆಂತು? ಎಂಬುವ ವಿಚಾರವೇ ಅವನನ್ನು ತಲೆಕೆಳಗೆ ಮಾಡುತ್ತಿತ್ತು; ಆದರೂ, ಇಂದು ಅವನು ಮನಸು ಕಲ್ಲು ಮಾಡಿದ. ಮಿಸಿಯಳನ್ನು ಮದುವೆಯಾಗುವದು ಸಾಧ್ಯವಿಲ್ಲ ಎಂದು ಪದರಿಗೆ ಗಂಟು ಹಾಕಿಕೊಂಡನು.

ಅವನ ತಲೆಯೊಳಗೆಲ್ಲ ಕತ್ತಲೆಕವಿದು, ಅದೆಕೋ ತನ್ನ ಜೀವನವೇ ಅಸಹ್ಯವಾಯಿತು. 'ಈ ಜಗತ್ತೇ ಹಾಳು! ಹುಚ್ಚು. ನಾಚಿಕೆಗೇಡಿ' ಎಂದು ಒಟಗುಟ್ಟುತ್ತಲೇ ತನ್ನ ಮನೆಯ ಅಂಗಳದಲ್ಲಿ ಕಾಲಿಟ್ಟನು. ಸೇವಕನು ಮುಂದೆ ಬಂದನು. ಅವನನ್ನು ಕುರಿತು 'ನಾನಿಂದು ಉಣ್ಣುವ ಹಾಗಿಲ್ಲ' ಎಂದು ಹೇಳಿ ತನ್ನ ಕೋಣೆ ಸೇರಿದನು. ಆಳು ಅವನ ಹಿಂದಿಂದೆ ಕೋಣೆಗೆ.

ಹೋಗಿ, ಮೇಜನ್ನು ಹಸನ ಮಾಡಹತ್ತಿದ. ಡಿಮಿಟ್ರಿಗೆ ಈಗ ಯಾರೂ ಬೇಡಾಗಿದ್ದರು. ಸೇವಕನನ್ನು ಕೆಂಗಣ್ಣಿನಿಂದ ನೋಡಿದನು. ಅವನು ತನ್ನ ಕೆಲಸ ತೀರಿಸಿ ಹೋದನು. ಡಿಮಿಟ್ರಿಗೆ ಮನ ರಮಿಸಲಿಲ್ಲ. ಒಂದೆರಡು ಹೆಜ್ಜೆ ಅಲ್ಲಿಯೇ ಅಡ್ಡಾಡಿದಂತೆ ಮಾಡಿ ಮತ್ತೊಂದು ಕೋಣೆ ಹೊಕ್ಕನು. ಅದು ಕೂಡ್ರುವ ಕೋಣೆ. ಇದೇ ಕೋಣೆಯಲ್ಲಿ ಮೂರು ತಿಂಗಳಾಚೆ ಡಿಮಿಟ್ರಿಯ ತಾಯಿ ಪ್ರಾಣ ಬಿಟ್ಟಿದ್ದಳು. ಈ ಕೋಣೆಯಲ್ಲಿಯೇ ಡಿಮಿಟ್ರಿಯ ತಾಯಿ ತಂದೆಗಳ ಒಂದೊಂದು ತದ್ರೂಪಭಾವಪಟ್ಟಗಳಿದ್ದು, ಅವುಗಳ ಮುಂದೆ ಢಾಳಾಗಿ ಎರಡು ನಂದಾದೀಪಗಳು ಉರಿಯುತ್ತಿದ್ದವು. ಕೋಣೆಯಲ್ಲಿ ಹೊಕ್ಕು ನೋಡಿದಾಕ್ಷಣವೇ ಡಿಮಿಟ್ರಿಗೆ ತಾಯಿಯ ನೆನಪಾಯಿತು. ಕೊನೆಗಾಲದಲ್ಲಿ ತನ್ನ ಹಾಗೂ ತಾಯಿಯ ಸಂಬಂಧದ ಹೃದಯ ಸ್ಪರ್ಶಿಯಾದ ಹಲವು ಚಿತ್ರಗಳು ಅವನ ಕಣ್ಣಿಗೆ ಕಟ್ಟಿದ್ದವು, ಅದರಿಂದ ಅವನ ಮನಸು ಬಲು ಖತಿಗೊಂಡಿತು. ಆಕೆಯ ಮರಣಕಾಲದ ವೇದನೆಗಳನ್ನು ನೋಡಲಾರದೆ, ದೇವರು ಈಕೆಯ ಕಣ್ಣುಗಳನ್ನು ಏಕೆ ಬೇಗ ಮುಚ್ಚಲೊಲ್ಲನೋ ಎಂದು ತಾನು ಅಂದುಕೊಂಡದ್ದೂ ನೆನಪಾಯಿತು. ಹಾಗೆ ನಾನು ಅಂದದ್ದು, ಆಕೆ ನನಗೆ ಬೇಸರಾದಳೆಂದಲ್ಲ. ಆಕೆಯ ಕಷ್ಟ ನೋಡಲಾರದ್ದಕ್ಕೆ ನಾನು ಅಂದೆ ಎಂದು ತನ್ನೊಳಗೆ ತಾನೇ ಸಮಾಧಾನ ಮಾಡಿಕೊಂಡು, ಒಂದೆರಡು ಹೆಜ್ಜೆ ಮುಂದೆ ಹೋಗಿ ತನ್ನೆಡೆಗೆ ಎದ್ದು ಬರುವಳೇನೋ ಎಂಬಂತಿರುವ ತಾಯಿಯ ಚಿತ್ರವನ್ನು ನಿಟ್ಟಿಸಿನೋಡಲಾರಂಭಿಸಿದ; ಹಿಂದಕ್ಕೆ ಇದೇ ಕೋಣೆಯಲ್ಲಿ ವೇದನೆಗಳಿಂದ ನರಳುತ್ತಬಿದ್ದ ತಾಯಿ, ಆಕೆ ನರಳುವದು, ಮಾತಾಡುವದು, ಅವನ ಕಣ್ಮುಂದೆ ಚಿತ್ರದಂತೆ ನಿಂತವು. ಜಡ್ಡಿನ ಗಬ್ಬುವಾಸನೆಯು ಮೂಗಿಗೆ ಅಡರಿತು. ಸಾಯುವ ಮುಂಚೆ ಎರಡು ದಿನ ತಾಯಿಯು ತನ್ನನ್ನು ಕಟ್ಟಿಗೆಯಂಥ ಬಿಳಚಿದ ಕೈಗಳಿಂದ ಹಿಡಿದು ಹತ್ತರ ಕುಳ್ಳಿರಿಸಿಕೊಂಡು, ಇಷ್ಟಗಲ ಕಣ್ತೆರೆದು ದಿಟ್ಟಿಸಿ 'ಮಿಟಿಯಾ, ( ಡಿಮಿಟ್ರಿಯ ಅಕ್ಕರೆಯ ಹೆಸರು ) ನಾನು ಮಾಡಬೇಕಾದ್ದನ್ನು ನಿನಗೆ ಮಾಡಿಲ್ಲವೆಂದು ನೀನು ಅಷ್ಟರಿಂದಲೇ ನನ್ನನ್ನು ಏನೋ ಎಂದು ತಿಳಿಯಬೇಡ' ಎಂದು ಕಣ್ತುಂಬ ನೀರು ತಂದು ನುಡಿದಳು.

'ಹಾ! ಎಷ್ಟು ಭೀಕರ?' ಎಂದು ತನ್ನೊಳಗೆ ತಾನು ಬೆಚ್ಚಿದಂತೆ ತಾಯಿಯ ಚಿತ್ರ ನೋಡುತ್ತಿದ್ದಹಾಗೆ, ಆಕೆಯ ಅರೆದೆರೆದ ಎದೆಯಕಡೆ ದೃಷ್ಟಿ ಹೋಯಿತು; ಆಗ ಇದ್ದಕ್ಕಿದ್ದಂತೆ ಮೊದಲು ಮಿಸಿಯಳ ನೆನಪಾಯಿತು; 'ಥು! ಇದೇನು ಅಸಹ್ಯ? ಹೇಸಿವಿಚಾರ' ಎಂದು ಅದನ್ನು ಬಲವಾಗಿ ಮನಸಿನಿಂದ ಹೊರ ದೂಡಿದನು.

'ಅದೆಲ್ಲ ಸುಳ್ಳು, ನಾನು ಸ್ವತಂತ್ರ. ನನ್ನಿಷ್ಟಕ್ಕೆ. ನನಗೆ ಯಾರ ಹಂಗೂ ಬೇಡ. ಈ ಕೋರ್ಚಾಜಿನ ಮನೆತನ. ಆ ರಾಣಿ, ಇವರೆಲ್ಲರ ಸಂಬಂಧ ಸಾಕು. ನನ್ನ ಮಟ್ಟಿಗೆ ನನ್ನನ್ನು ಸ್ವೇಚ್ಛೆಯಿಂದ ಇರಗೊಟ್ಟರೆ ಸಾಕು. ನಾನು ರೋಮಕ್ಕೆ ಹೋಗಲಿ, ಮತ್ತೆಲ್ಲಿ ಹೋಗಲಿ! ಮತ್ತು ಅಲ್ಲಿ ಹೋಗಿ, ನನ್ನ ಚಿತ್ರ ತೆಗೆಯುವ ಕೆಲಸಕ್ಕೆ ನಿಲ್ಲಲಿ!' ಹೀಗಂದನು. ಮೊಟ್ಟಮೊದಲು ಚಿತ್ರಗಾರಿಕೆಯಲ್ಲಿ ತನ್ನ ಬುದ್ಧಿಯು ತನ್ಮಯನಾಗುವದು ಹೇಗೋ ಏನೋ ಎಂದು ಅವನು ಅನುಮಾನಗೊಂಡನು. ಆ ಮೇಲೆ 'ಅಡ್ಡಿ ಇಲ್ಲ. ಆದದ್ದಾಗಲಿ. ನಾನು ಯಾರ ಉಸಾಬರಿ ಇಲ್ಲದೆ ನನ್ನಮಟ್ಟಿಗೆ ಸುಸೂತ್ರ ಉಂಡಾಡಿಕೊಂಡು ಇದ್ದರೆ ಅದೇ ಹೆಚ್ಚು; ಆದುದರಿಂದ ಮೊದಲು ಕಾನ್‌ಸ್ಟಾಂಟಿನೋಪಲ್ಲ; ಆ ಮೇಲೆ ರೋಮ ಪಟ್ಟಣಕ್ಕೆ ಹೋಗುವದೇ ಲೇಸು; ಈಗಂತೂ ಮೊದಲು ಈ ಹಾಳು ರಗಳೆಯ್ಯ ಜೂರಿಯ ಕೆಲಸದಿಂದ ಪಾರಾಗಬೇಕೆಂದರೆ, ಒಬ್ಬ ವಕೀಲನನ್ನು ಗೊತ್ತುಮಾಡದೆ ನನಗೆ ಬೇರೆ ವಿಧಿಯಿಲ್ಲ.! ಎಂದು ವಿಚಾರದಲ್ಲಿ ಮುಳುಗಿ ಕುಳಿತನು. ಕೂತ ಕೂತ ಹಾಗೆ, ಆ ಕರೇಗುಡ್ಡಿಯ ಒಡ್ಡುಗಣ್ಣಿನ ಆ ಹೆಣ್ಣು ಸೆರೆಯಾಳು, ಆಕೆ ಕೋರ್ಟಿನಲ್ಲಿ ನಿಂತದ್ದು, ನ್ಯಾಯಾಧೀಶನು ಶಿಕ್ಷೆ ಹೇಳಿದೊಡನೆ, ಆಕೆ ಕೆಟ್ಟದನಿಯಿಂದ ಚೀರಿ ಅಳಹತ್ತಿದ್ದು ಇದೆಲ್ಲ ಚಿತ್ರವು ಕೊರೆದ ಹಾಗೆ ಅವನ ಕಣ್ಣಿಗೆ ಕಟ್ಟಿತು. ಕಣ್ಣು ಹೊರಳಿಸಿ, ಕೈಯೊಳಗೆ ಹೊಗೆಯುವ ಸಿಗಾರೇಟನ್ನು ಮೆಲ್ಲಗೆ ನೆಲಕ್ಕೆ ಒತ್ತಿ ಆರಿಸಿ, ಬೀಸಾಕಿ, ಮತ್ತೊಂದನ್ನು ಹೊತ್ತಿಸಿ, ಬಾಯಲ್ಲಿಟ್ಟು ಹೊಗೆಬಿಡುತ್ತ ಹೆಜ್ಜೆಹಾಕ ಹತ್ತಿದನು. ಮನಸಿನಲ್ಲಿ, ಹಿಂದೆನಡೆದ ಘಟನಾವಳಿಗಳು ಒಂದರ ಹಿಂದೊಂದು ಸಿನೆಮಾದೊಳಗಿನ ಚಿತ್ರಗಳಂತೆ ಹಾಯ್ದು ಮರೆಯಾಗಹತ್ತಿ

ಧವು. ಅವನು ಅದರಲ್ಲಿಯೇ ದಂಗಾದನು. ಮುಂದೆ ಮುಂದೆ ಹಿಂದಿನ ದಿನಗಳ ಅಂದರೆ ತಾನು ಮೊದಲು ಸಾರೆ ತನ್ನ ಸೋದರತ್ತೆಯ ಮನೆಯಲ್ಲಿದ್ದ ಕಾಲ, ಆಗಿನ ಹರೆಯದ ಹೊಸತನ; ತಾನು ಅರಳುವ ಮೊಗ್ಗೆಯಂತಿರುವ ಕಟೋಷ ಳನ್ನು ಕಂಡದ್ದು, ಆ ಪ್ರೇಮ, ಆ ಆಟಮಾಡಿದ್ದು, ಮುಂದೆ, ಆಕೆಯನ್ನು ಮದುವೆಯಾಗುವ ಹುಚ್ಚುಹಿಡಿದದ್ದು, ತನ್ನ ಪಾಶವೀಪಾಸನೆಯನ್ನು ಬಲುಮೆಯಿಂದ ಪೂರೈಸಿ ಕೊಂಡದ್ದು, ಆ ಮೇಲೆ ತನಗಾದ ಪಶ್ಚಾತ್ತಾಪ, ನಿರಾಸೆ, ಇವುಗಳು ನೆನಪಿಗೆ ಬಂದವು. ಹಿಂದಿನ-ಇಂದಿನ ದಿನಗಳಲ್ಲಿ-ಸ್ಥಿತಿಯಲ್ಲಿ ರುವ ವಿಶಾಲವಾದ ಅಂತರವು ಮನದಟ್ಟಾಯಿತು. ಆಗಿನ ಸ್ವಾತಂತ್ರ್ಯ, ಈಗಿನ ಪಾರತಂತ್ರ್ಯದ ಪರಿಸ್ಥಿತಿಗಳನ್ನು ನೆನೆದುಕೊಂಡು ಅವನ ಮನಸು ಕಸವಿಸಿಗೊಂಡಿತು. ' ಒಂದಾನೊಂದು ಕಾಲಕ್ಕೆ ನನ್ನ ಸರಳತನ, ಸತ್ಯಾಚರನೆ ಗಳ ಬಗ್ಗೆ ನನಗೆಷ್ಟು ಅಭಿಮಾನವೆನಿಸುತ್ತಿತ್ತು, ಮತ್ತು ಅವುಗಳಿಂದ ಎಳ್ಳಷ್ಟು ಅಲ್ಲಾಡುವದೆಂದರೂ ನನಗೆಷ್ಟು ವ್ಯಸನವಾಗುತ್ತಿತ್ತು. ಈ ಹೊತ್ತು ನನ್ನ ಸ್ಥಿತಿ ಹೇಗಿರುವದು? ಸುಳ್ಳು ಮೋಸಗಳಿಗೆ ಬಲಿಬಿದ್ದು ಹೇಗೆ ಕೊನೆ ಮೊದಲಿಲ್ಲದ ಚಿಂತೆಯ ಕಂದರಗಳ ತೊಳಲುತ್ತಿರುವೆನಲ್ಲ. ನಾನೆಂದರೆ ಇಂದು ಭೀಕರ ಸುಳ್ಳುಗಾರಿಕೆಯ ಮೊಟ್ಟೆ; ಹೀಗಿದ್ದು ಸತ್ಯವಂತನೆಂದು ನಟಿಸುತ್ತಿದೆನಲ್ಲ! ನಾನಿನ್ನು ಈ ಆಳವಾದ ಕಂದರಗಳೊಳಗಿಂದ ಪಾರಾಗುವದೆಂತು? ನನಗಂತೂ ದಾರೀ ತೋಚದು. ಟೊಂಕಮಟ ಕೆಸರಿನಲ್ಲಿ ಸಿಕ್ಕು ಪೇಚಾಡುತಿರುವೆ. ಏನಿದೀ ನನ್ನ ದುರವಸ್ಥೆ!" ಹೀಗೆಂದು ಪರಿತಾಪ ಪಡುತ್ತಿದ್ದನು. ಅವನ ಮನಸೆಂದರೆ, ಇಂದು ಉರಿವ ಒಲೆಯಮೇಲೆ ಕುದಿಯಲಿಟ್ಟ ನೀರಿನಂತೆ ಸಳಮಳಿಸುತಿತ್ತು. ಕಟೋಷಳು, ಆಕೆಯ ನಿರ್ಮಲ ಪ್ರೇಮ, ಆಕೆಯ ಸರಲತನ, ತಾನು ಆಕೆಯನ್ನು ಮೋಸಗೊಳಿಸಿದ್ದು ಇವೆಲ್ಲ ನೆನಪಾದವೆಂದರೆ ಉರಿಯ ಮೇಲೆ ಎಣ್ಣೆ ಸುರುವಿದಂತೆ ಅವನ ಮನಸು ಭುಗಿಲೆಳುವದು. " ಇಲ್ಲ. ಒಮ್ಮೆ ಪ್ರೀತಿಸಿದವಳನ್ನು ನಾನೆಂದೂ ಬಿಡೆನು, ಅಥವಾ, ಆಕೆಗಾದ ದೇಹದಂಡನೆಯ ಶಿಕ್ಷೆಯನ್ನು ನಾನು ದುಡ್ಡು ಕೊಟ್ಟು ಬಿಡಿಸಲಾರೆ; ಅಂದು ಆ ಹುಸಿಯೊಳಗೆ ಬರುವಾಗ ಆಕೆಯು ಜೇಬಿನಲ್ಲಿ ಬಲುನ್ಮೆಯಿಂದ ತಾನಿಟ್ಟ

ಹಾಳುದುಡ್ಡು ! ಆ ದುಡ್ಡಿಗೆ ಬೆಂಕಿಹತ್ತಲಿ! ಅದೇ ಹಾಳು ಮಾಡಿತು ನನ್ನ ಸರ್ವಸ್ವವನ್ನು. ಅಹಹ! ಕಟೂಷಾ! ಬಡ ಕಟೂಷಾ! ಪ್ರಿಯ ಕಟೂಷಾ! ನಿನ್ನ ಜೀವವನ್ನು ಕೊನೆ ತನಕ ಉರಿಯ ಹಚ್ಚಿದವನು ನಾನು! ಮಹಾ ಪಾಪಿ! ಅಧಮ! ಪಟಿಂಗ! ಪೋಲಿ! ಈ ನನ್ನ ಹೊಲಸು ಬಾಳ್ವೆ ನನಗೆ ಬೇಡಾಗಿದೆ. ಮಿಸಿಯಳೊಡನೆ ನನ್ನ ನಡತೆ ಅದೆಷ್ಟು ಕೀಳು ! ಎಷ್ಟು ಹೇಸಿ ! ದುಡ್ಡಿನ ಮಾತೆತ್ತಿದೊಡನೆ ನಾನು ಗುಡ್ಡದಂಥ ಮಾತಾಡುತ್ತಿದ್ದವನು. ನನ್ನ ಸಿರಿವಂತಿಕೆ ತೋರಿಸಿ, ಪರರನ್ನು ಕೆಡಿಸಲು ಹಾತೊರೆದೆ! ನನ್ನನ್ನು ಯಾರು ಏನೇ ತಿಳಿಯಲಿ! ನನ್ನ ನಾನು ಮೋಸಗೊಳಿಸಲಾರೆ! ಮಂದಿಯನ್ನು ಮೋಸಗೊಳಿಸ ಬಹುದು! ನನ್ನಷ್ಟು ನೀಚನು ನಾನೇ! ಹೀಗೆ ಪಶ್ಚಾತ್ತಾಪ ದಿಂದಲೂ, ಅಂತರ್ದೃಷ್ಟಿಯಿಂದಲೂ ತನ್ನ ತಾ ಪರೀಕ್ಷೆ ಮಾಡಿಕೊಳ್ಳುವಾಗ, ಅವನ ಮನಸು ಕಾಯ್ದ ಹಂಚಿನ ಮೇಲಿನ ಕಾಳಿನಂತೆ, ಚಟಪಟ ಎಂದು ಹುರಿದಂತಾದರೂ, ಅದರಲ್ಲಿಯೇ ಅವನಿಗೊಂದು ಬಗೆಯ ಸುಖವೂ ಆನಂದವೂ ಅನಿಸಿತು.

ಎಂದಾದರೂ ಡಿಮಿಟ್ರಿಗೆ ತನ್ನ ತಪ್ಪು ತಾನು ತಿಳಿದುಕೊಂಡು, ಚಿತ್ತ ಶುದ್ಧ ಗೊಳಿಸುವದೆಂದರೆ, ಬಹು ಪ್ರೀತಿಯ ವಿಷಯ ಚಿಕ್ಕವನಿರುವಾಗಲೇ ಅವನಿಗಿದರ ಸವಿ ಇತ್ತು; ಆದರೆ, ಅದು ಕೈಯಲ್ಲಿ ನಾಲ್ಕುದುಡ್ಡು ಆಡ ಹತ್ತಿ, ಕಂಡವರ ಸಹವಾಸದಿಂದ ಬಹುಮಟ್ಟಿಗೆ ಮಾಯವಾಗಿತ್ತು; ಆದರೂ, ಒಮ್ಮೊಮ್ಮೆಯಾದರೂ ಅದು, ಮಳೆಗಾಲದೊಳಗಿನ ಸೂರ್ಯನಂತೆ ಡಿಮಿಟ್ರಿಯ ಮನಸಿನಲ್ಲಿ ಜಗ್ಗನೆ ಮಿಂಚದೆ ಇರುತಿರಲಿಲ್ಲ. ಅದಿಂದು, ಇಷ್ಟು ಪಶ್ಚಾತ್ತಾಪ ಪಟ್ಟನಂತರ ಅವನ ಮನಸಿನಲ್ಲಿ ಅತ್ಯಂತ ಪ್ರಖರವಾಗಿ ಮಿಂಚಿತು. ತನ್ನ ಹೃದಯದಲ್ಲಿ ಅಡಗಿ, ತನ್ನನ್ನು ಹಗಲಿರಳು ವಂಚಿಸುತ್ತಿ ರುವ ತಪ್ಪುತಡಿಗಳೆಲ್ಲ ಅವನ ಕಣ್ಣುಗಳಲ್ಲಿ ಚುಚ್ಚಿದವು; ಎದೆಯಲ್ಲಿ ನೋವು ಉಂಟಾಯಿತು. ಇವುಗಳನ್ನು ಹೀಗೇ ಬಚ್ಚಿಟ್ಟುಕೊಂಡರೆ, ನನ್ನ ಜನ್ಮವೇ ಹಾಳಾಗುವದೆಂದು ಒಗೆದು, ಡಿಮಿಟ್ರಿಯು ಈ ಮೇಲ್ಮೇಲಿನ ಹಾಳು ಜೀವನವನ್ನು ಬಿಟ್ಟು, ಶುದ್ಧ ಸಾತ್ವಿಕ ಸತ್ಯಾಚರಣೆಯನ್ನು ಕೈಕೊಳ್ಳಬೇಕೆಂದು

ಪ್ರತಿಜ್ಞೆ ಮಾಡಿ, ಹೊಸ ಜೀವನದ ಕಾರ್ಯಕ್ರಮವನ್ನು ನಿರ್ಧರಿಸಿಕೊಂಡನು; ಮತ್ತು ಅದನ್ನೆಲ್ಲ ತನ್ನ ದಿನ ಚರಿಯಲ್ಲಿ ಬರೆದಿಡಲಾರಂಭಿಸಿದ.

ಎಂಥ ವಿಪತ್ತುಗಳು, ಎಷ್ಟು ಆಸೆ—ಲೋಭಗಳು ಬಂದು ಮುತ್ತಿದರೂ ಇನ್ನೀ ಆಯುಷ್ಯವನ್ನು ಪಲ್ಲಟಿಸಬಾರದೆಂದು ಇಂದು ಡಿಮಿಟ್ರಿಯ ನಿರ್ಧಾರ; ಆದರೆ, ಮನುಷ್ಯನನ್ನು ಕಂಡ ಕಂಡ ಬಲೆಗಳಲ್ಲಿ ಹಿಡಿದು ಸಿಲುಕಿಸಬೇಕೆಂದು ಹೊಂಚು ಹಾಕಿಕೊಂಡು ಕುಳಿತಿರುವ ವಿಷಯುಗಳ ಮುಂದೆ ಅವನ ಆಟ ನಡೆಯುವದು ಬಹು ಕಷ್ಟ. ಸಾವಿರಾರು ಸಲ ಬಿದ್ದು ಪರಿತಾಪ ಪಟ್ಟಾಗ ಒಮ್ಮೆ ಬುದ್ಧಿ ಬರುವದು. ಆ ಒಳಗಣ್ಣು ತೆರೆಯುವದು. ಮನುಷ್ಯನು ಎಷ್ಟು ಒದ್ದಾಡಿದರೂ, ಬಾಯಿಂದ ಧರ್ಮ ಧರ್ಮವೆಂದು ಕುಣಿದರೂ, ‘ ಅಂತರಂಗದ ಕದವು ತೆರೆಯುವದು ’ ಕಷ್ಟಸಾಧ್ಯ; ಅದಕ್ಕೆ ಜನ್ಮ ಜನ್ಮಾಂತರದ ಪುಣ್ಯ ಬೇಕು. ಡಿಮಿಟ್ರಿಯ ಹಲವು ಬಾರಿ ಪ್ರಯತ್ನಪಟ್ಟು, ಮತ್ತೆ ಕೆಟ್ಟು, ಅಯ್ಯೋ ಎಂದು, ಇಂದು ಈ ಸ್ಥಿತಿಗೆ ಬಂದಿದ್ದ. ತನ್ನಿಂದ ಸತ್ಯಾಚರಣೆಯ ಅಸಿಧಾರಾವ್ರತ ವನ್ನು ಕೊನೆಗಾಣಿಸುವದು ಆದೀತೇ ಎಂದು ಡಿಮಿಟ್ರಿಗೆಯ ಆಗಾಗ್ಗೆ ಸಂಶಯ ಗೊಳ್ಳುವನು; ಎಲ್ಲರೂ ಇದ್ದಂತೆ ನಾನೂ ಇದ್ದರಾಯಿತು. ಸತ್ಯಾಚರಣೆ, ಬಿತ್ರಾ‍್ಯಚರಣೆಗಳನ್ನು ತಲೆಗೆ ಕಟ್ಟಿಕೊಂಡು ಸುಮ್ಮನೆ ಗೋಳು ಹುಯ್ದುಕೊಳ್ಳುವದೇ ಕೆಂದು ಅವನ ಮನಸು ಒಮ್ಮೊಮ್ಮೆ ಬಲವಾಗಿ ವ್ರತಭಂಗಮಾಡಲು ಸೊಂಟ ಕಟ್ಟುವದು. ಅದನ್ನವನು ಅಲ್ಲಗಳೆದು ‘ ಛಿ. ’ ಅನ್ನುವನು. ಅವನ ಮನಸಿ ನಲ್ಲೀಗ ಜಗದ ಬಗ್ಗೆ ಹೇಯ ಬುದ್ಧಿ ಹುಟ್ಟಿ ಅದು ಬೇರು ಬಿಟ್ಟುಕೊಂಡಿತು. ಅವನ ಮನಸಿನಲ್ಲಿಯ ಕಗ್ಗತ್ತಲೆಯಡಗಿ ಜ್ಯೋತಿ ಬೆಳಗಿತು. ಅದರ ಸತ್ಯ ಸ್ವತಂತ್ರಸುಖ, ಅದರ ಶಾಶ್ವತ, ಪ್ರತಾಪಶಾಲಿಯಾದ ತೇಜ ಅವನಲ್ಲಿ ಅಖಂಡ ವಾಗಿ ಮೂಡಿ, ಅದರ ಸವಿಯನ್ನು ಸವಿಯ ಹತ್ತಿದನು. ತಾನು ನಿಂತಿರುವ ಸ್ಥಳಕ್ಕೂ, ತಾನು ಮುಟ್ಟಬೇಕೆಂಬುವ ಸ್ಥಳಕ್ಕೂ ಎಷ್ಟು ದೂರಿನ ಅಂತರ! ಅಷ್ಟು ದಾರಿಯನ್ನು ತಾನೆಂತು ದಾಟೇನು ಎಂಬ ಅನುಮಾನವು ಅವನಿಗೀಗ ಬಾಧಿಸಲಿಲ್ಲ. ಒಂದಾನೊಂದು ಕಾಲಕ್ಕೆ ವಿಷಯದ ಕೊಳಚಿಯಲ್ಲಿ ಹೊರಳಾಡು ತ್ತಿದ್ದ ಡಿಮಿಟ್ರಿಯು ಈಗ ಅಧ್ಯಾತ್ಮ-ಜೀವಿಯಾದ. ಅವನ ಜೀವನವು ದಿವ್ಯ

ವಾಯಿತು. ತನ್ನನ್ನು ಕಟ್ಟಿಹಾಕಿದ್ದ ಸುಳ್ಳು—ಹುಚ್ಚು ಅಭಿಮಾನದ ಕಟ್ಟು ಸಡಲಿತು; ಅವನು ಅದನ್ನು ಬಲತ್ಕಾರದಿಂದ ಕಡಿದನು. ಮಂದಿಯ ಮುಂದೆ ನನ್ನ ತಪ್ಪು ಹೇಗೆ ಹೇಳಲಿ! ಎಂಬ ಮಂಕು ಮರುಳತನ ತಪ್ಪಿತು. ಪ್ರಾಣಕ್ಕೆ ಬಂದರೂ, ಮಿಥ್ಯವಾಡಿ ನಾಲಿಗೆ ಮೈಲಿಗೆ ಗೊಳಿಸಲಾರೆ. ಸತ್ಯವನ್ನೇ ನುಡಿವೆ. ಈಗಿಂದೀಗ ಹೋಗಿ ಮಿಸಿಯಳನ್ನು ಕಂಡು, ಆಕೆಯ ಮುಂದೆ ನಾನು ಮಾಡಿದ ಕೆಟ್ಟ ಕೃತಿಗಳನ್ನೆಲ್ಲ ಬಿಚ್ಚಿ ಹೇಳುವೆ. 'ನಾನು ಭ್ರಷ್ಟ; ಪಟಿಂಗ ನಿನ್ನನು ಮದುವೆಯಾಗುವದಿಲ್ಲ. ನೀನು ನನ್ನ ಆಸೆಬಿಡು.' ಎಂದುಸುರುವೆ. ಕಟೂಷಳ ಬಳಿಸಾರಿ 'ನಾನು ಮೋಸಗಾರ. ನಿನ್ನ ಜನ್ಮವನ್ನೇ ಹಾಳು ಗೆಡವಿರುವೆ; ಆದರೆ, ಇನ್ನು ಮುಂದೆ ಅದರ ಪಶ್ಚಾತ್ತಾಪವೆಂದು ಆಕೆಗೆ ಸುಖವಾಗುವದನ್ನೆಲ್ಲ ಕಾಯವಾಚಾ ಮನಸಿಂದನಾನು ಮಾಡುವೆ. ನನ್ನನ್ನು ಕ್ಷಮಿಸಲು ಆಕೆಯನ್ನು ಸೆರಗೊಡ್ಡಿಬೇಡುವೆ' ಎಂದನು; ಮತ್ತೆ ಕೊಂಚ ನಿಂತು ಅತ್ತಿತ್ತ ನೋಡಿದಂತೆ ಮಾಡಿ, 'ಹೌದು. ಅದಕ್ಕೇಕೆ ನಾಚಿಕೆ. ನಾನು ಮಾಡಿದ ತಪ್ಪಿಗಾಗಿ ಎಳೆ ಮಕ್ಕಳಂತೆ ನಾನಾಕೆಯ ಕ್ಷಮೆಬೇಡುವೆ; ಅಗತ್ಯವೆನಿಸಿದರೆ, ಆಕೆಯ ಮದುವೆ ಯಾಗುವೆ.' ಎಂದು ದೇವರ ಸಾಕ್ಷಿ ಯಾಗಿ ಕೈಮುಗಿದು 'ದೇವಾ? ನನಗೆ ನೆರವಾಗು. ಒಳ್ಳೇ ದಾರಿಗೆ ಹಚ್ಚು. ನನ್ನಲ್ಲಿ ಸೇರಿ, ನನ್ನ ಅಂತಃಕರಣವನ್ನು ಶುದ್ಧ ಗೊಳಿಸು.' ಎಂದು ಅನನ್ಯ ಭಾವದಿಂದ ಬೇಡಿಕೊಂಡ. ದೇವರಾದರೂ ಈ ಮೊದಲೇ ಅವನ ಅಂತರಂಗದಲ್ಲಿ ಸೇರಿ ಬೆಳಕು ಕೆಡವಿದನು. ಅದರಿಂದ ಅವನು ತನ್ನಜೀವನದಲ್ಲಿ ಹೊಸ ಚೈತನ್ಯ, ಎಂದೂ ಅನುಭವಿಸಿದ ಆನಂದ, ಭಕ್ತಿಯ ಉದ್ರೇಕ ಇವುಗಳನ್ನು ಎಡೆಬಿಡದೆ ಅನುಭವಿಸಿದನು. 'ಇಷ್ಟು ದಿನಗಳವರೆಗೆ ಎಲ್ಲಿಯೋ ಇರುವನೆಂಬ ದೇವರು ನನ್ನಲ್ಲಿಯೇ ಇರುವನಲ್ಲ; ಇನ್ನೇಕೆ ನಿರಾಸೆ! ಇನ್ನೇಕೆ ಬಳಲಿಕೆ!' ಎಂದು ಅನ್ನುವಾಗ ಅವನ ಕಣ್ಣುಗಳಿಂದ ಆನಂದ ಬಾಷ್ಪಗಳು ಹರಿದವು. ಜೀವದಿಂದಿರುವ ವರೆಗೆ ಇನ್ನು ಸತ್ಕರ್ಮಗಳನ್ನೇ ಮಾಡುವೆನೆಂದು ಉದ್ಗರಿಸಿ ಪ್ರತಿಜ್ಞೆಮಾಡಿದನು.

ತಾನು ಕುಳಿತಿರುವ ತಾಯಿಯ ಕೋಣೆಯಲ್ಲೀಗ ಅವನಿಗೆ ಸೆಕೆ ಅನಿಸಿದ್ದರಿಂದ, ಕಿಟಕಿಯನ್ನು ತೆರೆದನು. ಕಣ್ಮುಂದೆ ಸುಂದರವಾದ ತೋಟ

ಬೆಳದಿಂಗಳು ಏರಿದೆ; ಅದರ ತಿಳಿಬೆಳಕಿನಲ್ಲಿ ರಾತ್ರಿಯು ಹೊಸದೂ ನಿತಾಂತ ರಮ್ಯವೂ ಶಾಂತವೂ ಕಾಣುತ್ತಿದೆ. ಯಾರೋ ಬಡಬಡಿಸಿದಂತಾಗಿ ಮತ್ತೆ ಸ್ತಬ್ಧವಾಯಿತು. ಕಿಟಕಿಯ ಎದುರಿನಲ್ಲಿಯೇ ಇದ್ದ ಉದ್ದವಾದ ಒಂದು ಗಿಡದ ನೆರಳು ಝಳ ಝಳ ಗುಡಿಸಿ ಸಾರಿಸಿದ ನೆಲದ ಮೇಲೆ ಬಿದ್ದು, ಅದರ ಎಲೆಗಳು, ತೊಡಕುಬಡಕಾದ ಅಡ್ಡತಿಡ್ಡ ಚಿಕ್ಕ ದೊಡ್ಡ ರೆಂಬೆಗಳು ಸಹ ಚಿತ್ರ ಕೊರೆದಂತೆ ಬೆಳದಿಂಗಳಲ್ಲಿ ಮೂಡಿದ್ದವು. ಎಡಗಡೆ, ಬೆಳದಿಂಗಳ ತಿಳಿವೆಳಗಿನಲ್ಲಿ ಎದ್ದಿದಂತೆ ಕಾಣಿಸುವ ಗುಡಿಸಲ ಚಪ್ಪರ. ಈಚೆಕಡೆ ಗಿಡಗಳ ಕೊಂಬೆಗಳ ದಟ್ಟಾದ ನೆರಳು. ಕ್ಷಣಕ್ಷಣಕ್ಕೆ ಜೀವ ತುಂಬಿಸುವಂಥ ಸೂಸ ಗಾಳಿಯನ್ನು ಉಸುರುವ ಗಿಡಮರ, ಎಲೆಬಳ್ಳಿಗಳ ಶುದ್ಧ ಹವೆಯನ್ನು ಉಸುರಾಡಿಸಿ ಡಿಮಿಟ್ರಿಯ ಮೈಯಲ್ಲಿ ಹೊಸ ವಿಲಕ್ಷಣವಾದ ಆನಂದವು ಸಂಚರಿಸಿದಂತಾಯಿತು. ಆ ಗಾಳಿಯಿಂದ ಮನಸಿಗೆ ಚುಕ್ಕು ಒಡಿದಷ್ಟು ಸಂತೋಷ. ಆಗ ಅವನು 'ಅಹಹ! ಏನಿದು ಆನಂದ? ಎಷ್ಟಿದು ಆನಂದ? ದೇವಾ? ನಿನ್ನ ಮಹಿಮೆಯನ್ನೆಷ್ಟೆಂದು ಬಣ್ಣಿಸಲಿ! ಎಂದು ನುಡಿದು ತೆಪ್ಪಗಾದನು.



# ೭ ಬಿಡುಗಡೆಯ ಪ್ರಯತ್ನ.






ಯಂಕಾಲಕ್ಕೆ ಕಟೂಷಳನ್ನು ಸೆರೆಮನೆಯ ಸಣ್ಣ ಕೋಣೆಗೆ ಒಯ್ದರು. ಹತ್ತು ಮೈಲು ದಾರಿ ನಡೆದು ದಣಿದಿದ್ದಳು. ಎಂದೂ ನಡಿದವಳಲ್ಲ. ಕಾಲು ಹುಣ್ಣು ಹುಣ್ಣಾಗಿದ್ದವು. ಒಮ್ಮಿಂದೊಮ್ಮೆ ತನಗೆ ಇಷ್ಟು ಘೋರ ಶಿಕ್ಷೆಯಾದುದಕ್ಕಾಗಿ ಆಕೆಯ ಮನಸು ಬಹು ಎತ್ತರದ ಮೇಲಿಂದ ಬಿದ್ದಂತೆ ಅತಿಶಯ ನೆಗ್ಗಿದಂತಾಗಿತ್ತು. ಹಸಿವೆಯಂತೂ ಕರುಳನ್ನೇ ಹರಿದು ತಿನ್ನುತಿತ್ತು. ನಿಜವಾಗಿ ನೋಡಿದರೆ, ಆಕೆಗೆ ಮಧ್ಯಾಹ್ನವೇ ಹಸಿವೆಯಾಗಿತ್ತು. ಕೋರ್ಟಿನ ನಡುವಿನ ಬಿಡುವಿನಲ್ಲಿ ಕಾವಲುಗಾರರಾದ ಸೀಪಾಯಿಗಳು ರೋಟು, ಮತ್ತು ಕುದಿಸಿದ ತತ್ತಿಗಳನ್ನು ತಿನ್ನುವಾಗಲೇ ಆಕೆಯ ಬಾಯಲ್ಲಿ ನೀರು ಬಂದಿದ್ದವು; ಆದರೆ, ಅವರನ್ನು ಕೇಳುವದು ಹೀನತನವೆಂದು ಬಾಯಿ ಕಟ್ಟಿದ್ದಳು; ವ್ಯಾಜ್ಯ ತೀರಿ ನ್ಯಾಯಾಧೀಶನು ತೀರ್ಪು ಹೇಳಿದ ಮೇಲಂತೂ ಕೇಳುವದೇನು ? ಆಕೆಗೆ ಮುಗಿಲು ಹರಿದು ಮೈಮೇಲೆ ಬಿದ್ದಂತೆ ಆಯಿತು. ಹೌಹಾರಿತು. ತಾನೊಬ್ಬಳು ಅಪರಾಧಿ. ಸೆರೆಯಾಳು. ತನ್ನನ್ನು ಇನ್ನು ಸೈಬಿರಿಯಾಕ್ಕೆ ಒಯ್ಯುವರು ಎಂಬೀ ವಿಚಾರವೇ ಆಕೆಗೆ ನಿಜವೆನಿಸಲಿಲ್ಲ; ಆದರೆ, ನ್ಯಾಯಾಧೀಶನ, ಜ್ಯೂರಿಗಳ ಶಾಂತ ಉದ್ಯೋಗತತ್ಪರ ಮುಖಗಳನ್ನು ನೋಡಿ, ಅಲ್ಲಿಯ ಸ್ಥಿತಿಗಳನ್ನು ಮನದಂದು, ತನಗಾದ ದಂಡನೆಯು ನಿಜವೆಂದು ಬಗೆದಾಗ ಆಕೆಯ ಎದೆಯೊಡೆದು ನೀರಾಗಿ, ಕಣ್ಣುಗಳಿಂದ ಗಳಗಳನೆ ಕೋಡಿಟ್ಟು ಹರಿಯಿತು. ದಿಕ್ಕು ತೋಚದೆ ಆದದ್ದಾಗಲಿ ಎಂದು ದಿಗಿಲು ಬಡಿದು ತನ್ನ ಅಂಗಿಯ ತೋಳುಗಳಲ್ಲಿ ಕೈಮುದುಡಿಕೊಂಡು ಕೆಳಗೆ ಮುಖ ಜೋಲು ಬಿಟ್ಟು, ನೆಲವನ್ನೇ ಶೂನ್ಯದೃಷ್ಟಿಯಿಂದ ನೋಡುತ್ತ ಸೆರೆಯಾಳುಗಳ ಕೋಣೆಯಲ್ಲಿ ಕುಳಿತಿದ್ದಳು.

ಒಬ್ಬ ಆಳು ಹೊರಗಿಂದ ಬಂದು ' ಕಟೂಷಾ ಅಂದರೆ ನೀವೇ ಏನು " ಅಂದನು.

' ಇಗೊಳ್ಳಿ! ಒಬ್ಬ ಹೆಂಗಸು ನಿಮಗೆ ಈ ರೂಪಾಯಿ ಕೊಟ್ಟಿದ್ದಾಳೆ. " ಹೀಗೆನುತ ಕೈಯಲ್ಲಿ ದುಡ್ಡು ಇಟ್ಟನು.

' ಒಬ್ಬ ಹೆಂಗಸು ಅಂದರೆ ಯಾರು ? ' ಅಂದು ಕಟೂಷಳಿಗೆ ಯೊಚನೆ. ' ನನಗದೆಲ್ಲ ಗೊತ್ತಿಲ್ಲ. ಈ ದುಡ್ಡು ತೆಗೆದು ಕೊಳ್ಳಿರಿ ! " ಎಂದು ಅವನು ಆ ದುಡ್ಡನ್ನು ಕಟೂಷಳು ಹಿಂದಕ್ಕೆ ಇದ್ದ ವೇಶ್ಯಾಗ್ರುಹದ ಒಡತಿಯಾದ ಕ್ಯಾರೋಲಿನ್ ಕಿಟೀವ್ನಾ ಎಂಬವಳು ಕಳಿಸಿದ್ದಳು. ಅತಿಕಷ್ಟದಿಂದಲೂ, ಮನೋತಾಪದಿಂದಲೂ ಕಟೂಷಳ ಮನಸು ತಾಳಗೆಟ್ಟಿದ್ದರಿಂದ ಆಕೆಗೀಗ ತಾನು ಸೇದುತ್ತಿದ್ದ ಸಿಗರೇಟಿನ ನೆನಪಾಯಿತು. ಈಗಿಂದೀಗದೇನಾದರೂ ಸಿಕ್ಕರೆ ಮನಸಿಗೆ ಸ್ವಲ್ಪ ಸೊಗಸು ಅನಿಸಬಹುದೇನೋ ಎಂದು ಕೊಂಡಿದ್ದಳು; ಆದರೆ ದುಡ್ಡಿಲ್ಲದ್ದರಿಂದ ಕೈಕಟ್ಟಾಗಿತು. ಈಗ ಕ್ಯಾರೋಲಿನ್ನಳಿಂದ ದುಡ್ಡು ಬಂದೊಡನೆ, ಆಕೆಯ ಸೇದುವ ಚಪಲ ಬೆಳೆದು ಜೀವ ಚುಟುಚುಟು ಅನ್ನಲಾರಂಭಿಸಿತು. ಒಮ್ಮೆ ಸಿಗರೇಟಿನ ಹೊಗೆ ತಗೊಂಡು ಬಿಟ್ಟರೆ 'ಮನಸಿಗೆ ಎಷ್ಟು ಹಾಯ ವೇನಿಸಬಹುದಲ್ಲಾ ಎಂದು ನೆನೆಯುತ್ತ ಇರುವಷ್ಟರಲ್ಲಿ ಮತ್ತೊಂದು ಕೋಣೆಯಿಂದ ಸಿಗರೇಟಿನ ಹೊಗೆಯ ವಾಸನೆ ಬಂದಿತು; ಅದನ್ನೇ ಹಪಾಪಿಯಿಂದ ಬಲವಾಗಿ ಮೂಸಿ ಹಾ ಅಂದಳು.

ಸಾಯಂಕಾಲ ಐದು ಗಂಟೆ. ಸಿರಸ್ತೆದಾರನು ಇಬ್ಬರು ಸಿಪಾಯಿಗಳೊಡನೆ ಆಕೆಯನ್ನು ಸೆರೆಮನೆಗೆ ಕಳಿಸಲು ಅಪ್ಪಣೆ ಕೊಟ್ಟನು. ಹೊರಕ್ಕೆ ಬಂದ ಬಳಿಕ ಒಬ್ಬ ಸೀಪಾಯಿಯ ಕೈಯಲ್ಲಿ ಕಟೂಷಳು ದುಡ್ಡು ಕೊಟ್ಟು ಸಿಗರೇಟ ತರಲಿಕ್ಕೆ ಹೇಳಿದಳು. ಅವನು ತಂದನು.

ಆದರೆ, ದಾರಿಯಲ್ಲಿ ಸೇದುವಂತಿರಲಿಲ್ಲ. ನಿರುಪಾಯಳಾಗಿ ಸುಮ್ಮನಿದ್ದಳು. ಸೇದಲು ಆತುರಪಡುವ ಮನಸನ್ನು ಬಿಗಿಹಿಡಿದುಕೊಂಡು ಸೆರೆಮನೆಗೆ ಅವರ ಹಿಂದಿಂದೆ ಹೋದಳು. ಸೆರೆಮನೆಯ ಹೆಬ್ಬಾಗಿಲಲ್ಲಿ ನೂರಾರು ಮಂದಿ ಸೆರೆ

ಯಾಳುಗಳು ನಿಂತಿದ್ದರು. ಅವರನ್ನೆಲ್ಲ ಅದೇ ತಾನೇ ರೇಲ್ವೆಯಿಂದ ತಂದಿದ್ದರು. ಅವರಲ್ಲಿ ಕೆಲವರು ಗಡ್ಡದವರು, ಕೆಲವರು ನುಣುಪಾಗಿ ತಲೆ ಬೋಳಿಸಿದರು, ಮುದುಕರು ತದಕರು, ಚಿಕ್ಕವರು, ಹರೆಯದವರು, ಪರದೇಶದವರು, ಹೀಗೆ ನಾನಾವಿಧ. ಅವರ ಕೈಕಾಲುಗಳಲ್ಲಿ ಸಂಕೋಲೆಗಳು ಇದ್ದುದರಿಂದ ಒಂದು ಕ್ಷಣ ವಾದರೂ ಅವುಗಳು ಸಪ್ಪಳಾಗದೆ ಇರುತ್ತಿರಲಿಲ್ಲ. ಅವರು ಕಿಕ್ಕಿರಿದು ನಿಂತಿರುವ ಸ್ಥಳವೆಂಬುದು ಬೆವರಿನ ಹುಳಿವಾಸನೆಯಿಂದ ಇಡಗಿತ್ತು. ಕಟೂಷಳು ಅವರಿರುವ ಸ್ಥಳದಿಂದಲೇ ಹಾಯ್ದು ಹೋಗುವಾಗ ಎಲ್ಲರೂ ಆಕೆಯನ್ನು ಮಿಟಿ ಮಿಟಿ ನೋಡಿದರು; ಕೆಲವರು ಮಾನಗೇಡಿಗಳು ಹೋಗು ಹೋಗುತಾ ಬೇಕೆಂದು ಆಕೆಗೆ ತಮ್ಮ ಮೈತಗಲಿಸಿದರು. ಹೇಳಿಕೇಳಿ ಬದ್ಮಾಷರೇ ಅವರು. ಕೇಳುವದೇನು ? ಕೆಲವರು ಆಕೆಯನ್ನು ಅಪ್ಪಿಕೊಳ್ಳಲಿಕ್ಕೆ ಸಹ ಹಿಂದೆ ಮುಂದೆ ನೋಡಲಿಲ್ಲ.

ಸೀಪಾಯಿಗಳು ಕಟೂಷಳನ್ನು ಅಸಿಸ್ಟಂಟ ಇನ್ಸಪೆಕ್ಟರನಿಗೆ ಒಪ್ಪಿಸಿ ದರು. ಅವನು ಒಬ್ಬ ವಾರ್ಡನನ್ನು ಕೂಗಿ ' ಈಕೆಯನ್ನು ಒಳಗೆ ಒಯ್ಯು ' ಎಂದು ಹೇಳಿದ. ಅವನು ಬಂದವನೇ ಕಟೂಷಳ ಬೆನ್ನಿಗೆ ಹೀಗೆ ಮೆತ್ತಗೆ ಕೈಬಡಿದು, ತನ್ನನ್ನು ಹಿಂಬಾಲಿಸಲು ತಲೆಯಿಂದ ಸನ್ನೆ ಮಾಡಿದ, ಮತ್ತು ಆಕೆಯನ್ನು ಹೆಂಗಸರ ಭಾಗಕ್ಕೆ ಒಯ್ದು, ಅಲ್ಲಿ ಆಕೆಯ ಹತ್ತಿರ ಏನಾದರೂ ಇರುವದೇನೋ ಎಂದು ಎಲ್ಲಾ ನೋಡಿ, ಹುಡುಕಿ, ಕೋಣೆಯಲ್ಲಿ ಆಕೆಯನ್ನು ಹಾಕಿ ಕೀಲಿ ಜಡಿದನು. ಈ ಕೋಣೆಯಲ್ಲಿ ಒಟ್ಟಿಗೆ ಹದಿನೈದು ಹೆಂಗಸರು ಮತ್ತು ಮೂರುಮಕ್ಕಳು ಹೀಗಿದ್ದರು. ಎಲ್ಲರಿಗೂ ಒಂದೊಂದು ಮಂಚಗಳಿದ್ದವು. ಈ ಗುಂಪಿನಲ್ಲಿ ಥಿಯೋಡೋಸಿಯಾ ಎಂಬೊಬ್ಬ ಹೆಣ್ಣುಮಗಳು; ಈಕೆ ಇನ್ನೂ ಚಿಕ್ಕವಳು. ಹಸುಗೂಸಿನಂಥವಳು. ನಿಲುವಿಕೆ, ಮೈಕಟ್ಟು, ಕಣ್ಣು ಮೂಗುಗಳಿಂದ ಬಹು ಮಾಟ ಹೆಂಗಸು. ಗಂಡನಿಗೆ ವಿಷ ಹಾಕಿದ ಬಗ್ಗೆ ಈಕೆಯನ್ನು ಸೆರೆಯಲ್ಲಿಟ್ಟಿದ್ದರು. ಈಕೆಗೂ ಸೈಬೀರಿಯಕ್ಕೆ ಗಡಿಪಾರಿನ ಶಿಕ್ಷೆ ಆಗಿತ್ತು. ಇಂಥ ಸ್ಥಿತಿಯಲ್ಲಿಯೂ ಥಿಯೋಡೋಸಿಯಳು ಬಹು ದಯಾಳು, ಉಲ್ಹಾಸವೃತ್ತಿಯವಳು; ಯಾವಾಗಲೂ ನಗುಮುಖದಿಂದಿರುವಳು. ಈಕೆಯು

ಮಂಚವೂ ಮಾಸ್ಲೋವಳ ಮಂಚದ ಬಳಿಯಲ್ಲಿಯೇ ಇತ್ತು. ಕಟೂಷಳಿಗೂ ಈಕೆಗೂ ಬಹಳ ಮನಸು ಕೂಡಿತಂ. ಕಟೂಷಳಿಗೆ ನಾಲ್ಕು ವರ್ಷ ಗಡಿಪಾರಿನ ಶಿಕ್ಷೆ ವಿಧಿಸಿದಕ್ಕಾಗಿ ಅಲ್ಲಿಯ ಹೆಂಗಸರು ಮರ ಮರ ಅಂದರು. ಕಟೂಷಳನ್ನು ಆ ಸೆರೆಮನೆಯಲ್ಲಿ ಆಗಿನಮಟ್ಟಿಗೆ ತಂದಿಟ್ಟರು.

ಇತ್ತ, ಡಿಮಿಟ್ರಿಯು ತನ್ನ ಮನೆಯಲ್ಲಿ ತನ್ನ ಪಾಪಕ್ಕಾಗಿ ಪಶ್ಚಾತ್ತಾಪ ಪಡುತ್ತಿರುವದನ್ನು ನೀವು ಮರೆತಿರಲಿಕ್ಕಿಲ್ಲ. ಅದೇ ಮಬ್ಬಿನಲ್ಲಿ ಅವನಿಗೆ ನಿದ್ದೆ ಹತ್ತಿತು. ಒಂದೇ ನಿದ್ದೆಗೆ ಬೆಳಗಾಯಿತು. ಕಣ್ತೆರೆದೊಡನೆ ಕಟೂಷಳ ಮೂರ್ತಿ ಕಣ್ಮುಂದೆ ಬಂದು ಆಕೆಯ ವಿಚಾರಣೆಯ ನೆನಪಾಯಿತು. ‘ ಇಲ್ಲ. ಅದೇನೇ ಆಗಲಿ. ನಾನಿನ್ನು ನಿಜವನ್ನು ಹೇಳದೆ ಗತಿಯಿಲ್ಲ.’ ಎಂದು ತನ್ನಲ್ಲಿಯೇ ನುಡಿದನು. ಇಷ್ಟರಲ್ಲಿ ಕಾಗೆ ಕೂಡ್ರಲಿಕ್ಕೆ ಟೊಂಗೆ ಮುರಿಯಲಿಕ್ಕೆ ಗಂಟು ಎಂಬುವಂತೆ, ಕೋರ್ಚಾಜಿನ ರಾಣಿಯಾದ ಮೇರಿಯಿಂದ ಅವನಿಗೆ ಕಾಗದ ಬಂದಿತು. ಅವನೂ ಅದರ ದಾರಿಯನ್ನೇ ಕಾಯುತಲಿದ್ದ; ಆದರೂ ಆ ಪತ್ರ ದಿಂದ ಅವನಿಗೇನೂ ಸುಖವಾಗಲಿಲ್ಲ. ‘ ಅಲ್ಲಿಯ ವರೆಗೆ ಹೋಗಿ ಮಿಸಿಯಳಿಗೆ ತನ್ನ ಮೂರ್ಖತನದ ರಗಳೆಯನ್ನು ಹೇಳುವದರಿಂದೇನು? ಅದು ಅನವಶ್ಯಕ. ಕೇಳಿದರೆ ಮಾತ್ರ ವಸ್ತುಸ್ಥಿತಿಯನ್ನೆಲ್ಲ ಹೇಳೋಣಂತೆ ’ ಅಂದನು.

ಆದರೆ, ಕಟೂಷಳ ವಿಷಯದಲ್ಲಿ ಮಾತ್ರ ಅವನ ಮನಸು ತಿಳಿನೀರಿ ನಂತಿತ್ತು. ಆಕೆಯ ಮುಂದೆ ತನ್ನ ಅಪರಾಧಗಳನ್ನೆಲ್ಲ ತೋಡಿಕೊಂಡು, ತನ್ನನು ಕ್ಷಮಿಸಲು ಕೇಳಿಕೊಳ್ಳಬೇಕೆಂದೂ, ಹೊತ್ತು ಬಂದರೆ, ಮದುವೆ ಕೂಡ ಆಗಿಬಿಡಬೇಕೆಂದೂ ಅಂದುಕೊಂಡ. ಇದರಲ್ಲಿ ತನ್ನ ಆಸ್ತಿ, ಜೀವ, ಮುಂತಾದ್ದು ಹೋದರೂ ಸರಿ, ಇದ್ದರೂ ಸರಿ; ಕೇವಲ ನೀತಿದೃಷ್ಟಿಯಿಂದ ಎಲ್ಲವನ್ನು ನಡಿಸತಕ್ಕದ್ದು. ಆತ್ಮವಂಚನೆಗೆ ಆಸ್ಪದ ಕೊಡತಕ್ಕದ್ದಲ್ಲವೆಂದು ನಿಶ್ಚಯಿಸಿಕೊಂಡ.

ಈ ಹೊತ್ತಿಗೆ ಸರಿಯಾಗಿ, ಡಿಮಿಟ್ರಿಯ ಮನೆಯ ದಾಸಿಯು ಬಂದಳು, ಆಕೆಗೆ ತನ್ನ ಮನಃಸ್ಥಿತಿಯನ್ನು ಹೇಳಿ ಇನ್ನುಮುಂದೆ ತನಗೆ ಈ ಮನೆಯಾ ಗಲಿ, ಆಕೆಯ ಸೇವೆಯಾಗಲಿ ಬೇಡವೆಂದು ಹೇಳಿದನು. ಆಕೆಗೆ ಸೋಜಿಗವೆನಿ

ಸಿತು. ‘ ಹೀಗೆ ಮಾಡಲು ಕಾರಣವೇನು? ಒಂದುವೇಳೆ ಈ ಮನೆಬಿಟ್ಟು ದೂರಕ್ಕೆ ಎಲ್ಲಿಯಾದರೂ ಹೋಗಬೇಕಾಗಿರುವದೆಂದು ತಿಳಿದರೂ, ನಿಮಗೀ ಮನೆಯು ಬೇಕೇಬೇಕಾಗುವದು ’ ಎಂದು ವಿನಯದಿಂದ ಅಂದಳು. ‘ ಇಲ್ಲ. ನಾನೆಲ್ಲಿಯೂ ಹೋಗುವದಿಲ್ಲ? ಅನ್ನುವಾಗ ಅವನ ಮುಖ ಕೆಂಪೇರಿತು. ‘ ಈಕೆಯ ಮುಂದೆಯೂ ನನ್ನ ಹುಳುಕನ್ನು ಹೇಳಿಬಿಡೋಣ. ಮುಚ್ಚು ಮರೆ ಅದೇಕೆ? ’ ಎಂದು “ ಇದು ನೋಡು ನಮ್ಮ ಸೋದರತ್ತೆಯ ಮನೆಯಲ್ಲಿದ್ದ ಕಟೂಷಳನ್ನು ಬಲ್ಲಿಯಷ್ಟೇ ! ’ ಅಂದನು.

‘ ಬಲ್ಲೆ. ಅಷ್ಟೇ ಏಕೆ? ಆಕೆಗೆ ಹೊಲಿಗೆಯನ್ನು ನಾನೇ ಕಲಿಸಿದ್ದು. ಹುಂ, ಆಕೆಯ ವಿಚಾರವೇನು? ’ ಆಕೆ ಅಂದಳು.

‘ ಒಂದೆರಡು ದಿನಗಳಾಚೆ ಆ ಕಟೂಷಳ ಮೇಲೆ ಕೋರ್ಟಿನಲ್ಲಿ ವ್ಯಾಜ್ಯವಿಚಾರಣೆ ನಡೆಯಿತು. ನಾನೂ ಒಬ್ಬ ಜ್ಯೂರಿಯಿದ್ದೆ ’

‘ ಅಯ್ಯೋ ದೇವರೇ ! ಇದೇನು ಪಾಪ ! ಅಂಥದನ್ನು ಆ ಬಡ ಪ್ರಾಣಿ ಮಾಡಿದ್ದೇನು ?

‘ ಯಾವಾತನನ್ನೋ ಕೊಂದಿದ್ದಳಂತೆ !

‘ ಆಂ. ಕೊಂದಳೇ? ಇದೇನು ? ಯಾರನ್ನು ? ಯಾವಾಗ ?

‘ ಮತ್ತೆ ಅದಕ್ಕೆಲ್ಲ ನಾನೇ ಕಾರಣ ? ’

‘ ಇದೇನು ಡಿಮಿಟ್ರಿ ! ಒಂದಕ್ಕಿಂತಲೂ ಒಂದು ಆಶ್ಚರ್ಯದ ಮಾತುಗಳನ್ನೇ ಹೇಳುತ್ತಿರುವಿಯಲ್ಲ? ಎಂದು ಗಾಬರಿಗಣ್ಣಿನಿಂದ ನುಡಿದಳು.

‘ ಹೌದು ಅದರಲ್ಲೇನು? ನಾನೇ ಆಕೆಯ ಇಷ್ಟೊಂದು ಅನರ್ಥಕ್ಕೆ ಕಾರಣನು ! ಅಂತೆಯೇ ನನಗಿಷ್ಟೊಂದು ತಾಪವಾಗಿದೆ ! ’

‘ ಒಳ್ಳೇದು ? ಇಷ್ಟೆಲ್ಲ ನೀನು ನಿಜಹೇಳಿದರೂ, ಈಗ ಆದದ್ದರಲ್ಲಿ ಹೆಚ್ಚುಕಡಿಮೆ ಏನು ಆಗುವಂತಿದೆ ?

'ಏನೂ ಆಗದಿದ್ದರೂ ಇಷ್ಟೇ! ಅದೇನಂದರೆ, ಆಕೆಯ ಅನರ್ಥಕ್ಕೆಲ್ಲ ನಾನೇ ಕಾರಣನಿರುವ ಮೂಲಕ ನನ್ನ ಕೈಲಾದ ಸಹಾಯವನ್ನು ಆಕೆಗೆ ಮಾಡುವದು ನನ್ನ ಕರ್ತವ್ಯ!

'ನೀನನ್ನುವದೆಲ್ಲ ಯೋಗ್ಯವೇ! ಆದರೆ ಆಕೆಯ ಅನರ್ಥಕ್ಕೆಲ್ಲ ನೀನೇ ಕಾರಣನೆಂಬುದೇನೂ ನಿಜವಲ್ಲ; ಯಾಕಂದರೆ, ಇದು ನೋಡು. ಲೋಕದಲ್ಲಿ ಇಂಥ ಗೊಂದಲಗಳು ನಡೆದೇ ಇರುವವು. ನಡೆದರೂ, ಅವನ್ನು ಸುಧಾರಿಸಿ ಕೊಂಡು ಕೆಲವರು ಮರೆಯುವರು. ಆದರೆ, ನೀನು ಆಕೆಯ ತಪ್ಪನ್ನೆಲ್ಲ ನಿನ್ನ ಮೈಮೇಲೆ ಹಾಕಿಕೊಳ್ಳುವದೇನೂ ನನಗೆ ಸರಿಯಾಗಿ ಕಾಣುವದಿಲ್ಲ. ಆಕೆ ದಾರಿಬಿಟ್ಟು ಕೆಟ್ಟ ಚಾಳಿಗೆ ಬಿದ್ದಳೆಂದು ನಾನು ಕೇಳಿದ್ದೆ; ಅಂದಮೇಲೆ ಅದು ನಿನ್ನ ತಪ್ಪು ಹೇಗೆ?'

'ಖಂಡಿತವಾಗಿಯೂ ನನ್ನದು. ಇದೆಲ್ಲ ನನ್ನ ತಪ್ಪೇ! ಅಂತೆಯೇ ನಾನು ಆಕೆಗೆ ಸಹಾಯ ಮಾಡಿ ದಾರಿಗೆ ತರಬೇಕೆನ್ನುವದು!

'ಏನೋ! ಅದು ಬಲು ಕಷ್ಟ!'

ಅದೇನೇ ಆಗಲಿ. ನನ್ನ ಮೈಮೇಲೆ ಬಿದ್ದ ಭಾರವದು. ತಪ್ಪಿದ್ದಲ್ಲ. ಮಾಡಿಯೇ ತೀರಬೇಕು ನಾನು. ಇನ್ನು ನಿನ್ನ ವಿಚಾರ........

'ನನ್ನ ವಿಚಾರದ ಮಾತೇಕೆ ಈಗ? ನಿಮ್ಮ ತಾಯಿ ಇರುವವರೆಗೆ ನನಗೆ ಬೇಕಾದಷ್ಟು ಮಾಡಿದರು. ಈಗಾಗಲೇ ನನ್ನನ್ನು ನಿಮ್ಮ ಅಣ್ಣನ ಮಗಳು ತನ್ನ ಮನೆಯಲ್ಲಿ ಬಂದಿರಲಿಕ್ಕೆ ಕೇಳುತ್ತಿರುವಳು. ನೀನು ಈ ಮನೆಯನ್ನೇ ತೆಗೆದು ಬಿಟ್ಟರೆ, ನಾನು ಅಲ್ಲಿ ಹೋಗುವೆ. ನೀನು ಆ ಯೋಚನೆ ಕಟ್ಟಿಕೋ ಬೇಡ! ಆದರೂ, ನಾನು ಅನ್ನುವದೇನಂದರೆ, ಈ ಮಾತನ್ನು ನೀನು ಇಷ್ಟೊಂದು ಮನಸಿಗೆ ಹಚ್ಚಿಕೊಳ್ಳಬಾರದು. ಇದರ ಮೇಲೆ ನಿನ್ನಿಷ್ಟ!' ಅಂದಳು.

'ಇರಲಿ. ಈಗಂತೂ ಈ ಮನೆಯನ್ನು ನಾನು ಬಾಡಿಗೆ ಕೊಡುವೆ. ಈ ಸಾಮಾನುಗಳನ್ನೆಲ್ಲ ಒಂದೆಡೆಯಲ್ಲಿಡೋಣ! ಸಿಟ್ಟಾಗ ಬೇಡ ಮಾತ್ರ ನನ್ನ ಮೇಲೆ. ಅಂದರಾಯಿತು. ಇಷ್ಟೇ ನನ್ನ ಬಿನ್ನಹ' ಅಂದನು.

ಇಷ್ಟು ತನ್ನ ಮನೆಯ ಹಳೆಯ ತೊತ್ತಿನ ಸಂಗಡ ಮಾತನಾಡಿ, ತಲೆಯ ಮೇಲೆ ಟೊಪ್ಪಿಗೆ, ಕೈಯಲ್ಲಿ ಕೋಲು ಹಿಡಿದುಕೊಂಡು ಕೋರ್ಟಿಗೆ ನಡೆದನು. ನಿನ್ನೆ ಇದೇ ದಾರಿಯಿಂದ ಮನೆಗೆ ಬರುವಾಗ ಅವನ ಮನಸಿನ ಸ್ಥಿತಿ ಇದ್ದಹಾಗೆ ಇಂದಿರಲಿಲ್ಲ. ಈಹೊತ್ತು ಮಿಸಿಯಳ ಎಚ್ಚರವಿಲ್ಲ; ಅಂದ ಮೇಲೆ ಆಕೆಯನ್ನು ಮದುವೆಯಾಗುವ ವಿಚಾರವಂತೂ ದೂರ! ಈಗ ವಿಲಾಸಕ್ಕೆ ಅವಕಾಶವಿಲ್ಲ. ಮೊದಲು ವಕೀಲನನ್ನು ಕಂಡು, ಆಕೆಯನ್ನು ಹೇಗಾದರೂ ಮಾಡಿ ಉಳಿಸುವ ವಿಚಾರ; ತರುವಾಯ ಸೆರೆಮನೆಗೆ-ಆಕೆ ಇದ್ದಲ್ಲಿಗೆ-ಹೋಗಿ ಭೆಟ್ಟಿಯಾಗುವದು. ಎಲ್ಲವನ್ನು ಆಕೆಯ ಮುಂದೆ ತೋಡಿಕೊಳ್ಳುವದು. ಇದನ್ನೇ ಮಾಡಲಿಕ್ಕೆ ಬೇಕು. ಅಂದರೆ, ತನ್ನ ವಿಷಯದಲ್ಲಿ ಕರುಣೆ ತೋರಿಸಿ, ಆಕೆ ತನ್ನನು ಲಗ್ನವಾಗಬಹುದು ಎಂಬ ವಿಚಾರ ಬಂದೊಡನೆ ಅವನ ಮೈಯುಬ್ಬಿ ಪಟಪಟ ಕಂಬನಿಗಳು ಉದುರಿದವು.

ಡಿಮಿಟ್ರಿಯು ಕೋರ್ಟಿಗೆ ಬಂದು, ಶಿಕ್ಷೆಯಾದ ಸೆರೆಯಾಳುಗಳೆಲ್ಲಿರುವರೆಂದು ಕೋರ್ಟಿನ ಸಿರಸದಾರನನ್ನು ವಿಚಾರಿಸಿದನು. 'ಸೆರೆಯಾಳುಗಳು ಬೇರೆ ಬೇರೆ ಸ್ಥಳಗಳಲ್ಲಿಡಲ್ಪಟ್ಟಿರುವರು. ಈಗ ನಿಮಗೆ ಅವರ ಭೆಟ್ಟಿಯಾಗುವಂತಿಲ್ಲ' ಅಂದನು. ಡಿಮಿಟ್ರಿಗೆ ನಿರಾಸೆಯಾಯಿತು. ಆತ ಜ್ಯೂರಿಯವರು ಕುಳ್ಳಿರುವ ಕೋಣೆಗೆ ಹೋದನು; ಎಲ್ಲರು ಕೋರ್ಟಿಗೆ ಹೊರಟಿದ್ದರು. ತಾನೂ ಅವರೊಡನೆ ಸುಮ್ಮನೆ ನಡೆದನು. ಇಂದು ಕೋರ್ಟಿನಲ್ಲಿ ಬೇರೆ ಒಂದು ವ್ಯಾಜ್ಯ. ಅದು ಕನ್ನಗಳವಿನದು. ಇಬ್ಬರು ಹುಡುಗರು ಕೂಡಿ ಒಂದು ಮನೆಗೆ ಕನ್ನ ಹಾಕಿ, ಒಳಗಿರುವ ಪೆಟ್ಟಿಗೆಯ ಕೀಲಿ ಮುರಿದು ಕೆಲ ಸಾಮಾನುಗಳನ್ನು ಕದ್ದುಕೊಂಡೊಯ್ಯುವಾಗ ಪೋಲೀಸರು ಹಿಡಿದಿದ್ದರು. ಕನ್ನ ಹಾಕಿದ ಹುಡುಗರು ತಾವು ಅಪರಾಧಿ ಎಂದು ಕೂಡಲೇ ಒಪ್ಪಿದರು. ಡಿಮಿಟ್ರಿಯು ಇದನ್ನೆಲ್ಲ ಆತ್ಮಪರೀಕ್ಷಣ ದೃಷ್ಟಿಯಿಂದಲೂ ಔದಾಸೀನ್ಯದಿಂದಲೂ ನೋಡುತಲಿದ್ದ. ಅವನ ದೃಷ್ಟಿಯಿಂದ ಇದೆಲ್ಲ ನ್ಯಾಯದ ಸೋಗು.

' ಅಂತೂ ಕೆಲಸಾವೂನುಗಳ ಆಸೆಗಾಗಿ ಕನ್ನ ಹಾಕಿದ ಈ ಹುಡುಗರು ಮೊನ್ನಿನ ಅಪರಾಧಿಗಳಷ್ಟೇ ಭಯಂಕರರೇನು? ಇಂಥವರು ಭಯಂಕರರು! ನ್ಯಾಯ ಹೇಳಲಿಕ್ಕೆ ಕುಳಿತ ನಾವು ಮಾತ್ರ ಸಂಭಾವಿತರೆ? ನನ್ನ ಸ್ಥಿತಿಯನ್ನೇ ನೋಡಿವರೆ, ಇಲ್ಲಿ ನಾನು ಜ್ಯೂರಿ ಎಂದು ದೊಡ್ಡಿಸ್ತನದಿಂದ ಕುಳಿತಿದ್ದರೂ ನಾನೊಬ್ಬ ಲಫಂಗ, ಫಟಿಂಗ, ಮೋಸುಗಾರ.— ಇಂಥ ನನಗೆ ಎಲ್ಲರೂ ಮರ್ಯಾದೆ ಮಾಡುವರೇ ಹೊರ್ತು ಹೀಯಾಳಿಸುವದಿಲ್ಲ. ಈಗ ಕನ್ನ ಕೊರೆದ ಈ ಹುಡುಗರ ಮಾತನ್ನೇ ತೆಗೆದುಕೊಳ್ಳಿ. ಅವರಿಗೆ ಕನ್ನ ಕೊರೆಯುವಂಥ ಬಡತನ ಬಂದುದರಿಂದ ಅವರು ಹಾಗೆ ಮಾಡಿದರು. ಪಾಪ! ಇಂಥ ಎಳೆ ಹುಡುಗರು ತಪ್ಪು ದಾರಿಗೆ ಹೋದ ಮೇಲೆ ಅವರನ್ನು ಶಿಕ್ಷೆಮಾಡಿ ದಂಡಿಸುವದಕ್ಕಿಂತ, ಮೊದಲೇ ಆ ಬಡ ಹುಡುಗರು ಅಂತಹ ದುಷ್ಕರ್ಮಗಳಿಗೆ ಬಲಿಬೀಳದಂತೆ ಪ್ರಯತ್ನಿಸುವದು ಒಳಿತಲ್ಲವೇ ! ಈ ಕಳವು ಮಾಡುವ ಮೊದಲು ಯಾರಾದರೂ ಅವರಿಗೆ ಭೆಟ್ಟಿಯಾಗಿ ಅವರ ಬಡತನದ ಭವಣೆಯನ್ನು ಹೋಗಲಾಡಿಸಿದ್ದರೆ, ಅವರೆಂದೂ ಇಂಥ ಕೆಲಸಕ್ಕೆ ಕೈ ಹಾಕುತಿರಲಿಲ್ಲ. ಒಳ್ಳೇಯವರನ್ನೂ, ಬಡವರನ್ನೂ ಯಾರೂ ಲಕ್ಷಿಸುವದಿಲ್ಲ. ಕುಹಕರು, ಕುಡಕರು, ಸುಳ್ಳಾಣೆಮಾಡುವವರನ್ನು, ಜಗತ್ತು ಮನ್ನಿಸುತ್ತದೆ. ಜಗದೊಳಗೆ ಅಂಥವರದೇ ಬೇಳೆ ಬೇಯುತ್ತದೆ. ಹೀಗಿದೆ ಈ ಹಾಳು ಜಗದ ಹಣೆಬರಹ;! ಚನ್ನಾಗಿದೆ. ಎಷ್ಟು ಭೀಕರವಾದ ಸ್ಥಿತಿ ಇದು? ಇದೆಲ್ಲ ಕಣ್ಣಿಗೆ ಕೈಗನ್ನಡಿಯಂತೆ ಝಳಝಳ ಕಾಣಿಸುತ್ತಿದ್ದರೂ ಯಾರಿಗೂ ಇದರ ಜ್ಞಾನವಾಗುವದಿಲ್ಲವಲ್ಲ!' ಎಂದು ಮ್ಲುಂತಾಗಿ ತನ್ನೊಳಗೆ ತಾನೇ ಧೇನಿಸುತ್ತ ಕುಳಿತಿದ್ದ.

ವ್ಯಾಜ್ಯದಲ್ಲಿ ಡಿಮುಕ್ತ್ರಯು ಸೋತಲಿ; ಅವರೇ ಬೇಕಾದ್ದನ್ನು ಮಾಡಲಿ ನಾನಂತೂ ಈ ಕುಚ್ಯಾಟದೊಳಗೆ ಸೇರಲಾರೆ.' ಎಂದು ಕೋರ್ಟು ಬಿಟ್ಟು ಹೊರಟು ಸೀದಾ ಸೆರೆಮನೆಯ ಮುಖ್ಯ ಅಧಿಕಾರಿಯ ಕಡೆ ನಡೆದನು. ಆಫೀಸಿನಲ್ಲಿ ತುಂಬಾ ಕೆಲಸದಲ್ಲಿದ್ದನವನು. ಡಿಮುಟ್ರಿಯು ಆಫೀಸಿನ ಬಾಗಿಲವರೆಗೆ ಹೋಗಿ ' ಮುಖ್ಯ ಅಧಿಕಾರಿಗಳೆಲ್ಲಿ ? ' ಎಂದು ವಿಚಾರಿಸಿದ.

‘ ನೀವ್ಯಾರು? ಯಾತಕ್ಕೆ ಬಂದದ್ದು? ’ ಎಂದು ಒಬ್ಬ ಅಧಿಕಾರಿಯು ಕೇಳಿದ. ‘ ನಾನೊಬ್ಬ ಜ್ಯೂರಿ. ಸೆರೆಮನೆಯ ಅಧಿಕಾರಿಗಳನ್ನು ಕಂಡು ಕೆಲ ವಿಷಯ ಕೇಳಬೇಕಾಗಿದೆ ’ ಅಂದ. ಅವನನ್ನು ಭೆಟ್ಟಿ ಮಾಡಿಸಿದ. ಡಿಮಿಟ್ರಿಯು ‘ ನನಗೆ ಮಾಸ್ಲೋವಳೆಂಬ ಸೆರೆಯಾಳನ್ನು ಕಾಣಬೇಕಾಗಿದೆ. ತಮ್ಮ ಅಪ್ಪಣೆ ಯಾಗಬೇಕು.’ ಅಂದ.

‘‘ ಮೊನ್ನೆ ಗಡಿಪಾರಿನ ಶಿಕ್ಷೆ ಹೊಂದಿದ ಹೆಂಗಸೇ! ಆಕೆಯನ್ನು ನೀವು ಕಾಣುವ ಕಾರಣವೇನು? ಅದನ್ನು ಸ್ಪಷ್ಟವಾಗಿ ನನಗೆ ಹೇಳದೆ, ನಾನು ನಿಮಗೆ ಅಪ್ಪಣೆ ಕೊಡಲಿಕ್ಕೆ ಬಾರದು. ಆಕೆಯನ್ನು ಈಗಿನ ಮಟ್ಟಿಗೆ ಸೆರೆಯಲ್ಲಿ ಟ್ಟಿರುವೆ. ಇನ್ನೂ ಕೊನೆಯ ತೀರ್ಪು ಆಗಿಲ್ಲ. ” ಅಂದನು.

ಡಿಮಿಟ್ರಿಯು ‘ ದಯವಿಟ್ಟು, ಆಕೆಯನ್ನಷ್ಟು ನನಗೆ ಭೆಟ್ಟಿಮಾಡಿಸಿಂ! ’ ಎಂದು ತತ್ತರಿಸುವ ದನಿಯಿಂದ ಮಾತನಾಡುವಾಗ ಅವನ ಮುಖಕೆಂಪಾ ಯಿತು.

‘ ಅಷ್ಟೇನು ಅವಸರ? ಈಗಿಂದೀಗ ಅಂದರೆ ಆಗುವ ಬಗೆಹೇಗೆ? ’ ಎಂದು ಅಧಿಕಾರಿಯು ಹುಬ್ಬುಗಂಟಿಕ್ಕಿ ನುಡಿದನು.

‘ ಅವಸರಕ್ಕೆ ಇಷ್ಟೇ ಕಾರಣ! ಅದೇನಂದರೆ, ಮಾಸ್ಲೋವಳು ನಿರಪರಾಧಿ. ಆಕೆಗೆ ಅನ್ಯಾಯವಾಗಿ ಶಿಕ್ಷೆಯಾಗಿದೆ. ನಿಜವಾಗಿ ನಾನೇ ದೋಷಿ! ’ ಎಂದು ಫಕ್ಕನೆ ತನ್ನ ಬಾಯಿಂದ ಆಡಬಾರದ ಮಾತು ಹೊರಟದ ಕ್ಕಾಗಿ ಸ್ವಲ್ಪ ನಾಲಿಗೆ ಕಚ್ಚಿಕೊಂಡಂತೆ ಮಾಡಿದ.

ಅಧಿಕಾರಿಯು ‘ ಅದು ಹೇಗೆ? ’ ಅಂದನು.

ಡಿಮಿಟ್ರಿಯು ‘ ನಾನೇ ಆಕೆಯನ್ನು ಮೊದಲು ಕೆಡಿಸಿ ಈಗಿನ ದುರವಸ್ಥೆಗೆ ತಂದೆ. ನಾನು ಆಕೆಯನ್ನು ಕೆಡಿಸದಿದ್ದರೆ, ಆಕೆ ಈ ಸ್ಥಿತಿಗೆ ಬರು ತ್ತಿರಲಿಲ್ಲ ’ ಅಂದನು.

ಅಧಿಕಾರಿಯು ‘ ಒಳ್ಳೆದು. ಈಗ ನೀವು ಆಕೆಯನ್ನು ಕಂಡು ಮಾಡು ವದೇನು? ಆಗಿದೆ ಹೋಗಿದೆ. ಅದನ್ನು ಕೆದರಿಮಾಡುವದೇನು? ’ ಅಂದನು.

ಡಿಮಿಟ್ರಿಯು ‘ ಏನಿಲ್ಲ. ನಾನಾಕೆಯನ್ನು ಕೆಡಿಸಿದ್ದರ ಫಲವೆಂದು ಆಕೆ ಇದ್ದಲ್ಲಿ ಹೋಗಿ, ಮದುವೆಯಾಗಬೇಕೆನ್ನುವೆ ಎಂದು ಮಾತನಾಡುವಾಗ ಅವನ ಅವನ ತುಟಿ-ದನಿಗಳು ನಡುಗಿದವು. ತನ್ನ ವ್ಯಭಿಚಾರಕ್ಕಾಗಿ ಅವನ ಕಣ್ಣುಗಳಿಂದ ದಳದಳ ನೀರು ಉದುರಿದವು.

ಅಧಿಕಾರಿಯು ‘ ಅಹಹ ! ಎಷ್ಟು ನಿರ್ಮಲ ಹೃದಯ ! ನಿಜವಾಗಿಯೂ ಇದೊಂದು ಲೋಕವಿಲಕ್ಷಣ ವ್ಯಾಜ್ಯ ! ’ ಹೀಗಂದು ಡಿಮಿಟ್ರಿಯನ್ನು ನೋಡಿ ‘ ನಿಮ್ಮ ಹೆಸರು ನಾನು ಕೇಳಿರುವೆ. ನಿಮಗಲ್ಲದೆ ಇನ್ನಾರಿಗೆ ಅಪ್ಪಣೆ ಕೊಡುವದು ! ಸ್ವಲ್ಪ ತಾಳಿರಿ. ನಿಮಗೆ ನಾನು ಅಪ್ಪಣೆ ಚೀಟಿ ಬರೆದುಕೊಡುವೆ ಇದೀಗ ! ’ ಎಂದು ಬಹು ಸಹಾನುಭೂತಿಯಿಂದ ಮಾತನಾಡುತಿರುವಾಗಲೇ ಅಲ್ಲಿಬಿದ್ದ ಒಂದು ಕಾಗದದ ತುಂಡು ತೆಗೆದುಕೊಂಡು ಅದರ ಮೇಲೆ ಸರಸರನೆ ಅಪ್ಪಣೆಯನ್ನು ಬರೆದು, ಅದನ್ನು ಮಡಿಚಿ, ಪಾಕೀಟನಲ್ಲಿ ಹಾಕಿ, ಮೇಲೆ ವಿಳಾಸ ಬರೆದು ಒಳ್ಳೇ ಅಚ್ಚರಿಗಣ್ಣಿನಿಂದ ಡಿಮಿಟ್ರಿಯನ್ನು ನೋಡನೋಡುತ್ತ ಕೊಟ್ಟ. ಅದನ್ನು ಕೈಯಲ್ಲಿ ತೆಗೆದುಕೊಂಡು ಡಿಮಿಟ್ರಿಯು ‘ ಇನ್ನೊಂದು ಮಾತನ್ನು ನಾನು ನಿಮಗೆ ಹೇಳುವೆ. ನಾನು ಇನ್ನು ಮುಂದೆ ಮಾತ್ರ ಜ್ಯೂರಿಯಾಗಲಾರೆ. ಯಾಕಂದರೆ, ಈ ನ್ಯಾಯಸ್ಥಾನ, ವಿಚಾರಣೆ ಇವೆಲ್ಲ ನನಗೆ ಹುಡುಗಾಟಿಕೆ-ಅಲ್ಲಲ್ಲ–ಅನೀತಿಯ ಪೇಟೆಗಳು ಎಂದು ಕಾಣುತ್ತಿವೆ.’ ಎಂದು ನಿರ್ದಾಕ್ಷಿಣ್ಯದಿಂದ ನುಡಿದನು.

ತನಗಿದು ಮೊದಲೇ ತಿಳಿದಿದ್ದರೂ, ಆಡುವಷ್ಟು ನೈತಿಕ ಧೈರ್ಯವಿಲ್ಲ ವೆಂಬುವ ಜ್ಞಾನ ಲಕ್ಷಣದಿಂದ ಡಿಮಿಟ್ರಿಯನ್ನವನು ಹೊಳೆಗಣ್ಣಿನಿಂದ ನೋಡಿ, ‘ ಅಹುದಹುದು. ಆದರೂ, ಇದೆಲ್ಲ ಬತ್ತಲೆ ಸತ್ಯ. ಸರಕಾರಿ ಕೆಲಸದಲ್ಲಿದ್ದ ನಾನು ಇದನ್ನು ಹೇಗೆ ಬಾಯಿಬಿಚ್ಚಿ ಆಡಲಿಕ್ಕೆ ಬರುತ್ತದೆ? ನೀವೇ ತಿಳಿದು ನೋಡಿರಿ ! ಆದುದರಿಂದ, ನೀವು ನಿಮ್ಮ ನಿಜಸ್ಥಿತಿಯನ್ನು ಕೋರ್ಟಿಗೆ ಬರೆದು ತಿಳಿದುಕೊಳ್ಳಿರಿ ಎಂದನು. ಡಿಮಿಟ್ರಿಯ ನಡತೆಯನ್ನು ಕಂಡು ಅವನು ಬೆರಗಾದನು.

ಡಿಮಿಟ್ರಿಯು ಇನ್ನೇನು ಮಾಡಬೇಕೆಂದು ಕ್ಷಣಹೊತ್ತು ಆಲೋಚಿಸಿ, ಸೆರೆಯಾಳುಗಳನ್ನು ಕೆಲದಿನ ಮಟ್ಟಿಗೆ ಇಡುವ ಸೆರೆಮನೆಗೆ ಹೋದ. ಅಲ್ಲಿ 'ಮಾಸ್ಲೋವಾ ಎಂಬ ಸೆರೆಯಾಳು ಎಲ್ಲಿ'ರುವಳೆಂದು ಕೇಳಿದ. ಅಲ್ಲಿ ಆ ಹೆಸರಿನವರಾರೂ ಇದ್ದಿಲ್ಲ; ಕೊನೆಗೆ ಇನ್ಸಪೆಕ್ಟರರು ಅವನನ್ನು ಕರೆದು ಮತ್ತೊಂದು ಸೆರೆಮನೆಗೆ ಹೋಗಿ ನೋಡ ಹೇಳಿದರು. ಡಿಮಿಟ್ರಿಯು ಆಕೆಯನ್ನು ಕಂಡೇ ತೀರಬೇಕೆಂದು ನಿಶ್ಚಯ ಮಾಡಿದ್ದರಿಂದ, ಎರಡನೇ ಸೆರೆಮನೆಯು ದೂರಿದ್ದರೂ, ತೇಕುತ್ತ ಬಳಲುತ್ತ ಸಂಜೆಯಾದರೂ ಅಲ್ಲಿ ಹೋಗಿಯೇ ಬಿಟ್ಟನು. ಆ ಸೆರೆಮನೆಯು ಒಂದು ದೊಡ್ಡ ಹಾಳು ಕಟ್ಟಡ.

ಬಾಗಿಲಲ್ಲಿ ಕಾಲಿಕ್ಕಿದೊಡನೆ ಕಾವಲುಗಾರನು ತಡೆದು ಮಿಂಚಿನ ಗಂಟೆಯನ್ನು ಬಾರಿಸಿದನು. ಒಳಗಿಂದ ಸೆರೆಮನೆಯ ಅಧಿಕಾರಿಯು ಬಂದನು. ಡಿಮಿಟ್ರಿಯು ತನ್ನ ಹತ್ತರ ಇದ್ದ ಅಪ್ಪಣೆ ಚೀಟಿಯನ್ನು ಅವನಿಗೆ ತೋರಿಸಿದ. ಅದನ್ನು ನೋಡಿಕೊಂಡು, ಅಧಿಕಾರಿಯು ಇದೆಲ್ಲ ನನ್ನ ಕೈಯಲಿಲ್ಲ. ಇನ್ಸಪೆಕ್ಟರರನ್ನು ಕೇಳಲಿಕ್ಕೆ ಬೇಕು. ನೀವೇ ಹೋಗಿ ಅವರಿಗೆ ಭೆಟ್ಟಿಯಾಗಿರಿ ಅಂದನು. ಒಳ್ಳೆಯದೆಂದು ಡಿಮಿಟ್ರಿಯು ಧಡಧಡ ಅಟ್ಟವನ್ನೇರಿದನು. ಕೆಳಗೆ ಯಾರೋ ಪೀಯಾನವನ್ನು ಬಾರಿಸುತ್ತಿದ್ದರು. ಡಿಮಿಟ್ರಿಗೆ ಬಹು ಆನಂದ ವೆನಿಸಿತು. ಕೊಂಚಕಾಲ ಹಾಗೇ ನಿಂತು ಅಹರ ನಾದದಿಂದ ಪ್ಯಾಮರೆತು ನಿಂತು 'ಇನ್ಸಪೆಕ್ಟರ ಸಾಹೇಬರು ಇದ್ದಾರೇನು?' ಎಂದು ಹೊರಗಿಂದಲೇ ಕೂಗಿದನು. ಒಳಗಿಂದಲೇ ಯಾರೋ 'ಇಲ್ಲವೆಂದು ಹೇಳಿದರು.'

'ಬೇಗ ಬರುವರೇನು?' ಎಂದು ಮತ್ತೆ ವಿಚಾರಿಸಿದನು.

ಒಳಗಿನವರು ಪಿಯಾನೋ ಬಾರಿಸುವದರಲ್ಲಿಯೂ, ಅದರ ಸುಸ್ವರ ದಲ್ಲಿಯೂ ಒಳ್ಳೇ ತನ್ಮಯರಾಗಿದ್ದರಿಂದ ಇಂಥ ಹೊತ್ತಿನಲ್ಲಿ ಬರಬರ ತೆಪ್ಪ

ಆನಂದಕ್ಕೆ ಭಂಗತಂದುದಕ್ಕಾಗಿ ಬಹು ರೇಗಿದರು; ಒಳಗಿಂದ ಒಬ್ಬ ಹೆಣ್ಣುಮಗಳು ಹೊರಗೆ ಬಂದು 'ಮನೆಯಲ್ಲಿ ಅಪ್ಪ ಇಲ್ಲ' ಹೀಗೆಂದು ಸ್ವಲ್ಪ ಸಿಡುಕಿನಿಂದ ಮಾತಾಡುವಷ್ಟರಲ್ಲಿ ಹೊರಗೆ ಯಾರೋ ಸಭ್ಯಗೃಹಸ್ಥರು ಬಂದಿರುವದು ಕಾಣಿಸಿತು. 'ನನಗೆ ಇನ್ಸಪೆಕ್ಟರನ್ನು ಕಾಣಬೇಕಾಗಿದೆ' ಎಂದು ಡಿಮಿಟ್ರಿಯು ಮತ್ತೆ ವಿಚಾರಿಸಿದನು. 'ಅವರಿಲ್ಲ. ಎಲ್ಲಿಯೋ ಹೊರಗೆ ಹೋಗಿದ್ದಾರೆ. 'ಒಳಗೆ ಬಂದು ಕೂತುಕೊಳ್ಳಿರಿ! ಅಲ್ಲಿ ಅಸಿಸ್ಟಂಟರಿದ್ದಾರೆ. ಅವರನ್ನು ವಿಚಾರಿಸಿರಿ' ಎಂದಳಾಕೆ. 'ಒಳ್ಳೇದು. ಹಾಗೇ ಆಗಲಿ.' ಎಂದು ಡಿಮಿಟ್ರಿಯು ಹೊರಟನು.

ಮುಂದಂಗಳಕ್ಕೆ ಬರುವ ಹೊತ್ತಿಗೆ ಜೊಂಡ ಮೀಸೆಯ ಒಬ್ಬ ಆಫೀಸರ ಬಂದನು. 'ಅಸಿಸ್ಟಂಟ ಇನ್ಸಪೆಕ್ಟರು ಎಲ್ಲಿ' ಎಂದು ಅವರನ್ನು ಕೇಳಿದ. ಬಾಯಿಂದೇನೂ ಆಡದೆ, 'ಏನು ಕೆಲಸ?' ಎಂದು ಕೇಳಿದ. ಡಿಮಿಟ್ರಿಯು ಇವರಾರೋ ಆಫೀಸರ ಇರುವರೆಂದು ತಂದ ಚೀಟಿ ತೋರಿಸಿದ. 'ನಾಳೆ ಹತ್ತುಗಂಟೆಗೆ ಬನ್ನಿರಿ. ಅಂದರೆ, ನಿಮಗೆ ಪಾಸಕೊಡುವೆನು! ಅದೇವೇಳೆ ಯಲ್ಲ ನಿಮಗೆ ಇನ್ಸಪೆಕ್ಟರ ಭೆಟ್ಟಿಕೂಡ ಆಗಲಿಕ್ಕೆ ಅಡ್ಡಿ ಇಲ್ಲ' ಅಂದನು.

ಡಿಮಿಟ್ರಿಯ ಮನಸು ಬಹು ಕ್ಷುಬ್ಧವಾಗಿತ್ತು. ಕಟೂಷಳನ್ನು ಕಾಣುವ ಹಂಬಲವು ಬಲವಾಗಿತ್ತು. ಇಂಥ ಸ್ಥಿತಿಯಲ್ಲಿಯೇ ವಿಚಾರಗಳಲ್ಲಿ ತೇಲುತ್ತ ತೇಲುತ್ತ ಅವನು ಮನೆಗೆ ಬಂದು ಹೇಗೋತಲ್ಪಿದನು. ಕಾಯ್ದ ಮನವು ತಂಪಾಗಲಿಕ್ಕೆ ಬಹುಕಾಲ ಹಿಡಿಯಿತು. ಅನೇಕ ದಿವಸಗಳಿಂದ ಕೈ ಹಚ್ಚದೆ ಹಾಗೇ ಬಿದ್ದಿರುವ ಡಾಯರಿಯು ಅವನ ಕಣ್ಣಿಗೆ ಬಿತ್ತು; ಹಿಂದೆ ಬರೆದ ಒಂದೆರಡು ಪುಟಗಳನ್ನು ಓದಿದ್ದು ಅವನ ಮತ್ತೆ ಅದರಲ್ಲಿ ಕೆಳಗಿನಂತೆ ಬರೆದನು:—ನಾನು ಡಾಯರಿಗೆ ಕೈ ಹಚ್ಚದೆ ಎರಡು, ವರ್ಷಗಳಾದವು.

ಮತ್ತು ಡಾಯರಿ ಬರೆಯುವಂಥ ಹುಡುಗಾಟಿಕೆಯ ಕೆಲಸ ಇನ್ನು ಮುಂದೆ ಮಾಡಬಾರದೆಂದು ವಿಚಾರಿಸಿದ್ದೆ; ಆದರೆ ದಿನಚರಿಯನ್ನು ಬರೆಯುವದೆಂದರೆ, ಹುಡುಗಾಟಿಕೆಯಲ್ಲ, ತನ್ನೊಡನೆ ತಾನು ಮಾತಾಡುವದು. ನಮ್ಮ ಹೃದಯದಲ್ಲಿ ಮನೆಮಾಡಿಕೊಂಡಿರುವ ದೇವರೊಡನೆ ಮಾತಾಡುವದು. ಇಷ್ಟುದಿನ ನನ್ನಲ್ಲಿಯ ಅಂತರಾತ್ಮನು ಮಲಗಿದ್ದರಿಂದ ನನ್ನೊಡನೆ ಮಾತಾಡಲಿಕ್ಕೆ ಯಾರೂ ಇರಲಿಲ್ಲ; ಆದರೆ ಎಪ್ರಿಲ ೨೮ನೆಯ ತಾರೀಖಿನದಿನ ಕೋರ್ಟಿನಲ್ಲಿರುವಾಗ ಅಲ್ಲಿ ಒದಗಿದ ವಿಲಕ್ಷಣ ಸಂಗತಿಯಿಂದ ನನ್ನಲ್ಲಿ ಜ್ಞಾನೋದಯವಾಯಿತು. ನಾನು ಕೆಡಸಿದ ಕಟೋಷಳನ್ನು ಸೆರೆಯಾಳಿನ ಉಡಿಗೆಯಲ್ಲಿ ಕಂಡೆನು; ಆಕೆಗೆ ಗಡಿಪಾರಿನ ಶಿಕ್ಷೆಯಾಯಿತು. ಆಕೆಯು ಇದ್ದಲ್ಲಿಗೆ ಹೋಗಿ ಕಾಣಬೇಕೆಂದು ಮನೀಷೆ; ಆದರೆ ಅಪ್ಪಣೆ ಸಿಗಲಿಲ್ಲ; ನಾನಂತೂ ಹೇಗಾದರೂ ಮಾಡಿ, ಆಕೆಯನ್ನು ಕಂಡು, ಅವಳೆದುರಿಗೆ ನನ್ನ ತಪ್ಪನ್ನು ಒಪ್ಪಿಕೊಂಡು—ಸಾಧ್ಯವಾದರೆ—ಆಕೆಯನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿದ್ದೇನೆ. ”



## ೮ ಕಟೂಷಳು ಡಿಮಿಟ್ರಿಯನ್ನು ಮರೆತದ್ದೇಕೆ?



ಸೆರೆಮನೆಯಲ್ಲಿದ್ದ ಮಾಸ್ಲೋವಳಿಗೆ ಆ ದಿನ ರಾತ್ರೆ ಎಲ್ಲಾ ನಿದ್ದೆ ಇಲ್ಲ. ಏನೇನೋ ಹಿಂದು-ಮುಂದಿನ, ಆದ-ಹೋದ, ಆಗದ-ನೀಗದ ವಿಚಾರಗಳು; ಕೋರ್ಟಿನಲ್ಲಿ ನಡೆದ ಸಂಗತಿಗಳ ನೆನಹು; ತಾನು ಒಂದಾನೊಂದು ಕಾಲಕ್ಕೆ ಇದ್ದ ವೇಶ್ಯಾಗ್ರಹದ ನೆನಪು; ಇಷ್ಟೆಲ್ಲ ಆದರೂ ಡಿಮಿಟ್ರಿಯ ನೆನಪಿಲ್ಲ. ತನ್ನ ಬಾಲ್ಯ ಮತ್ತು ಮದುವೆಯ ವಯಸ್ಸಿನ ನೆನಪು ರವೆಯಷ್ಟೂ ಇರಲಿಲ್ಲ. ಅದನ್ನವಳು ಪುಟ್ಟಪೂರಾ ಮರೆತೇ ಬಿಟ್ಟಿದ್ದಳು; ಆದರೆ ಪಟ್ಟ ಕಷ್ಟವೆಂಬುದು ಎಂದಾದರೂ ಮರೆಯಾದೀತೇ? ಅದಾಕೆಯ ಎದೆಗೂಡಿನಲ್ಲಿಯ ಆಳದಲ್ಲಿ ಎಲ್ಲಿಯೋ ಒಂದೆಡೆ ಕೊಂಪೆಯಲ್ಲಿ ದೂರ ಹುದುಗಿಕೊಂಡಿದ್ದಿತು; ಆದರೂ ಮೇಲ್ಮೇಲೆ ಕಟೂಷಳು ಡಿಮಿಟ್ರಿಯನ್ನು ಮರೆತಂತೆಯೇ ಮಾಡಿದ್ದಳು; ಕನಸುಮನಸಿನಲ್ಲಿ ಅವನನ್ನು, ಅವನ ಸಂಗತಿಯನ್ನು ನೆನಿಸುತ್ತಿರಲಿಲ್ಲ. ಅಂತೆಯೇ ಇಂದು ಅವರಿಬ್ಬರೂ ಕೋರ್ಟಿನಲ್ಲಿ ಇದಿರಾ ಇದಿರಾ ಭೆಟ್ಟಿಯಾದರೂ ಆಕೆ ಅವನನ್ನು ಗುರುತಿಸಲಿಲ್ಲ. ದಂಡಿನಲ್ಲಿರುವಾಗ ಒಂದಿನ ಡಿಮಿಟ್ರಿಯು ತನ್ನ ಸೋದರತ್ತೆಂದಿರು ಇರುವ ಊರಹತ್ತರಿನ ಸ್ಟೇಶನ್ನಿನ ಮೇಲಿಂದಲೇ ರಾತ್ರೆ ಎರಡು ಗಂಟೆಯ ರೈಲಿನಲ್ಲಿ ಕುಳಿತು ಹೋಗುವೆನೆಂದು ಕಾಗದ ಬರೆದಿದ್ದ. ಅವರೂ ಹಾಗೇ ಹೋಗದೆ, ಇಳಿದು ಭೆಟ್ಟಿಯಾಗಿ ಹೋಗೆಂದು ಉತ್ತರ ಬರೆದಿದ್ದರು. ಇಳಿಯಲಿಕ್ಕಾಗುವದಿಲ್ಲವೆಂದು ತಂತಿ ಮಾಡಿದ್ದನು.

ಅದು ಕಗ್ಗತ್ತಲೆಯ ದಿನ. ಇಡೀ ದಿನವೆಲ್ಲವೂ ಸೆಕೆಸೆಕೆಯಾಗಿ ಕರ್ರನ್ನ ಮೋಡಗಳಿಂದ ಮುಗಿಲು ಬಲು ಭೀಕರವಾಗಿ ಕಾಣಿಸುತ್ತಿತ್ತು. ಸುತ್ತು ಕಡೆ ಮಳೆಯು ಕಾಲುಮಾಡಿತ್ತು. ಬರಬಾರದ ಮಳೆ ಬಂದರೆ, ಎಲ್ಲೆಡೆಯಲ್ಲಿ ಕಾಲುವೆಗಳನ್ನು ಹರಿಯಿಸುವದೆಂದು ಎಲ್ಲರ ಭರವಸೆ. ಡಿಮಿಟ್ರಿಯು ಸ್ಟೇಶನ್ನ ಮೇಲಿಂದ ಹಾಯ್ದುಹೋಗುವ ಸುದ್ದಿಯನ್ನು ಕಟೂಷಳು ತನ್ನ

ಒಡತಿಯರಿಂದ ಕೇಳಿದ್ದಳು. ತನ್ನ ಜೀವದ ನಲ್ಲನನ್ನು ಯಾವಾಗ ಕಂಡೇನೋ ಎಂದು ಆಕೆಗೆ ಹಂಬಲ; ಮನೆಯಲ್ಲಿ ಆದಿನ ಕೆಲಸಬೊಸಗೆ ಮಾಡುತ್ತಿದ್ದರೂ ಕಟೂಷಳ ಮನವೆಲ್ಲ ಡಿಮಿಟ್ರಿಯ ಸಂಗಡ ರೈಲಿನಲ್ಲಿ. ಹೊತ್ತಿಗೆ ತನ್ನ ಒಡತಿಯರಿಗೆ ಹಾಸಿಗೆ ಹಾಸಿಕೊಟ್ಟಳು. ಎಷ್ಟು ತೊಂದರೆ ಯಾದರೂ ಸ್ಟೇಶನ್ನಿಗೆ ಹೋಗಿಯೇ ತೀರಬೇಕೆಂದು ನಿಶ್ಚಯಿಸಿದಳು. ಆಗ ಕಟೂಷಳು ತುಂಬಿದ ಹೆಂಗಸು. ಮನೆಯ ಅಡಿಗೆಯವಳ ಮಗಳನ್ನು ತನ್ನ ಸಂಗಡ ಕರೆದುಕೊಂಡು ಹೋಗಬೇಕೆಂದು ಹೇಳಿಟ್ಟಳು. ನಿದ್ದೆ ಬರಲಿಲ್ಲ. ಎದ್ದು ಕಾಲಲ್ಲಿ ಬೂಟು, ಮೈಯಲ್ಲಿ ಉಣ್ಣೆಯ ಅಂಗಿ, ಮೈಮೇಲೆ ಬೆಚ್ಚನ್ನ ಶಾಲು ಹೊದ್ದುಕೊಂಡು ಆಕೆಯನ್ನು ಜೊತೆಯಲ್ಲಿ ಕಟ್ಟಿಕೊಂಡು ಸ್ಟೇಶನ್ನಿಗೆ ಅವಸರವಸರದಿಂದ ಹೊರಟಳು.

ಬೇಸಿಗೆ ಅದೇ ಮುಗಿದು ಮಳೆಗಾಲ ಕಾಲಿಟ್ಟಿತ್ತು; ಭರ್ರಭರ್ರೆಂದು ಗಾಳಿಯು ಭೋರಿಟ್ಟು ಬೀಸುತ್ತಿತ್ತು. ಆಣೆಕಲ್ಲಿನಂಥ ಮಳೆಯ ಹನಿಗಳುಬಿಸಿ ಬಿಸಿಯಾಗಿ ಪಟ್ಟಪಟ್ಟೆಂದು ಬೀಳುತ್ತಿದ್ದವು. ಕಾಲುದಾರಿಯು ಕಾಣಿಸುತಿರಲಿಲ್ಲ. ಎಡವುತ್ತ ಮುಗ್ಗರಿಸುತ್ತ, ಅತ್ತನೋಡುತ್ತ ಇತ್ತನೋಡುತ್ತ, ಒಮ್ಮೆ ಸ್ಟೇಶನ್ನ ಕಂಡಳು. ಅದು ಚಿಕ್ಕ ಸ್ಟೇಶನ್ನು. ಉಗೆಬಂಡಿಯು ಮೂರು ನಿಮಿಷ ಮಾತ್ರ ನಿಲ್ಲುತ್ತಿತ್ತು. ಆಕೆ ಸ್ಟೇಶನ್ನಿನಲ್ಲಿ ಕಾಲಿಕ್ಕುವ ಹೊತ್ತಿಗೆ ಎರಡನೇ ಬೆಲ್ಲ ಆಯಿತು. ಗಾಬರಿಗಣ್ಣಿನಿಂದ ಪ್ಲಾಟ್‌ಫಾರ್ಮಿಗೆ ಓಡಿದಳು. ಅಲ್ಲಿನಿಂತು ಹೀಗೆ ನೋಡುವಷ್ಟರಲ್ಲಿ ಮುಂದಿರುವ ಒಂದನೇ ವರ್ಗದ ಬಂಡಿಯಲ್ಲಿ ಡಿಮಿಟ್ರಿಯು ಕುಳಿತಿದ್ದುದು ಕಟೂಷಳಿಗೆ ಬಂಡಿಯ ಗಾಜಿನ ಕಿಟಕಿಯೊಳಗಿಂದ ಮಸಮಸಕಾಗಿ ಕಾಣಿಸಿತು. ಆ ಬಂಡಿಯು ಮಿಂಚಿನ ದೀಪದಿಂದ ಲಕಲಕ ಹೊಳೆಯುತ್ತಿತ್ತು. ಡಿಮಿಟ್ರಿಯು ಬೆಳ್ಳನ್ನೆ ಬೆಳಗುವ ಶರ್ಟ ಹಾಕಿಕೊಂಡು ಕಿಟಕಿಯ ಬದಿಯಲ್ಲಿ ಬುರ್ಖಾಯ ಮೇಲೆ ಕುಳಿತಿದ್ದನು, ತನ್ನ ಮುಂದೆ ಕುಳಿತಿರುವ ಯಾವನೋ ಒಬ್ಬ ಅಧಿಕಾರಿಯ ಸಂಗಡ ಮಾತನಾಡಿ ನಗುತ್ತಿದ್ದನು. ಕಟೂಷಳು ಅವನನ್ನು ನೋಡಿದೊಡನೆ ತನ್ನ ಹಿಮದ ಕಿಟಕಿಯನ್ನು ಚಳಿಯಿಂದ ಮರಗಟ್ಟಿದ ತನ್ನ ಕೈಗಳಿಂದ ಬಡಿದಳು. ಅದೇ ಕಾನೇ ಮಯಾರನೇ

ಬೆಲ್ಲ ಆಯಿತು. ಬಂಡಿಯು ಧಕ್ಕ ಎಂದು ಸ್ವಲ್ಪ ಹಿಂದೆ ಸರಿದಂತಾಗಿ ಕೂಡಲೆ ಮುನ್ನಡೆಯಿತು. ಕಟೂಷಳು ಕನ್ನಡಿಯ ಕಿಟಕಿಗೆ ಮುಖಹಚ್ಚಿ ಹಚ್ಚಿ' ಕೈಯಿಂದ ಬಡಿಬಡಿದು, ಡಿಮಿಟ್ರಿ,! ಡಿಮಿಟ್ರಿ! ಎಂದು ಕೂಗುತ್ತ ಬಂಡಿಯ ಹೊರಮಗ್ಗಲಿನ ಕಬ್ಬಿಣದ ಹಿಡಿಕೆಯನ್ನು ಹಿಡಿದುಕೊಂಡೇ ಓಡುತ್ತಿದ್ದಳು. ಪ್ಲ್ಯಾಟ ಫಾರ್ಮದಾಟದ ಮೇಲೆ ಬಂಡಿಯು ಹೆಚ್ಚು ವೇಗದಿಂದ ನಡೆಯಿತು. ಭರಗುಟ್ಟುವ ಗಾಳಿಯ ರಭಸ, ಮತ್ತು ಮಳೆಹೊಡೆತ ಇವುಗಳಿಂದ ಕಟೂಷಳಿಗೆ ಓಡುವದು ಕಷ್ಟವಾಯಿತು. ಆಕೆ ಮೈಮೇಲೆ ಹೊತ್ತ ಶಾಲವು ಫಡಫಡ ಎಂದು ಗಾಳಿಗೆ ಹಾರಿ ಹಾರಿ, ಆಗಾಗ್ಗೆ ಕಾಲಿಗೆ ಸುತ್ತಿಕೊಳ್ಳುತ್ತಿತ್ತು; ಅಂತೂ ಅದನ್ನು ಎಡಗೈಯಿಂದ ತಿರುತಿರುಗಿ ಬಿಡಿಸಿಕೊಳ್ಳುತ್ತ ಮೇಲಕ್ಕೆ ಜಗ್ಗುತ್ತಾ ಹೇಗೋ ಒಂದೆರಡು ನಿಮಿಷ ಓಡಿದಳು. ಬಂಡಿಯು ಒಳ್ಳೇ ಭರಗುಟ್ಟುತ್ತ ನಡೆಯಿತು. ಕಾಲುಗಳು ತೀರ ಸೋತವು. ನಿರಾಶಳಾದಳು. ಆಳು ಒತ್ತರಿಸಿ ಬಂದು 'ಹೋದನು' ಎಂದು ಚೀರಿ ಬಿಕ್ಕಿ ಬಿಕ್ಕಿ ಅಳಹತ್ತಿದಳು. 'ಅವನು ಮಿಂಚಿನ ದೀಪದಿಂದ ಝಗಝಗಿಸುವ ಬಂಡಿಯಲ್ಲಿ ಕಾಲ್ಮೇಲೆಕಾಲು ಹಾಕಿಕೊಂಡು ವಿರಾಮ ಖುರ್ಚಿಯಮೇಲೆ ಸರಸಸಲ್ಲಾಪಗಳಲ್ಲಿ ಓಲಾಡುತ್ತ ಕುಳಿತಿರಬೇಕು; ನಾನು ಮಾತ್ರ ಅವನ ಹೆಸರಿನಿಂದ ತೇಕುತ್ತ ಬಳಲುತ್ತ ಅಳುತ್ತ ಮೈಎಲ್ಲ ತೋಯಿಸಿಕೊಂಡು ಗಾಳಿಮಳೆ ಅನ್ನದೆ ಕತ್ತಲೆಯಲ್ಲಿ ಕಕ್ಕಾವಿಕ್ಕಿಯಾಗಿ ಓಡುತ್ತಿರಬೇಕೇ? ಮತ್ತು ಇಷ್ಟಾದರೂ ಅವನು ನನ್ನನ್ನು ಲೆಕ್ಕಿಸಬಾರದೇ?' ಎಂಬುವ ವಿಚಾರವು ಕಟೂಷಳ ಮನಸಿನಲ್ಲಿ ಮಿಂಚಿದೊಡನೆ, ಆಕೆ ರೈಲುದಾರಿಯ ಮೇಲೆಯೇ ದಪ್ಪೆಂದು ಕೆಳಗೆ ಬಿದ್ದು, ದೊಡ್ಡ ದನಿಯಿಂದ ಅತ್ತು, ತನ್ನ ಎದೆಯಲ್ಲಿ ಉಕ್ಕುವ ದುಃಖವನ್ನು ಹಗುರುಮಾಡಿ ಕೊಂಡಳು.

ತನ್ನ ಗತಿ ಮುಂದೆ ಹೇಗೆಂದು ಆಕೆಗೆ ಆಘೋ ಅನಿಸಿತು. ಅಲ್ಲಿಯೇ ರೈಲಿನ ದಾರಿಯಲ್ಲಿ ಕುಳಿತುಕೊಂಡು ಈ ಖೋಡ ಜನ್ಮವನ್ನು ಒಮ್ಮೆ ನೀಗಬೇಕೆಂಬ ವಿಚಾರವೂ ಆಕೆಯ ಮನಸಿನಲ್ಲಿ ಹುಟ್ಟಿತು; ಆದರೆ, ತನ್ನ ಹೊಟ್ಟೆಯಲ್ಲಿರುವ ಆ ಕೂಸಿನ ಯೋಚನೆ ಬಂದು, ಆಕೆಯ [illegible] ಹಿಂಜರಿಯಿತು; ಯಾವಾಗಲೂ ಈ ಪ್ರಕಾರ ಬೇನೆಗಳನ್ನು ಸಹಿಸಲಾಗದ

ಸಿದ್ದೇನೋ ಅವನ ದೆಸೆಯಿಂದಲೇ ಪ್ರಾಣ—ದೇಹಗಳನ್ನು ಮುಡುಪಿಟ್ಟು, ಅವನ ಸೇಡು ತೀರಿಸಿಕೊಳ್ಳುವ ಸಂಕಲ್ಪವನ್ನು ಬಿಟ್ಟಳು. ಮನಸು ಶಾಂತ ಪಡಿಸಿಕೊಂಡು, ಆಗಲಿ ಎಂದು ಮೆಲ್ಲಗೆ ಎದ್ದು, ಮೈಮೇಲೆ ಶಾಲು ಹೊದ್ದು ಕೊಂಡು ಮನೆಯ ದಾರಿಹಿಡಿದಳು.

ಮಳೆಯಿಂದ ಮೈಯೆಲ್ಲ ತಪ ತಪ ಅನ್ನುವ ಹಾಗೆ ಒದ್ದೆಯಾಗಿದೆ. ಓಡಿ ಓಡಿ ದಣಿದು ಮುಖವೆಲ್ಲ ಕಂದಿ ಕುಂದಿ ಹೋಗಿದೆ. ಇಂಥ ಸ್ಥಿತಿಯಲ್ಲಿ ಚಿಂತಾಕುಲಳಾಗಿ ಮನೆ ಸೇರಿದಳು. ಅಂದಿನ ಘೋರ ಪ್ರಸಂಗವು ಆಕೆಯ ಎದೆಯನ್ನು ಅಖಂಡವಾಗಿ ಗುಂಗಿಯು ಹುಳದಂತೆ ಕರ ಕರ ಎಂದು ಕೊರೆಯ ತೊಡಗಿತು. ಅಂದು ಮೊದಲು ಮುಂದೆ ಆಕೆಯೆಂದರೆ, ನಿರಾಸೆಯ ಮೂರ್ತಿಯಾದಳು. ಒಳ್ಳೆಯತನಕ್ಕೆ ಈ ಪ್ರಪಂಚದಲ್ಲಿ ಬೆಲೆಯೆ ಇಲ್ಲವೆಂದು ಮನಗಂಡಳು; ದೇವರು ತನ್ನ ಸದ್ಭಾವನೆಯ ಮೊರೆ ಕೇಳಲಿಲ್ಲವೆಂದು ಅವನ ಮೇಲೆಯೂ ಸಿಟ್ಟಾದಳು. ನಿಜವಾಗಿ, ಆಕೆಯ ಎದೆಗೂಡಿನಲ್ಲಿ ಒಂದೆಡೆ ದೇವರ ಭಕ್ತಿಯ ಪಣತಿಯು ಸಣ್ಣಾಗಿ ಏಕಾಗಲೊಲ್ಲದು ಉರಿಯುತ್ತಿತ್ತು. ದೇವರಿದ್ದಾನೆ. ಅವನು ಸತ್ಯವಂತರ ತೆತ್ತಿಗನು ಎಂದು ಜನರು ಅವನನ್ನು ನಂಬುವರು, ತಾನೂ ನಂಬಬೇಕೆಂದು ತಿಳಿದುಕೊಂಡಿದ್ದಳು; ಆದರೆ, ತನ್ನ ನಲ್ಲನಾದ ಡಿಮಿಟ್ರಿಯು ತನ್ನ ಕೈಬಿಟ್ಟ ಕ್ಷಣದಿಂದ ಆಕೆಗೆ ದೇವರುದಿಂಡರೆಂಬುದು ಸುಳ್ಳು, ಗೊಡ್ಡು ಹರಟೆ, ಎಂದೆನಿಸಿತು. ತಾನಂ ನೆರೆನಂಬಿದವನೇ ತನ್ನನು ಎಂಜಲು ಮಾಡಿ, ಮರೆತು, ತನ್ನ ಪ್ರೀತಿಯನ್ನು ಕಸಕ್ಕೆಡೆ ಮಾಡಿದ್ದನ್ನು ನೆನೆನೆನಿಸಿಕೊಂಡು ಮನಸಿನಲ್ಲಿಯೇ ಮರಗುವಳು. ಇಂಥ ಸಹೃದಯ ಮನುಷ್ಯನ ಮನಃಸ್ಥಿತಿಯೇ ಹೀಗಾದ ಬಳಿಕ ಇನ್ನುಳಿದವರ ಪಾಡೇನೆಂದು ಮನಸಿನಲ್ಲಿ ಅಂದು ಕೊಂಡಳು. ಈ ಸಂದು ಕಟ್ಟಿನಲ್ಲಿಯೇ, ಆಕೆ ಬಸರಿದ್ದುದು ಮನೆಯ ಒಡತಿಯರಿಗೆ ತಿಳಿದು ಆಕೆಯನ್ನು ಮನೆಯಿಂದ ಹೊರಗೆ ಹಾಕಿದರು; ಮುಂದೆಮುಂದೆಯಂತೂ, ಯಾರು ದುಡ್ಡಿಗಾಗಿಯೋ, ಯಾರು ತಮ್ಮ ವಿಷಯಸುಖಕ್ಕಾಗಿಯೋ ಆಕೆಯನ್ನು

ಬಳಸಿಕೊಂಡರೇ ಹೊರ್ತು ಒಬ್ಬರೂ ಲೆಕ್ಕಿಸಲಿಲ್ಲ. ಆಗ ಈ ಸಂಸಾರಿಗರಿಗೆ ಬೇರೆ ಯಾವುದರ ಎಚ್ಚರವೇ ಇಲ್ಲ ಎಂದು ಆಕೆ ಮನದಟ್ಟು ಮಾಡಿ ಕೊಂಡಳು.

ಈ ಜಗದಲ್ಲಿ ಪ್ರತಿಯೊಬ್ಬನಿಗೆ ತನ್ನ ತನ್ನ ಸುಖದ ಹುಚ್ಚು ಹತ್ತಿದೆ; ದೇವರು-ಧರ್ಮ-ಒಳ್ಳೇತನ ಎಂದು ಜಗದವರು ಬಡಬಡಿಸುವದೆಲ್ಲ ಮೋಸಗಾರಿಕೆ ಎಂದು ತನ್ನ ಸೆರಗಿಗೆ ಗಂಟು ಹಾಕಿಕೊಂಡಳು. ಯಾವಾಗಾದ ರೊಮ್ಮೆ ಈ ಬಗ್ಗೆ ಮನಸಿನಲ್ಲಿ ಸಂದೇಹಗಳು ಸುಳಿದರೆ, ಎಲ್ಲರೂ ಎಲ್ಲರನ್ನೂ ನೋಯಿಸಿ ಗಾಸಿಪಡಿಸುವಂತೆ ಹೀಗೇಕೆ ದೇವರು ಮಾಡಿರುವನೋ ಎಂದು ಆಚ್ಚರಿ ಪಡುವಳು; ಆ ಮೇಲೆ ಇದಕ್ಕೆ ಪಾರವೇ ಇಲ್ಲವೆಂದು ಬೇಸತ್ತು, ಆ ವಿಚಾರವನ್ನೇ ಬಿಟ್ಟು ಬೇರೆ ಯಾವುದೋ ಒಂದು ವಿಷಯದಲ್ಲಿ ಮನಸನ್ನು ತಿರುಗಿಸಿ ರಮಿಸುವಳು.



# ೯ ಕಟ್ಯೂಷಳ ಭೆಟ್ಟಿ.



ಡಿಮಿಟ್ರಿಯು ಇಂದು ಬಲು ಬೇಗ ಎದ್ದು, ಮನೆಬಿಟ್ಟು ಹೊರಟನು. ಅದೇ ತಾನೇ ಹಳ್ಳಿಯ ಒಬ್ಬ ಒಕ್ಕಲಿಗನು ಬೀದಿಗುಂಟ 'ಹಾಲು, ಹಾಲು,' ಎಂದು ಕೂಗುತ್ತ ಹೊರಟಿದ್ದನು. ಅಂದು ರವಿವಾರ. ಜನರೆಲ್ಲರೂ, ಅಚ್ಚುಕಟ್ಟಾದ ಉಡುಪು ಹಾಕಿಕೊಂಡು ಒಳ್ಳೇ ಅವಸರವಸರದಿಂದ ಚರ್ಚಕ್ಕೆ ನಡೆದಿದ್ದರು. ಡಿಮಿಟ್ರಿಯು ಮೋಟಾರಿನಲ್ಲಿ ಕುಳಿತುಕೊಂಡು ಸೆರೆಮನೆಗೆ ಹೊಡೆಯ ಹೇಳಿದನು. ಮೋಟಾರಿನವನು ಸೆರೆಮನೆಯ ತನಕ ಮೋಟಾರ ಒಯ್ಯದೆ, ನಡುವಿನ ಕೂಟಿಗೆ ಒಯ್ದು ನಿಲ್ಲಿಸಿದ. ಅಲ್ಲಿ ನೂರಾರು ಮಂದಿ ಹೆಂಗಸರು ಗಂಡಸರು ತಮ್ಮ ಕೈಯಲ್ಲಿ ಬಗೆ ಬಗೆಯ ಪುಡಿಕೆಗಳನ್ನು ಹಿಡಿದುಕೊಂಡು ನಿಂತಿದ್ದರು.

ಅಲ್ಲಿಂದ ಮುಂದೆ ಡಿಮಿಟ್ರಿಯು ಸೆರೆಮನೆಯ ಹೆಬ್ಬಾಗಿಲಿನ ವರೆಗೆ ನಡೆದನು. ಅಲ್ಲಿ ಒಂದು ಬಾಕಿನಮೇಲೆ ಸೆರೆಮನೆಯ ಉಡುಪು ಹಾಕಿಕೊಂಡ ಅಧಿಕಾರಿಯೊಬ್ಬ ಕುಳಿತಿದ್ದ. ಅವನ ಕೈಯಲ್ಲಿ ಒಂದು ನೋಟಬುಕ್ಕು ಇತ್ತು. ಸೆರೆಯಾಳುಗಳನ್ನು ಕಾಣಲಿಕ್ಕೆ ಹೋಗುವವರು ಅವನ ಹತ್ತಿರ ಹೋಗಿ, ತಾವು ಕಾಣಬೇಕಾದ ಸೆರೆಯಾಳುಗಳ ಹೆಸರು ಹೇಳುವರು. ಅವನು ಆ ಹೆಸರುಗಳನ್ನು ಬರಕೊಳ್ಳುತ್ತಿದ್ದ. ಡಿಮಿಟ್ರಿಯಾದರೂ ಅಲ್ಲಿ ಹೋಗಿ ತಾನು ಕಾಣಬೇಕಾದ ಮಾಸ್ಲೋವಳ ಹೆಸರು ಹೇಳಿದ. ಸೆರೆಮನೆಯ ಅಧಿಕಾರಿಯು ಅದನ್ನು ಬರಕೊಂಡನು.

ಎಲ್ಲ ಜನರು ಸಾಲಾಗಿ ನಿಂತರು. ಅವರಲ್ಲಿ ಬಡವರೇ ಬಹಳ. ಹಲವರ ಮೈಮೇಲೆ ಹರಕು ಬಟ್ಟೆಗಳು. ಎಲ್ಲಿಯೋ ಒಬ್ಬಿಬ್ಬರು ಮೇಲ್ತರಗತಿಯ ಹೆಂಗಸರು ಗಂಡಸರು. ತನ್ನ ಬಳಿ ನಿಂತಿರುವ ಒಬ್ಬ ಮನುಷ್ಯನಿಗೆ ಡಿಮಿಟ್ರಿಯು 'ನೀವೂ ಇದೇ ಮೊದಲನೇ ಸಲ ಬಂದಿರುವಿರೇನು?' ಎಂದು ವಿಚಾರಿಸಿದ. ಅವರು 'ಇಲ್ಲ. ನಾನು ಪ್ರತಿಭಾನುವಾರವೂ ಬರುತ್ತೇನೆ.'

ಅಂದನು. ಅವನ ತಮ್ಮನು ಸೆರೆಯಲ್ಲಿದ್ದನು; ಆ ಮೇಲೆ ಆ ಮನುಷ್ಯನು ಡಿಮಿಟ್ರಿಗೂ ' ನೀವು ಯಾರು? ಎಲ್ಲಿಯವರು? ಯಾರನ್ನು ಕಾಣಲಿಕ್ಕೆ ಬಂದದ್ದು? ' ಮುಂತಾಗಿ ಕೇಳಿದನು. ತನ್ನ ಕೆಲ ವಿಷಯಗಳನ್ನು ಮಾತ್ರ ಡಿಮಿಟ್ರಿಯು ಹೇಳಿದ.

ಅವರಿಬ್ಬರ ಈ ಮಾತು ನಡೆಯುವ ಹೊತ್ತಿಗೆ ಕಬ್ಬಿಣದ ದೊಡ್ಡ ಬಾಗಿಲು ತೆರೆಯಿತು. ಜೇಲರನ ಹಿಂದಿಂದೆ ಒಬ್ಬ ಅಧಿಕಾರಿಯು ಬಂದ. ಬಾಗಿಲಬಳಿ ಜೇಲರನು ನಿಂತು, ಒಂದು, ಎರಡು, ಮೂರು ಹೀಗೆ ಎಣಿಸೆಣಿಸಿ ಒಬ್ಬೊಬ್ಬರನ್ನೇ ಒಳಗೆ ಬಿಡಲಾರಂಭಿಸಿದನು. ಎಲ್ಲರೂ ಒಳಮಗ್ಗಲಿಗಿರುವ ವಿಶಾಲವಾದ, ಕಬ್ಬಿಣಸಲಾಕೆಯ ದೊಡ್ಡದೊಡ್ಡ ಕಿಡಿಕಿಗಳುಳ್ಳ ಒಂದು ಕಟ್ಟಡಕ್ಕೆ ಹೋದರು. ಅದು ಸೆರೆಯಾಳುಗಳನ್ನು ಕಾಣುವಮನೆ. ಇಲ್ಲಿಂದ ಹೆಂಗಸು ಸೆರೆಯಾಳುಗಳನ್ನು ಕಾಣುವ ಮನೆಗೆ ಹೋಗುವ ದಾರಿ ಇತ್ತು. ಡಿಮಿಟ್ರಿಗೆ ಇದೇನೂ ಗೊತ್ತಿರಲಿಲ್ಲ. ಅವನು, ಸೆರೆಮನೆ, ಅಲ್ಲಿರುವ ಜನಗಳು, ಅವರ ಇರುವಿಕೆ, ಇವುಗಳ ವಿಚಾರದಲ್ಲಿಯೇ ದಂಗಾಗಿ ಕುಳಿತು ಬಿಟ್ಟನು. ಕೆಲ ಹೊತ್ತಾದ ಬಳಿಕ ಗಂಡಸರೆಲ್ಲರು ಕೂತಂಥ ಕಟ್ಟಡದಲ್ಲಿಯೇ ಇರುವ ಒಂದು ಬಾಗಿಲನ್ನು ತೆರೆದರು. ಅದನ್ನು ತೆರೆದಕೂಡಲೇ ಕಿವಿಗಡಚಿಕ್ಕುವಂತೆ ನೂರಾರು ಜನರ ' ಹೋ ' ಎಂಬುವ ಸಪ್ಪಳ ಕೇಳಿಸಿತು. ಅವರು ಕೂಗಾಡುವದರ ಗುಟ್ಟು ಡಿಮಿಟ್ರಿಗೆ ತಿಳಿಯಲಿಲ್ಲ; ಆದರೂ ಅವರೆಲ್ಲರು ಮೇಲಿನಿಂದ ಕೆಳಗಿನವರೆಗೆ ಇಳಿಬಿಟ್ಟ ಒಂದು ತಂತಿಯ ಜಾಳಿಗೆಯಂಥ ಪರದೆಯ ಆಚೆ ಬೆಲ್ಲಕ್ಕೆ ನೊಣಗಳು ಮುಕ್ಕುರುವಂತೆ, ಜನರು ಗಿಜಗುಟ್ಟುತ್ತಿರುವ ಹಾಗೆ ಕಾಣಿಸಿತು. ಪರದೆಯ ಆಚೆಯ ಮಗ್ಗಲಿಗೆ ಸೆರೆಯಾಳುಗಳು. ಈಚೆಯ ಮಗ್ಗಲಿಗೆ ಭೆಟ್ಟಿಯಾಗಲಿಕ್ಕೆ ಬಂದ ಜನರು; ನೋಡಲಿಕ್ಕೆ ಬಂದ ಜನರು ಅವರಿಗೆ ತಮ್ಮ ಕೈಯಿಂದೇನೂ ಚಾಚಿಕೊಡಬಾರದೆಂದು ಅವರಿವರ ನಡುವೆ ಏಳೆಂಟು ಅಡಿ ಅಂತರವಿತ್ತು. ಇದರಿಂದ, ಕೂಗಿ ಮಾತಾಡಿದಾಗಲೇ ಅವರಿಗೆ ಕೇಳಿಸುವದು; ಇಲ್ಲದಿದ್ದರೆ ಇಲ್ಲ.

ಈ ಗದ್ದಲವನ್ನು ಡಿಮಿಟ್ರಿಯು ಐದು ಮಿನಿಟುಗಳವರೆಗೆ ನೋಡಿದ. ' ಇಂಥ ಸ್ಥಿತಿಯಲ್ಲಿಯೇ ತಾನೂ ಕಟೂಷಳೊಡನೆ ಮಾತಾಡಬೇಕಲ್ಲ ' ಅಂದು

ಕೊಂಡನು. ಆಗಲಿ. ಬಂದುದಕ್ಕೆ ಎದೆಗೊಟ್ಟು ನಿಲ್ಲದೆ ವಿಧಿ ಇಲ್ಲ' ಎಂದು ಧೈರ್ಯಮಾಡಿ, ಒಮ್ಮೆ ಅತ್ತಿತ್ತ ನೋಡಿದನು. ಆಚೆಯ ಬದಿಗೆ ಸೆರೆಮನೆಯ ಒಬ್ಬ ಅಧಿಕಾರಿಯು ನಿಂತಿರುವದನ್ನು ಕಂಡು, ಅವನ ಹತ್ತಿರ ಹೋಗಿ 'ಸ್ವಾಮಿ, ಇಲ್ಲಿ ಹೆಂಗಸು ಸೆರೆಯಾಳುಗಳನ್ನಿಟ್ಟಿರುವ ಸ್ಥಳ ಯಾವದು? ಮತ್ತು ಅವರನ್ನು ಕಾಣಲಿಕ್ಕೆ ಯಾವಾಗ ಬಿಡುವರೆಂಬುದನ್ನು ದಯವಿಟ್ಟು ಹೇಳುವಿರಾ?' ಎಂದು ಬಹು ಮರ್ಯಾದೆಯಿಂದ ಕೇಳಿದನು. 'ನಿಮಗೆ ಹೆಂಗಸರನ್ನು ಕಾಣಬೇಕಾಗಿದೆ ಏನು?' ಎಂದು ಅವನು ಮರುನುಡಿ ಆಡಿದ. ಡಿಮಿಟ್ರಿಯು ಅಹುದೆಂದನು; 'ಒಳ್ಳೇದು. ಈ ವಿಷಯುವನ್ನು ನೀವು ಮೊದಲೇ ಏಕೆ ತಿಳಿಸಲಿಲ್ಲ? ಎಂದು ಸ್ವಲ್ಪ ಸಿಟ್ಟಿಗೆದ್ದಂತೆ ಮಾಡಿ 'ಈಗ ನಿಮಗೆ ಯಾರನ್ನು ಕಾಣಬೇಕಾಗಿದೆ?' ಎಂದು ವಿಚಾರಿಸಿದನು. ಡಿಮಿಟ್ರಿಯು 'ಕ್ಯಾಟರಿನ್ನ ಮಾಸ್ಲೋವಳನ್ನು' ಅಂದನು.' 'ಹಾಗಾದರೆ ಈ ಮೆಟ್ಟಿಲುಗಳನ್ನು ಹತ್ತಿ ಮೇಲಕ್ಕೆ ಹೋಗಿರಿ, ಎಂದೆನುತ ಒಬ್ಬ ಸಿಪಾಯಿಯನ್ನು ಕರೆದು 'ಇವರನ್ನು ಹೆಂಗಸರ ಭಾಗಕ್ಕೆ ಒಯ್ಯು' ಎಂದು ಹೇಳಿದನು.

ಇದನ್ನು ಕೇಳುವಾಗ ಡಿಮಿಟ್ರಿಗೆ ಹತ್ತರದಲ್ಲಿಯೇ ಯಾರೋ ಬಿಕ್ಕಿಬಿಕ್ಕಿ ಅಳುತ್ತಿರುವ ಹಾಗೆ ಕೇಳಿಸಿತು. ಅಲ್ಲಿಯ ವಾತಾವರಣವೆಲ್ಲವೂ ಡಿಮಿಟ್ರಿಗೆ ಬಹು ಚಮತ್ಕಾರವಾಗಿ ಕಾಣಿಸಿತು. ಎಲ್ಲಕ್ಕಿಂತ ಚಮತ್ಕಾರದ ಮಾತೆಂದರೆ, ಸೆರೆಮನೆಯಲ್ಲಿ ನಡೆಯುವ ದುಷ್ಟ ಕೃತ್ಯಗಳಿಗೆ ಹೊಣೆಗಾರರಿರುವ ಸೆರೆಮನೆಯ ಇನ್ಸಪೆಕ್ಟರ ಮತ್ತು ಜೇಲರರಿಗೆ ತಾನು ಥ್ಯಾಂಕ್ಸ ಕೊಡುವದು; ಆದರೆ ಮಾಡುವದೇನು? ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದುಕೊಳ್ಳುವದು ತಪ್ಪಿದ್ದಲ್ಲವೆಂದು ಸುಮ್ಮನಿದ್ದನು.

ಡಿಮಿಟ್ರಿಯು ಸೀದಾ ಹೆಂಗಸರಿದ್ದ ಭಾಗಕ್ಕೆ ಹೋದನು. ಅಲ್ಲಿ ಹೋದೊಡನೆ ಒಂದು ವಿಶಾಲವಾದ ಕೋಣೆ. ಅದರ ನಡುವೆ ಒಂದು ತಂತಿಯ ಜಾಳಿಗೆಯನ್ನು ಇಳಿಬಿಟ್ಟಿದ್ದರು. ಅಲ್ಲಿ ಗಂಡಸರ ಭಾಗದಲ್ಲಿರುವಷ್ಟು ಕಾಣಲಿಕ್ಕೆಬಂದವರ ಗದ್ದಲ ಇರಲಿಲ್ಲ. ಒದರ್‍ಯಾಟ-ಚೀರ್‍ಯಾಟದ ಗಲಭೆ ಇತ್ತು.

ಆ ಗದ್ದಲದಲ್ಲಿ ಮಾಸ್ಲೋವಳು ಡಿಮಿಟ್ರಿಗೆ ಕಾಣಲಿಲ್ಲ. ಅತ್ತಿತ್ತ ಕಣ್ಣಿಟ್ಟು ನೋಡಿದನು. ಕೊನೆಗೆ, ಆಕೆ ಒಂದು ಮಗ್ಗುಲಿಗೆ ಕಿಡಿಕಿಯ ಹತ್ತರ ನಿಂತಿರುವಂತೆ ಕಾಣಿಸಿತು. ಆಕೆಯನ್ನು ನೋಡಿದೊಡನೆ ಡಿಮಿಟ್ರಿಯ ಎದೆ ಹಾರತೊಡಗಿತು. ಪರೀಕ್ಷೆಯ ಕಾಲ ಬಂತೆಂದು ಅವನಿಗೆ ಗಾಬರಿ ಎನಿಸಿತು. ಆಗ ಆಕೆ ಸೆರೆಮನೆಯ ಉಡುಪಿನಲ್ಲಿರಲಿಲ್ಲ. ಬಿಳಿಯ ಉಡುಪನ್ನು ಹಾಕಿಕೊಂಡು ತನ್ನ ಸೆರೆಮನೆಯ ಒಡತಿಯ ಸಂಗಡ ಮಾತಾಡಿ ನಗುತ್ತಿದ್ದಳು.

ಎಲ್ಲರೂ ತಾವು ಕಾಣಲಿಕ್ಕೆ ಬಂದವರನ್ನು ಅನುಮಾನಿಸದೆ, ಪ್ರೀತಿಯಿಂದ ಕರೆಯುತ್ತಿದ್ದರು. ತಾನು ಮಾಸ್ಲೋವಳನ್ನು ಹೇಗೆ ಕರೆಯಬೇಕು? ‘ ಆಕೆ ತನ್ನಾರೆ ನನ್ನನ್ನು ಕಂಡು ಬರುವಳೇ ಹೇಗೆ? ’ ಎಂದು ತನ್ನೊಳು ತಾನೇ ಯೋಚಿಸತೊಡಗಿದನು. ಮಾಸ್ಲೋವಳು ಡಿಮಿಟ್ರಿಯನ್ನು ಪೂರಾ ಮರೆತು ಬಿಟ್ಟಿದ್ದಳೆಂಬುವ ವಿಷಯ ಹಿಂದೆ ಬಂದಿದೆ. ಇದರಲ್ಲಿ ಎಳ್ಳಷ್ಟು ಸುಳ್ಳು ಇರಲಿಲ್ಲ. ಮಾಸ್ಲೋವಳು ಸೆರೆಮನೆಯಲ್ಲಿದ್ದ ಒಬ್ಬ ಸೆರೆಯಾಳಿನ ದಾರಿ ನೋಡುತ್ತಿದ್ದಳು. ಡಿಮಿಟ್ರಿಯು ತನ್ನನ್ನು ಕಾಣಲಿಕ್ಕೆ ಬಂದಿರುವ ವಿಷಯವು ಆಕೆಯ ಕನಸುಮನಸಿನಲ್ಲಿ ಕೂಡ ಇರಲಿಲ್ಲ. ಅಲ್ಲಿ ನಿಂತಿರುವ ಒಬ್ಬ ವಾರ್ಡರನು ಡಿಮಿಟ್ರಿಯನ್ನು ಕುರಿತು ‘ ನಿಮಗೆ ಯಾರು ಬೇಕು? ’ ಅಂದನು. ಅವನು ‘ ಮಾಸ್ಲೋವಾ ’ ಅಂದನು. ಅದನ್ನು ಕೇಳಿಕೊಂಡು ವಾರ್ಡರನು ಮಾಸ್ಲೋವಳು ಇದ್ದಲ್ಲಿಗೆ ಹೋಗಿ ‘ ಮಾಸ್ಲೋವಾ? ಯಾರೋ ನಿಮ್ಮನ್ನು ಕಾಣಬೇಕೆನ್ನುವರು ’ ಎಂದು ಹೇಳಿದ. ಆಕೆ ಬಲು ಉತ್ಸುಕತೆಯಿಂದ ತನ್ನ ಕತ್ತನ್ನು ಹಿಂದು ಮುಂದೆ ಅಲ್ಲಾಡಿಸುತ್ತಲೂ ನಿಟ್ಟಿಸಿ ನಿಟ್ಟಿಸಿ ನೋಡುತಲೂ ಮೆಲ್ಲಗೆ ತಂತಿಯ ಜಾಳಿಗೆಯ ಹತ್ತಿರಕೆ ಬಂದು, ಅಚ್ಚರಿಗಣ್ಣಿನಿಂದ ಡಿಮಿಟ್ರಿಯನ್ನೂ, ಅವನ ಸಿರಿವಂತಿಕೆಯ ಉಡುಪನ್ನೂ ಕಂಡು ಮುಗುಳುನಗು ನಕ್ಕಳು.

‘ ನನ್ನನು ಕಾಣಬೇಕಾಗಿದೆ ಏನು? ಎಂದು ವಿಚಾರಿಸುತ ಅವನ ಹತ್ತಿರಕ್ಕೆ ಮುಖ ತಂದಳು. ಆ ಚಿವಗಣ್ಣು ಕಂಡು ಡಿಮಿಟ್ರಿಯ ಎದೆ ಝಲ್ಲೆಂದಿತು. ಅವನು ಬೆಪ್ಪನಾಗಿ ನಾ....ನಾ....ನಾನು. ನಿನ್ನ ಭೆಟ್ಟಿಗೆ ಬಂದಿದ್ದೆ ಎಂದು ವಾಡಿಕೆಯಂತೆ ನುಡಿದನು. ಅವರಿಬ್ಬರು ಸ್ವಲ್ಪ ಅಂತರದ

ಮೇಲಿದ್ದುದರಿಂದ ಡಿಮಿಟ್ರಿಯು ಅಂದದ್ದು ಮಾಸ್ಲೋವಳಿಗೆ ಕೇಳಿಸಲಿಲ್ಲ; ಆದರೆ, ಅವನು ಮಾತಾಡುತ್ತಿರುವಾಗಿನ ಅವನ ಮುಖಚರ್ಯೆ ಮುಂತಾದ್ದನ್ನು ಲಕ್ಷಿಸಿದಾಗ, ಆಕೆಗೆ ಏನೋ ನೆನಪಾಯಿತು; ಆದರೆ ಅದನ್ನೆಲ್ಲ ನೆನಿಸಿಕೊಳ್ಳುವ ಮನಸಾಗಲಿಲ್ಲ. ಆಗ ಆಕೆಯ ಮುಖದ ಮೇಲೆ ನಲಿದಾಡುತಲಿದ್ದ ನಗುವು ಮಾಯವಾಗಿ, ಮುಖವೆಲ್ಲ ಜರ್ರನೇ ಇಳಿದು ದುಃಖದಿಂದ ತುಂಬಿರುವಂತೆ ನಿಚ್ಚಳವಾಗಿ ಕಣ್ಣುಗಳಲ್ಲಿ ಹುಬ್ಬುಗಳಲ್ಲ ಅದರ ನೆರಳು ಕಂಡಿತು. ಸಿಡುಕಿನಿಂದ ಹುಬ್ಬುಗಂಟ್ಟಿಕ್ಕಿ ಆಕೆ 'ನೀವು ಮಾತನಾಡುವದು ನನಗೆ ಕೇಳಿಸಲಿಲ್ಲ.' ಅಂದಳು.

ಡಿಮಿಟ್ರಿಯು 'ನಾನು, ನಾನು ಬಂದಿರುವೆ' ಹೀಗೆ ಅನ್ನಅನ್ನುವದರೊಳಗೆ ಅವನ ಕಣ್ಣುಗಳಿಂದ ನೀರು ದಳದಳ ಉದುರಹತ್ತಿದವು; ಗಂಟಲ ಸಿರಗಳು ಬಿಗಿದು ಬಿಕ್ಕಿಬಿಕ್ಕಿ ಅಳುವಂತಾಯಿತು. ಆದರ ಆವೇಗವನ್ನು ತಡೆಯಲಿಕ್ಕಾಗದೆ, ತಂತಿಯ ಜಾಳಿಗೆಯನ್ನು ಕೈಯಿಂದ ಹಿಡಿದುಕೊಂಡು ದುಃಖಿಸಹತ್ತಿದನು. ಇದನ್ನು ಮಾಸ್ಲೋವಳು ಕಂಡು ಅವನನ್ನು ಗುರುತಿಸಿದಂತೆ ಮಾಡಿ, 'ನಿಮ್ಮನ್ನು ಎಲ್ಲಿಯೋ?' ಹೀಗೆಂದು ತುಟಿಯಮೇಲೆ ಬಟ್ಟಿಟ್ಟು, ಸ್ವಲ್ಪ ಧೇನಿಸಿಕೊಂಡು 'ಅಲ್ಲ, ಅಲ್ಲ! ನೆನಪಾಗಲೊಲ್ಲದು' ಹೀಗಂದಳು; ಆದರೆ ಆಕೆಯ ಮುಖಮಾತ್ರ ಹೆಚ್ಚು ಉದಾಸೀನವಾಯಿತು.

ಡಿಮಿಟ್ರಿಯು ತನ್ನ ದುಃಖವನ್ನು ನುಂಗಿಕೊಂಡು 'ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳಲಿಕ್ಕೆ ನಾನೀಗ ಬಂದಿರುವೆ' ಎಂದು ಸ್ವಲ್ಪ ದನಿ ಎತ್ತರಿಸಿ ನುಡಿದನು. ಇದನ್ನು ಕೇಳಿ ಮಾಸ್ಲೋವಳು ಕಕ್ಕಾವಿಕ್ಕಿಯಾಗಿ ಸುತ್ತುಮುತ್ತು ಹೀಗೆ ನೋಡಿದಳು. ಇಷ್ಟರಲ್ಲಿ ಡಿಮಿಟ್ರಿಯು ತನ್ನ ನಾಚಿಕೆಯನ್ನು ಬೈಲಿಗೆ ಹಾಕುವ ಉದ್ದೇಶದಿಂದಲೇ 'ಕ್ಷಮಿಸು, ನಾನು ನಿನಗೆ ಮಿತಿಮೀರಿ ಅನ್ಯಾಯ ಬಗೆದಿರುವೆ' ಎಂದು ಗಟ್ಟಿಯಾಗಿ ನುಡಿದನು. ಆಕೆ ಅವನನ್ನೇ ಮಿಕಿಮಿಕಿ ನೋಡುತ್ತ ಸ್ತಬ್ಧಳಾಗಿ ನಿಂತಳು. ಡಿಮಿಟ್ರಿಗೆ ಅಳು ಒತ್ತರಿಸಿತು. ಬಾಯಿಂದ ಮಾತುಗಳು ಹೊರಡದಾದವು; ಕರವಸ್ತ್ರದಿಂದ ಮೂಗು ಒರಸಿಕೊಳ್ಳುತ್ತ ಹೊರಗೆ ಬಂದನು. 'ಯಾಕೆ ಹೊರಗೆ ಬಂದಿರಿ? ಮಾತನಾಡುವದಾಯಿತೆ?' ಎಂದು ಇನ್ಸಪೆಕ್ಟರನು ಕೇಳಿ 'ನಿಮಗೆ ಅವಶ್ಯವಿದ್ದರೆ, ಆಕೆಯು

ಕೆಲಹೊತ್ತು ನಿಮಗೆ ಹೊರಗೆ ಭೆಟ್ಟಿಯಾಗುವಂತೆ ವ್ಯವಸ್ಥೆ ಮಾಡಿಸುವೆನು' ಅಂದು, ವಾರ್ಡರನ ಕಡೆಗೆ ಹೊರಳಿ, 'ಮಾಸ್ಲೋವಳನ್ನು ಹೊರಗೆ ಕರಕೊಂಡುಹೋಗು.' ಎಂದನು.

ಒಂದೆರಡು ನಿಮಿಷಗಳಲ್ಲಿ ಮಾಸ್ಲೋವಳು ಹೊರಗೆ ಬಂದಳು; ಡಿಮಿಟ್ರಿಯ ಹತ್ತಿರ ಹೋಗಿ, ಅವನನ್ನು ದಿಟ್ಟಿಸಿನೋಡಿದಳು; ಇಬ್ಬರೂ ಸಮೀಪದಲ್ಲಿರುವ ಖುರ್ಚಿಯ ಮೇಲೆ ಕುಳಿತರು. ನೀವು ಮಾತಾಡಬಹುದೆಂದು ಇನ್ಸಪೆಕ್ಟರನು ಹೇಳಿ ಹೊರಗೆ ನಡೆದನು. ಡಿಮಿಟ್ರಿಯು ಮಾತಿಗೆ ಮೊದಲು ಮಾಡಿ 'ನೀನು ನನ್ನನ್ನು ಕ್ಷಮಿಸುವದು ಸಾಧ್ಯವಿಲ್ಲವೆಂಬದನ್ನು ನಾನು ಬಲ್ಲೆ' ಹೀಗೆಂದು ಅಳುತ್ತ ನುಡಿದು, ಸ್ವಲ್ಪ ನಿಂತಂತೆ ಮಾಡಿ, 'ಹಿಂದೆ ಆದದ್ದಾಗಿ ಹೋಯಿತು; ಈಗ ನಿನ್ನ ದೆಸೆಯಿಂದ ನನ್ನ ಕೈಯಿಂದ ಆಗುವದನ್ನು ತಪ್ಪದೆ ಮಾಡುವೆ. ಏನು ಮಾಡಲಿ ಹೇಳು' ಅಂದನು.

ಆತನ ಕಡೆಗೆ ಕೊಂಚ ಕಣ್ಣಿಸಿಂದ ನೋಡಿ 'ನಾನು ಇಲ್ಲಿರುವದನ್ನು ಹೇಗೆ ಗೊತ್ತುಹಚ್ಚಿದಿರಿ!' ಎಂದಳು. ಆಕೆಯ ಕಣ್ಣು ತಪ್ಪಿಸಿ ಕೆಳಗೆ ನೋಡುತ್ತ ಡಿಮಿಟ್ರಿಯು 'ನಿನಗೆ ಶಿಕ್ಷೆಕೊಟ್ಟ ಜ್ಯೂರರಲ್ಲಿ ನಾನೂ ಇದ್ದೆ; ಆಗ ನಿನಗೆ ನನ್ನ ಗುರ್ತು ಹತ್ತಲಿಲ್ಲವೇ?' ಅಂದನು. 'ಇಲ್ಲ. ಆಗ ನನಗೆಲ್ಲಿ ಅಷ್ಟು ಅವಸರ! ನಾನು ನಿಮ್ಮನ್ನು ನೋಡಲಿಲ್ಲ ಕೂಡ!' ಅಂದಳು. ನಿನಗೊಂದು ಮಗು ಇದ್ದಿಲ್ಲವೇ? ಅದೇನಾಯಿತು?' ಅಂದನು. 'ಆಗಲೇ ಸತ್ತುಹೋಯಿತು ಅದು!' ಎಂದು ಸಿಟ್ಟಿನಿಂದ ಮುಖ ತಿರುಗಿಸಿ ನುಡಿದಳು.

"ಒಳ್ಳೇದು. ನಿನ್ನನ್ನು ನನ್ನ ಸೋದರತ್ತೆಂದಿರು ಅದೆಂತು ಹೊರಗೆ ಹಾಕಿದರು?" ಎಂದು ಹಿಂದಿನ ವಿಚಾರ ಕೇಳಿದನು. 'ಮಕ್ಕಳಾದ ಮೇಲೆ ಯಾರು ಯಾರನ್ನು ಇಟ್ಟುಕೊಳ್ಳುವರು? ಅವರು ಆಗಲೇ ನನ್ನನ್ನು ಹೊರಗೆ ಅಟ್ಟಿದರು! ಏನೋ ಆಗಿಹೋಯಿತು. ಆಗಿಹೋದದ್ದನ್ನು ಚಿಂತಿಸಿ ಫಲವೇನು! ಮೇಲಾಗಿ, ಅದೇನೂ ನನಗೆ ನೆನಪೇ ಆಗುವದಿಲ್ಲೀಗ.' ಹೀಗೆಂದು ಸುಮ್ಮನಾದಳು. 'ಅದೇನಿಲ್ಲ. ಆದದ್ದಾಗಿ ಹೋಗಿರಬಹುದು; ನಾನು ಮಾತ್ರ ನನ್ನ ಪಾಪಕ್ಕಾಗಿ ಪ್ರಾಯಶ್ಚಿತ್ತ ತೆಗೆದುಕೊಳ್ಳದೆ ಬಿಡಲಾರೆ.' ಎಂದು ಬಹು

ಅಂತಃಕರಣದಿಂದ ಡಿಮಿಟ್ರಿಯು ನುಡಿದು ಆಕೆಯ ಮುಖವನ್ನೇ ನೋಡ ತೊಡಗಿದನು. 'ಪ್ರಾಯಶ್ಚಿತ್ತ ತೆಗೆದುಕೊಂಡೇನು ಮಾಡುವದು? ಆದದ್ದಾಗಿ ಹೋಯಿತು.' ಹೀಗೆಂದು ಹಿಂದಿನದನ್ನು ನೆನಪು ಮಾಡಿಕೊಂಡಂತೆಲ್ಲ ಆಕೆಯ ಹೃದಯಕ್ಕೆ ಬರೆಕೊಟ್ಟಷ್ಟು ನೋವಾಗ ತೊಡಗಿತು. ಬಡಪ್ರಾಣಿಗಳು ತಮ್ಮ ಕೈಗೆ ಸಿಕ್ಕರೆ ಜನರು ಅವರ ಉಪಯೋಗವನ್ನು ಎಷ್ಟು ನಿರ್ದಯದಿಂದ ಮಾಡಿಕೊಂಡು ತಮ್ಮ ಕೆಲಸ ಮುಗಿದ ಮೇಲೆ ಅವರನ್ನು ಹೇಗೆ ಕಸಕ್ಕೆ ಕಡೆಯಾಗಿ ಕಾಣುವರೆಂಬುದನ್ನು ನೆನೆ ನೆನೆಸಿಕೊಂಡು ನಿಟ್ಟುಸಿರು ಬಿಟ್ಟು, ' ಆಯಿತು. ಏನೋ ಆಗಿಹೋಯಿತು. ಇನ್ನೇನು? ನನ್ನ ಖೋಡಿ ಹಣೆ ಬರಹಕ್ಕಂತು ಸೈಬೀರಿಯದಲ್ಲಿದ್ದು ಕಾಲನೂಕುವ ಹೊತ್ತು ಬಂದಿತು.' ಹೀಗನ್ನುವಾಗ ದುಃಖದ ಬಿರುಗಾಳಿಯಿಂದ ಆಕೆಯ ತುಟಿಗಳು ನಡುಗಿದವು. ಡಿಮಿಟ್ರಿಯು ' ನನಗೆ ಗೊತ್ತಿದೆ. ನಿನ್ನ ಕಡೆ ಎಷ್ಟೂ ತಪ್ಪಿಲ್ಲ ಎಂಬುದು!' ಅಂದನು.

' ತಪ್ಪೇ! ಅದಂತೂ ಇಲ್ಲೇ ಇಲ್ಲ; ಆದರೆ ಅವರು ನನ್ನನ್ನು ಕಳ್ಳರಂತೆ ಕಾಣುತ್ತಾರಲ್ಲ! ಅದಕ್ಕೇನು ಮಾಡುವದು. ಅಪೀಲೇನೋ ಮಾಡಬೇಕು; ಆದರೆ ಅದು ಖರ್ಚಿನ ಕೆಲಸ.

' ನಿಜವಾಗಿಯೂ ನೀನಂದಂತೆ, ನಾನಾಗಲೇ ಒಬ್ಬ ವಕೀಲನನ್ನು ಈ ವಿಷಯವಾಗಿ ಕೇಳಿಬಂದಿರುವೆ. ನಾನಂತೂ ನನ್ನ ಕೈಲಾದುದನ್ನು ತಪ್ಪದೆ ಮಾಡುವೆ. ' ಡಿಮಿಟ್ರಿಯು ಅಂದನು.

' ಒಳ್ಳೇದು ' ನಾನು ಈಗ ನಿಮಗೊಂದು ಮಾತು ಕೇಳುವೆ. ನನಗೆ ಸ್ವಲ್ಪ ಹಣ ಬೇಕಾಗಿದೆ. ಬಹಳೇನಿಲ್ಲ....ಏನೋ ಎಂಟುಹತ್ತು ರೂಪಾಯಿ ' ಎಂದು ಅವನನ್ನು ಸಂಕೋಚದೃಷ್ಟಿಯಿಂದ ನೋಡುತ್ತ ಕೇಳಿದಳು.

' ಹೋ. ಹೋ. ಅಗತ್ಯ ಕೊಡುತ್ತೇನೆ. ' ಹೀಗೆಂದು ಲಗುಬಗೆಯಿಂದ ಡಿಮಿಟ್ರಿಯು ತನ್ನ ಎರಡೂ ಕೈಗಳಿಂದ ಕೋಟಿನ ಜೇಬುಗಳಲ್ಲಿ ಕೈಹಾಕ ಹತ್ತಿದನು.

ಮಾಸ್ಲೋವಳು ಹೊರಗಿಂದ ಇನ್ಸಪೆಕ್ಟರನು ಬರುವದನ್ನು ಕಂಡು 'ಇವನ ಮುಂದೆ ರೂಪಾಯಿ ಕೊಡಬೇಡಿ. ಇವನೇ ಇಸಕೊಂಡು ಎತ್ತಿ ಹಾಕಬಹುದು.' ಎಂದು ಮೆಲ್ಲಗೆ ಆಡಿದಳು.

ಆದುದರಿಂದ ಆಕೆಯ ಕೈಯಲ್ಲಿಡಬೇಕೆಂದಿದ್ದ ನೋಟವನ್ನು ಡಿಮಿಟ್ರಿಯು ತನ್ನ ಮುಟ್ಟಿಗೆಯಲ್ಲಿಯೇ ಮುಚ್ಚಿಕೊಂಡನು. ಮಾಸ್ಲೋವಳಿಗೆ ಆ ನೋಟು ಮುಚ್ಚಿದ್ದ ಮುಟ್ಟಿಗೆಯ ಮೇಲೆಯೇ ಎಲ್ಲಾ ಕಣ್ಣು. ಡಿಮಿಟ್ರಿಯು ಆಕೆಯ ಮುಖದ ಮತ್ತು ಕಣ್ಣಿನ ಚಟುವಟಿಕೆಗಳನ್ನೇ ಸಿರುಕಿಸುತ್ತಿದ್ದ. ಒಂದಾನೊಂದು ಕಾಲಕ್ಕೆ ಮುದ್ದುಮುದ್ದಾಗಿರುವ ಮಾಟಮುಖವೆಲ್ಲ ಇಂದು ಕೆಟ್ಟು ಉಬ್ಬಿ, ಅಂದಗೆಟ್ಟಿದೆ; ಆಗ ಕಣ್ಣುಗಳಲ್ಲಿ ಹೊಳೆಯುತಲಿದ್ದ ಆ ನಿರ್ದುಷ್ಟವಾದ ಪ್ರೇಮದ ಬೆಳಕು ಅಡಗಿ, ಅಲ್ಲಿ ಆಸೆ-ಮೋಸದ ಕೆಟ್ಟ ನೆರಳು ಕಾಣಿಸುತ್ತದೆ; ಒಟ್ಟಾರೆ, ಮೊದಲಿನ ಮುದ್ದು ಕಟೂಷಳು ಇಂದು ಸತ್ತಿರುವಳು, ಹೀಗೆಂದು ಡಿಮಿಟ್ರಿಯು ತನ್ನೊಳಗೆ ತಾನು ಅಂದುಕೊಳ್ಳುತ್ತಿರುವಾಗ ಒಳದನಿಯು 'ನೀನು ಈಕೆಯನ್ನು ಮದುವೆಯಾದರೆ ತೀರಿತು. ನೀನು ಕೊರಳಿಗೆ ಕಲ್ಲು ಕಟ್ಟಿಕೊಂಡು ನೀರೊಳಗೆ ಮುಳುಗಿದಂತೆಯೇ ಸೈ; ಆ ಮೇಲೆ ಪರರಿಗೆ ಉಪಕಾರ ಮಾಡಬೇಕೆನ್ನುವ ನಿನ್ನ ವಿಚಾರವು ಮೂಲೆಗುಂಪಾಯಿತೆಂತಲೇ ತಿಳಿ! ಆದುದರಿಂದ ನೀನು ಆಕೆಯ ಆಶೆ ಮಾಡದೆ, ನಿನ್ನ ಬಳಿ ಇದ್ದ ಬಿದ್ದ ಹಣವನ್ನೆಲ್ಲ ಕೊಟ್ಟು ಬಿಟ್ಟು, ಬಹುದಿನದ ಈ ಪಿಡುಗಿನಿಂದ ಒಮ್ಮೆ ಪಾರಾಗು' ಎಂದು ಕಿರುನುಡಿಯಿತು.

ಏನು ಮಾಡಬೇಕೆಂಬುದು ತಿಳಿಯದೆ ಅಂತರಾಳದಲ್ಲಿಯೇ ತೂಗಾಡುತಿದ್ದ ಮನಸನ್ನು ಸ್ತಿಮಿತಕ್ಕೆ ತಂದುಕೊಂಡು, ತಾನು ಬಂದುದರ ಕಾರಣ ಮುಂತಾದ ಸಂಗತಿಗಳನ್ನು ಆಕೆಯ ಮುಂದೆ ತೋಡಿಕೊಳ್ಳಬೇಕೆಂದು ನಿಶ್ಚಯಿಸಿ, 'ಕಟೂಷಾ? ನೀನು ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳಲಿಕ್ಕೆ ನಾನು ಬಂದಿರುವೆನೆಂದು ಹೇಳಿದರೂ ಅದಕ್ಕೆ ನೀನು ಉತ್ತರವನ್ನೇ ಕೊಡಲಿಲ್ಲವಲ್ಲ! ನನಗೆ ಅಭಯವಚನ ಕೊಡುವಿಯಷ್ಟೇ! ಎಂದು ಆಕೆಯ ಮುಖವನ್ನೇ ನೋಡಹತ್ತಿದ. ಆವನ ಮಾತಿನ ಕಡೆಗೆ ಕಟೂಷಳ ಮನಸಿರಲಿಲ್ಲ; ಆಕೆಯ ಆಸೆಯೆಲ್ಲ ಡಿಮಿಟ್ರಿಯು ಮುಷ್ಟಿಯಲ್ಲಿ ಹಿಡಿದ ನೋಟಿನ

ಮೇಲೆ; ಮತ್ತು ತಾನು ಅದನ್ನು ತೆಗೆದುಕೊಳ್ಳುವದು ಇನ್ಸಪೆಕ್ಟರನ ಕಣ್ಣಿಗೆ ಬೀಳಬಾರದೆಂದು ಇನ್ಸಪೆಕ್ಟರನನ್ನೂ ಒಮ್ಮೊಮ್ಮೆ ನೋಡುವಳು. ಇನ್ಸಪೆಕ್ಟರನು ಸ್ವಲ್ಪ ಅತ್ತ ಮುಖ ತಿರುವಿದೊಡನೆ ನೋಟು ಎಲ್ಲಾದರೂ ಓಡಿ ಹೋಗುತ್ತದೇನೋ ಅನ್ನುವ ಹಾಗೆ ಆಕೆ ಅವನ ಮುಟ್ಟಿಗೆಯಿಂದ ಭರಕ್ಕನೆ ಬಿಡಿಸಿಕೊಂಡು ತನ್ನ ಟೊಂಕದಲ್ಲಿ ಬಚ್ಚಿಟ್ಟುಕೊಂಡಳು. ಆಕೆಯ ಈ ಆಸೆ ಬುರಕ ಸ್ಥಿತಿಯನ್ನು ನೋಡಿ ಡಿಮಿಟ್ರಿಗೆ ಬಹು ವ್ಯಸನವಾಯಿತು. ಈಕೆಯನ್ನು ಈಗಿನ ದುಃಸ್ಥಿತಿಯಲ್ಲಿ ಇರಗೊಡದೆ ಮೊದಲಿನ ಆ ಸ್ಪೃಹಣೀಯ ಸ್ಥಿತಿಯ ಎಚ್ಚರ ಮಾಡಿಕೊಡಬೇಕು; ಈಕೆ ಮೊದಲಿನ ಕಟೂಷಳಾಗಬೇಕೆಂದು ಆವನ ಹಂಬಲ; ಆದುದರಿಂದ ಡಿಮಿಟ್ರಿಯು 'ಕಟೂಷಾ? ನೀನು ಮೊದಲಿನಂತಾಗಬೇಕೆಂದು ನನ್ನ ಬಯಕೆ, ಮತ್ತು ಅದನ್ನು ಪೂರೈಸುವದು ನಿನ್ನ ಕೆಲಸ. ಇನ್ನು, ನಿನ್ನನ್ನು ಒಳ್ಳೇ ಸ್ಥಿತಿಯಲ್ಲಿರಿಸಿ, ನಾನು ನನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕೆನ್ನುವೆ. ಇಷ್ಟಂದು ಇನ್ನು ಆಕೆಯನ್ನು ಮದುವೆಯಾಗುವ ತನ್ನ ಅಪೇಕ್ಷೆಯನ್ನು ಆಡಿತೋರಿಸಬೇಕೆಂಬುವಷ್ಟರಲ್ಲಿ, ಅವನು ಆಕೆಯ ಮುಖವನ್ನು ಓರೆಗಣ್ಣಿನಿಂದ ನೋಡಿದನು. ಅವನಿಗೆ ಹೆದರಿಕೆ ಆಯಿತು. ಬಾಯಿಂದ ಮಾತುಗಳೇ ಹೊರಡಲಿಲ್ಲ. ನಾಲಿಗೆಯು ಒಳಸಿಕ್ಕಿಕೊಂಡಿತು.

ಇಷ್ಟರಲ್ಲಿ ಇನ್ಸಪೆಕ್ಟರನು ಒಳಕ್ಕೆ ಬಂದು 'ಹುಂ. ಹೊತ್ತಾಯಿತು' ಅಂದನು. 'ಒಳ್ಳೇದು. ನಿನಿಗಿನ್ನೂ ಅನೇಕ ಮಾತು ಹೇಳುವದಿದೆ; ಆದರೆ ಹೊತ್ತಾಯಿತು.' ಎಂದು ತನ್ನ ಕೈ ಮುಂದೆ ಚಾಚಿದನು. ಕಟೂಷಳು ಬಹು ವಿನಯದಿಂದೆದ್ದು ನಿಂತು, ಆತನ ಕೈ ಹಿಡಿದು ಮೆಲ್ಲಗೆ ಅಲ್ಲಾಡಿಸಿದಳು; ಆದರೆ, ಅದರಲ್ಲಿ ಪ್ರೇಮದ ಪ್ರವಾಹವಿರದ್ದರಿಂದ, ಮನಸಿಗೆ ವ್ಯಸನವಾಯಿತು. ಡಿಮಿಟ್ರಿಯು 'ನಾನು ಇನ್ನೊಮ್ಮೆ ಬಂದು ನಿನ್ನ ಕಾಣುವೆ. ಆಗ ಸಾಕಷ್ಟು ಮಾತನಾಡೋಣ. ಇನ್ನೂ ಹಲವು ಮಹತ್ವದ ಮಾತುಗಳನ್ನು ಹೇಳಬೇಕಾಗಿದೆ ನಿನಗೆ' ಅಂದನು. 'ಹಾಗಾದರೆ, ಬನ್ನಿರಿ!' ಎಂದು ಎಲ್ಲರೊಡನೆ ನಗುವಂತೆ ಮೇಲ್ಮೇಲೆ ನಕ್ಕು ಹೊರಟಳು.

ಕಟೂಷಳನ್ನು ಕಾಣುವ ಮುಂಚೆ ಡಿಮಿಟ್ರಿಗೊಂದು ವಿಚಿತ್ರ ಮೋಹ; ಅದೇನಂದರೆ, ತಾನು ಆಕೆಯನ್ನು ಕಂಡು ಮಾತನಾಡಿ, ಆಕೆಯ ಸಲುವಾಗಿ ತನ್ನ ಜನ್ಮವನ್ನೇ ಒಲಾಗಿಡುವ ವಿಷಯ ತಿಳಿಸಿದರೆ, ಆಕೆ ಹಿಗ್ಗಿ, ಮತ್ತೆ ಮೊದಲಿನ ಕಟೂಷಳೇ ಆಗುವಳೆಂದು; ಆದರೆ ಆ ಕಲ್ಪನೆಯ ಸೃಷ್ಟಿಯಿಂದ ದೃಶ್ಯಸೃಷ್ಟಿಗೆ ಇಳಿದು ಬಂದು, ಪ್ರತ್ಯಕ್ಷವಾಗಿ ತನ್ನ ಬಗ್ಗೆ ಆಕೆಯ ಮುಖ ಚರ್ಯೆ, ನೋಟ-ಭಾವನೆ ಮುಂತಾದವುಗಳು ನೆನಪಿಗೆ ಬಂದೊಡನೆ ಅವನೆದೆ ಝುಲ್ಲೆಂದಿತು. ಒಲಿದವರ ಕಣ್ಣು ಬಲು ಚುರುಕು. ಇನ್ನು ಆ ಹಿಂದಿನ ಮೃದುಮಧುರಳಾದ ಕಟೂಷಳನ್ನು ಕಾಣುವದು ಸಾಧ್ಯವಿಲ್ಲ. ಅದೇನೋ ಒಂದು ಸ್ವಪ್ನಸೃಷ್ಟಿ ಆಗಿಹೋಯಿತು, ಹೀಗೆಂದು ಹತಾಶನಾದನು.

ಡಿಮಿಟ್ರಿಯು ಕಟೂಷಳೊಡನೆ ಮಾತನಾಡುವಾಗ ತನ್ನ ಈಗಿನ ದುರ್ದೆಸೆಯ ಬಗ್ಗೆ ಆಕೆ ನಾಚಿಕೊಳ್ಳಬಹುದಾಗಿತ್ತು. ಆದರೆ, ಆಕೆಯ ಮುಖದಲ್ಲಿ ಆ ಬಗೆಯ ಯಾವ ಲಕ್ಷಣವೂ ತೋರಲಿಲ್ಲ; ತಿರುಗಿ ಆಕೆ ತೃಪ್ತಿಯಿಂದಲೂ ಗರುವಾಯಿಯಿಂದಲೂ ಉಬ್ಬಿರುವ ಹಾಗೆ ಕಂಡಳು. ಇದು ಬಲುಮಟ್ಟಿಗೆ ಡಿಮಿಟ್ರಿಗೆ ಅಚ್ಚರಿಯನ್ನುಂಟು ಮಾಡಿತು. ಮನುಷ್ಯನು ಯಾವ ಸ್ಥಿತಿಯಲ್ಲಿದ್ದರೂ, ತಾನು ಶ್ರೇಷ್ಠನೂ ಒಳ್ಳೆಯವನೂ ಇರುವನೆಂದೇ ಪ್ರತಿಯೊಬ್ಬರಿಗೆ ಮನವರಿಕೆ ಮಾಡಿಕೊಡುತ್ತಿರುತ್ತಾನೆ; ಕೆಲವರಾದರೂ ಕೆಲ ವೇಳೆಯಲ್ಲಿ ಅವನಿಗೆ ಮಹತ್ವ ಕೊಡದಿದ್ದರೆ, ಅವನು ಜೀವಂತನಾಗಿ ಇರಲಿಕ್ಕೇ ಸಾಧ್ಯವಿಲ್ಲ. ಕಳ್ಳರು, ಕೊಲೆಗಡಕರು, ಗುಪ್ತಚಾರರು, ಸೂಳೆಯರು ಇವರೆಲ್ಲರಿಗೆ ತಮ್ಮ ಕಸಬು ಬಲು ಹೀನವೆಂದು ನಾಚಿಕೆಯಾಗುತ್ತಿರಬಹುದು; ಆದರೆ ಅದು ಯಾವಾಗ? ಸಜ್ಜನರ ಸಹವಾಸವೆಂಬ ಬೆಳಕಿಗೆ ಬಂದಾಗ. ಇಂಥವರು ಯಾವಾಗಲೂ ಕತ್ತಲೆಯಲ್ಲಿಯೇ ಅಡಗಿಕೊಂಡು ತಮ್ಮ ದುಷ್ಕರ್ಮ ನಡಿಸಿ, ತಮ್ಮದೊಂದು ಸಮಾಜವನ್ನೇ ಮಾಡಿಕೊಂಡಿರುವದರಿಂದ ಬಾಳಿಕೊಂಡಿರಲಿಕ್ಕೆ ಧೈರ್ಯಗೊಳ್ಳುವರು ಮತ್ತು ಅವರು ತಮ್ಮ ಜಾತಿಯ ಜನರ ಮುಂದೆ ತಮ್ಮ ತಮ್ಮ ಕಸಬುಗಳಲ್ಲಿ ತಾವು ತೋರಿಸುವ

ಅಥವಾ ತೋರಿಸಿದ ಠಕ್ಕುಠವಳಿತನ, ನೀಚತನ, ಮುಂತಾದವುಗಳನ್ನು ಕುರಿತು ಬಡಾಯಿಕೊಚ್ಚುವರು; ಆದರೆ ಸಿರಿವಂತರು ತಾವು ದುಡ್ಡುಗಳಿಸಿದ ಪರಿಯನ್ನು ಕುರಿತು ಬುರುಡೆ ಉರುಳಿಸುತ್ತಿರುವಾಗ ನಾವು ಇದೇ ದೃಶ್ಯ ವನ್ನು ಕಾಣುವದಿಲ್ಲವೇ? ಸೇನಾನಾಯಕರು ತಾವು ಸೈನಿಕರ ರುಂಡಗಳ ಚೆಂಡಾಡಿ ಗೆಲವನ್ನು ಗಳಿಸಿದಕ್ಕಾಗಿ ತಮ್ಮ ಬೆನ್ನು ತಾವೇ ಚಪ್ಪರಿಸಿಕೊಳ್ಳು ವದನ್ನು ನಾವು ನೋಡಿಲ್ಲವೇ? ಇಂಥ ಸಮಯಗಳಲ್ಲಿ ನಮಗೆ ಕೆಡಕೆನಿಸದೆ, ಒಂದು ಬಗೆಯ ಗೌರವವೇ ಅನಿಸುವದು. ಇದಕ್ಕೆ ಕಾರಣವೇನಂದರೆ, ಇಂಥ ಜನರ ಸಂಖ್ಯೆಯೇ ಜಗತ್ತಿನಲ್ಲಿ ಹೆಚ್ಚಿಗಿದ್ದು, ನಾವೂ ಅದೇ ಜಾತಿಗೇ ಸಂಬಂಧಿಸಿರುವದರಿಂದ ನಮಗೆ ಆ ಮಾತುಗಳು ರುಚಿಸುತ್ತವೆ; ಮಾಸ್ಲೋ ವಳಂಥವರ ಮಾತುಗಳು ರುಚಿಸುವದಿಲ್ಲ. ಈ ಮೇರೆಗೆ, ಮಾಸ್ಲೋವಳು ತನ್ನ ಜೀವನದ್ದೊಂದು ದಾರಿ, ತನ್ನ ಗುಂಪು, ತನ್ನದೊಂದು ವಿಶಿಷ್ಟ ಯೋಗ್ಯತೆ ಇವುಗಳನ್ನು ದೃಢಪಡಿಸಿಕೊಂಡಿದ್ದಳು. ತನ್ನ ಚಳ್ವಿಕೆಗೆ ವೇಶ್ಯಾಸೃಷ್ಟಿಯಲ್ಲಿ ಒಂದು ಉಚ್ಚ ಸ್ಥಾನವಿದ್ದು, ಅದಕ್ಕೆ ಮೆಚ್ಚಿ ಮರುಳಾಗಿ ಸಣ್ಣವರು, ದೊಡ್ಡವರು, ಕಲಿತವರು, ಕಲಿಯದವರು, ಸಾವುಕಾರರು ಒಡವರು ತನ್ನ ಕಡೆಗೆ ಬಂದೇಬರುತ್ತಾರೆಂದು ಆಕೆಗೆ ತುಂಬಾ ಮನವರಿಕೆ. ತನ್ನ ಬಾಲ್ಯ ದಿಂದಲೂ ಇಂದಿನವರೆಗೆ ಜಗದ ನೀತಿಯನ್ನವಲೋಕಿಸಿದರೆ, ಡಿಮಿಟ್ರಿಯಿಂದ ಮೊದಲು ಮಾಡಿಕೊಂಡು ಪೋಲೀಸ ಆಫೀಸರ ಜೇಲರವರೆಗೆ ಎಲ್ಲರೂ ತನ್ನನ್ನು ಅಪೇಕ್ಷಿಸುವವರೇ! ಅಂದಮೇಲೆ, ಈ ಜಗತ್ತಿಗೆ ಹಿಡಿದಿರುವ ಹೆಣ್ಣಿನ ಹುಚ್ಚಿಗೆ ಪಾರವಿಲ್ಲ. ಹೆಣ್ಣಿನಾಸೆಗೆಬಿದ್ದ ಜಗತ್ತು, ಕಳವು, ತುಡುಗು, ಮೋಸ, ಹಿಂಸೆ, ಇಂಥವುಗಳನ್ನು ಮಾಡಲಿಕ್ಕೆ ಹೇಸುವದಿಲ್ಲ; ಹಾಗಾದರೆ, ನಾನು ಹಿಡಿದಿರುವ ದಾರಿಯು ಕೆಟ್ಟೆಂದು ಹೇಳುವದೆಂತು? ಈ ಅಸೆಬುರುಕ ಜಗದೊಳಗೆ ನನಗೂ ಒಂದು ಮಹತ್ವದ ಸ್ಥಾನವಿದೆ ಎಂದು ಸಮಾಧಾನಪಡು ತ್ತಿದ್ದಳು. ಈ ದೃಷ್ಟಿಯು ಆಕೆಗೆ ಒರದಿದ್ದರೆ, ತನ್ನ ಬಾಳು ಹಾಳು ಎಂದೆನಿಸ ಬಹುದಾಗಿತ್ತು. ಹಲವು ವರ್ಷಗಳಿಂದ ಅದೇ ಬಗೆಯ ಬಾಳಿನಲ್ಲಿ ಜನ್ಮ ಕಳೆದುದರಿಂದ ಆಕೆಗೆ ಅದು ಪಳಗಿಹೋಗಿತ್ತು. ಆ ಬಗೆಯ ಜೀವನವೇ

ಆಕೆಯ ಜೀವವಾಗಿತ್ತು; ಆದುದರಿಂದ, ಡಿಮಿಟ್ರಿಯು ಈಗ ಬಂದು ಮನ ಒಲಿಸಿ ತನ್ನನ್ನು ಬೇರೊಂದು ಸೃಷ್ಟಿಗೆ ಒಯ್ಯುವದು ಆಕೆಗೆ ಸರಿಬರಲಿಲ್ಲ.

'ನನ್ನ ಮಟ್ಟಿಗೆ ನಾನು ಸ್ವತಂತ್ರಳಾಗಿಯೂ, ಸ್ವತೃಪ್ತಳಾಗಿಯೂ, ಸಾಭಿಮಾನದಿಂದಲೂ ಇರುವಂಥ ಈಗಿನ ಬಾಳ್ವೆಯನ್ನು ಬಿಟ್ಟುಹೋದರೆ ನನ್ನ ಗತಿ ನೆಟ್ಟಗಾಗದು' ಎಂದು ತನ್ನೊಳಗೆ ತಾನೇ ತೂಕ ಹಾಕಿಕೊಂಡಳು; ಮತ್ತು ಇದನ್ನು ಸ್ಥಿರಪಡಿಸಿಕೊಳ್ಳಲಿಕ್ಕೆಂದು ಆಕೆ ತನ್ನ ಪೂರ್ವದ ಸ್ಥಿತಿಯನ್ನು ಜ್ಞಾಪಕ ಮಾಡಿಕೊಂಡಳು. ಈಗಿನ ಡಿಮಿಟ್ರಿಯು ಹಿಂದಿನ ತನ್ನ ಪ್ರೀತಿಯ ನಲ್ಲನಿರದೆ, ಯಾವನೊಬ್ಬ ಸಿರಿವಂತ ಮನುಷ್ಯನಿರುವಂತೆ ಭಾವಿಸಿಕೊಂಡು, ಸಾಮಾನ್ಯವಾಗಿ ತನ್ನ ಕಡೆಗೆ ಬರುವ ಜನರೊಡನೆ ನಡೆಯುವಂತೆ ಇವನೊಡನೆಯೂ ನಡೆಯಬೇಕೆಂದು ಮನಸಿನಲ್ಲಿ ಗಟ್ಟಿಮಾಡಿಕೊಂಡು ಕುಳಿತಳು.



# ೧೦ ಅಪೀಲಿನ ವಿಚಾರ.





ಡಿಮಿಟ್ರಿಯು ಊರೊಳಗಿನ ತನ್ನ ಮನೆಯಲ್ಲಿಯ ಸಾಮಾನುಗಳನ್ನೆಲ್ಲ ತೆಗೆದಿಟ್ಟು ಮನೆಯನ್ನು ಯಾರಿಗಾದರೂ ಬಾಡಿಗೆ ಕೊಡಬೇಕೆಂದು ಮನಸುಮಾಡಿ, ತನ್ನ ಮನೆಯಲ್ಲಿದ್ದ ಆಳು ಹೋಳುಗಳಿಗೆಲ್ಲ ಸಾಮಾನುಗಳನ್ನು ತೆಗೆದು ಝಾಡಿಸಿ ಸರಿಯಾಗಿ ಕಟ್ಟಿಡಲಿಕ್ಕೆ ಹೇಳಿದ. ಅಂದು ಮನೆಯಲ್ಲಿ ಗಡಿಬಿಡಿಯೇ ಗಡಿಬಿಡಿ. ಮೇಲುಪ್ಪರಿಗೆಯ ಮೇಲೆ ನಿಂತು ತನ್ನ ಆಳುಹೋಳುಗಳು ದುಡಿಯುತ್ತಿರುವದನ್ನು ಕಂಡು ಡಿಮಿಟ್ರಿಯು ತನ್ನೊಳಗೆ ತಾನೇ 'ನಾನು ಇಷ್ಟು ಬೇಗ ನನ್ನ ಇರುವಿಕೆಯನ್ನು ಆದೇಕೆ ಬದಲಾಯಿಸಬೇಕು? ಮಾಸ್ಲೋವಳ ವ್ಯಾಜ್ಯವಂತೂ ಇನ್ನೂ ಯಾವ ದಂಡೆಗೂ ಮುಟ್ಟಿಲ್ಲ; ಆಕೆಯ ಬಿಡುಗಡೆಯಾದರೆ ಸರಿ, ಇಲ್ಲವಾದರೆ, ನನಗೂ ಆಕೆಯ ಬೆನ್ನು ಹತ್ತಿ ಸೈಬಿರಿಯಾಕ್ಕೆ ಹೋಗಬೇಕಾಗುವದು, ಎಂದುಕೊಂಡನು.

ಮುಂದೆ, ಅವನಿಗೆ ಕಟೂಷಳ ವ್ಯಾಜ್ಯದ ಅಪೀಲಿನ ದೆಶೆಯಿಂದ ವಕೀಲನ ಮನೆಗೆ ಹೋಗಬೇಕಾದ್ದರಿಂದ ಅದೇ ವಿಚಾರಕ್ಕೆ ಗಮನಕೊಟ್ಟು ತನ್ನ ಕೆಲಸಬೊಗಸೆಗಳನ್ನೆಲ್ಲ ತೀರಿಸಿಕೊಂಡು ವಕೀಲನ ಮನೆಗೆ ಹೋದನು. ಅದೊಂದು ಅರಮನೆಯಂಥ ದಿವ್ಯ ಭವ್ಯವಾದ ಮನೆ. ಮನೆಯ ಮುಂದಿರುವ ವಿಶಾಲವಾದ ಬೈಲಲ್ಲಿ ಉದ್ದವಾಗಿ ಬೆಳದು ನಿಂತಿರುವ ಸುಂದರವಾದ ಓಕ ಮುಂತಾದ ವೃಕ್ಷಗಳು, ಅಲ್ಲದೆ ಅಲ್ಲಲ್ಲಿ ಬೇಕೆಂದು ಹಚ್ಚಿ ಬೆಳಿಸಿರುವ ಹೂಗಿಡಗಳು, ಆದರ ಮಂಟಪಗಳು, ಬಳ್ಳಿಗಳು; ಮನಸಿಗೆ ಬಂದಾಗ ಕುಳ್ಳಿರಲಿಕ್ಕೆಂದು ಮಾಡಿಸಿರುವ ಕಟ್ಟೆಗಳು, ನೀರಿನ ತಿಳಿಗೊಳಲು, ಇವನ್ನೆಲ್ಲ ಕಂಡು ಡಿಮಿಟ್ರಿಗೆ ಬಹು ಆನಂದವಾಯಿತು. ಮನೆಯೊಳಗೆ ಹೊಕ್ಕನು. ಅಲ್ಲಲ್ಲಿ ಇಳಿಬಿಟ್ಟಿರುವ ಬೆರಗುಗೊಳಿಸುವಂಥ ಪರದೆಗಳು, ಖುರ್ಚಿ, ವಿರಾಮಖುರ್ಚಿ, ಗಾಲಿಗಳುಳ್ಳವ ಖುರ್ಚಿ, ಬೆಲೆಯುಳ್ಳ ಭಾವಚಿತ್ರ, ಅಂದವಾದ ನೋಟಗಳ

ಚಿತ್ರ, ಚಿತ್ರವಿಚಿತ್ರ ಕಟ್ಟಿಗೆಯ ಸುಂದರವಾದ ಮೇಜುಗಳು ಬಗೆಬಗೆಯ ಆಕಾರದ ಚಮತ್ಕಾರವಾದ ಕೆತ್ತನೆಯ ಕೆಲಸ ಮಾಡಿದ ದೊಡ್ಡ ದೊಡ್ಡ ಕಪಾಟುಗಳು, ಅದರಲ್ಲಿಯ ಪುಸ್ತಕ ಇವೆಲ್ಲವುಗಳನ್ನು ಕಂಡು ಡಿಮಿಟ್ರಿಗೆ ವಿಸ್ಮಯವೆನಿಸಿತು. ಮೈಮುರಿ ದುಡಿಯದೆ ದುಃಖಪಡದೆ ಹಣ ಗಳಿಸುವವರಿಗೆ ದುಡ್ಡಿನ ಬೆಲೆಯೇ ಇರದ್ದರಿಂದ ಅವರು ಕೂಡಲೇ ತಮ್ಮ ಸಿರಿವಂತಿಕೆಯನ್ನು ತೋರಿಸಲು ಉದ್ಯುಕ್ತರಾಗುತ್ತಾರೆ. ಇದಕ್ಕೆ ವಕೀಲರ ಉದಾಹರಣೆಯೇ ಸಾಕು ಎಂದುಕೊಂಡು ಒಳಕೋಣೆಗೆ ಹೋದನು; ಅಲ್ಲಿ ಕೆಲ ಜನ ಪಕ್ಷಕಾರರು ಮುಖ ಒಣಗಿಸಿಕೊಂಡು ಕುಳಿತಿದ್ದರು; ಕೆಲವರು ತಮ್ಮ ಹತ್ತರವೇ ಬಿದ್ದಿರುವ ವೃತ್ತಪತ್ರಗಳನ್ನು ಓದುತ್ತಿದ್ದರು ಮತ್ತೊಂದು ಬದಿಗೆ ವಕೀಲರ ಕಾರಕೂನನು ಕುಳಿತಿದ್ದು, ವಕೀಲನ ಸ್ವತಂತ್ರ ಕೋಣೆಯು ಅದರಾಚೆ ಇದ್ದಿತು. ಡಿಮಿಟ್ರಿಯು ಅವನನ್ನು ಕೇಳಿಕೊಂಡು ಅಲ್ಲಿಗೆ ಹೋದನು. ಇಬ್ಬರ ಮುಖಕ್ಕೆ ಮುಖ ಭೆಟ್ಟಿ ಆಯಿತು. ಇಬ್ಬರು ನಕ್ಕಂತೆ ಮಾಡಿದರು. ಡಿಮಿಟ್ರಿಗೆ ಕೂಡ್ರಲಿಕ್ಕೆ ವಕೀಲನು ಹೇಳಿದನು. ಏನೋ ವಿಶೇಷ ಬರವಣಿಗೆಯಲ್ಲಿದ್ದನು. ಅದನ್ನು ಮುಗಿಸಿ 'ಯಾಕೆ ಬಂದಿದ್ದಿರಿ?' ಅಂದನು. ನಾನು ಮಾಸ್ಲೋವಳ ವ್ಯಾಜ್ಯದ ಆ ಅಪೀಲಿನ ದೆಸೆಯಿಂದ ಬಂದಿರುವೆ! ನೆಂದು ನುಡಿದನು. ವಕೀಲನು ಅಂದುದು 'ಸರಿ. ಸರಿ. ಆ ನಿಮ್ಮ ಮಾಸ್ಲೋವಳ ವ್ಯಾಜ್ಯವಲ್ಲವೇ? ಅದನ್ನೆಲ್ಲ ನಾನು ಓದಿನೋಡಿದೆ. ಅದರ ಅಪೀಲು ಮಾಡುವದರಲ್ಲೇನೂ ನನಗೆ ವಿಶೇಷ ಸಬಲ ಕಾರಣಗಳು ಕಂಡುಬರಲಿಲ್ಲ.''

ಡಿಮಿಟ್ರಿಯು 'ಹೌದು. ಅದು ನಮ್ಮ-ನಮಗೆ ಹೊಳೆಯಬೇಕಾಗಿತ್ತು; ಆದರೆ ಹಾಗಾಗಲಿಲ್ಲ. ಅದು ನಮ್ಮ ತಪ್ಪು' ಅಂದನು. 'ನಿಮ್ಮ ತಪ್ಪು ಅಷ್ಟೇ ಅಲ್ಲ' ನ್ಯಾಯಾಧೀಶನಾದರೂ ಇದನ್ನು ತಿಳಿದುಕೊಂಡು ತನ್ನ ತೀರ್ಪಿನಲ್ಲಿ ಸ್ಪಷ್ಟಪಡಿಸಬಹುದಾಗಿತ್ತು; ಆದರೆ ಅವನು ತನ್ನ ಅವಸರದಲ್ಲಿ ಅದನ್ನು ಮರೆತನು; ಆದುದರಿಂದ ಈ ತಪ್ಪನ್ನು ಸರಿಪಡಿಸುವದು ಮೇಲು ಕೋರ್ಟಿನವರ ಕರ್ತವ್ಯ. ಅವರು ಅದನ್ನು ಮಾಡೇ ತೀರುವರು.'' ಅಂದನು.

ಅವನೇನೂ ನಿಶ್ಚಯವಾಗಿ ಹೇಳಲಿಕ್ಕೆ ಬರಲಾರದು. ಏಕೆಂದರೆ, ಅದು ಆ ಕೋರ್ಟಿನ ನ್ಯಾಯಾಧೀಶನು ಯಾವ ದೃಷ್ಟಿಯಿಂದ ನೋಡು ವನೋ, ಅದರ ಮೇಲೆ ಅವಲಂಬಿಸಿದೆ, ಎಂದನು ಡಿಮಿಟ್ರಿಯು. ' ಪ್ರಯತ್ನ ವಂತೂ ಮಾಡಿಯೇ ತೀರ ಬೇಕಷ್ಟೇ ! ಅದೆಲ್ಲ ಅಲ್ಲಿಯ ಸಭಾಸದರ ಮತ್ತು ನ್ಯಾಯಾಧೀಶರ ಮತವನ್ನೇ ಪೂರಾ ಅವಲಂಬಿಸಿರುತ್ತದೆ. ನಿಮಗೇನಾ ದರೂ ಅಲ್ಲಿಯ ಜನರ ಪರಿಚಯವಿದ್ದರೆ, ಯತ್ನಮಾಡಿ ನೋಡಿರಿ' ಅಂದನು ವಕೀಲನು. ' ಓಹೋ ಆಗಬಹುದು. ' ಡಿಮಿಟ್ರಿ ಅಂದನು. ' ಹಾಗಾದರೆ, ತ್ವರೆಮಾಡಿರಿ, ವೇಳೆ ಕಳೆಯಬೇಡಿರಿ; ಇಲ್ಲದಿದ್ದರೆ ಮಾಡಿಟ್ಟ ವಿಚಾರವೆಲ್ಲ ಕೆಟ್ಟುಹೋದೀತು; ಮೇಲಾಗಿ, ಈಗಿಷ್ಟರಲ್ಲಿ ಆ ಬೆಂಚಿನವರು ಎರಡು ಮೂರು ತಿಂಗಳ ವರೆಗೆ ಪ್ರವಾಸಕ್ಕೆಂದು ಹೋಗುವವರಿದ್ದಾರೆ; ಹಾಗಾದರಂತೂ ಕೆಲಸವೇ ಕೆಟ್ಟೀತು. ತಿಳಿಯಿತೇ ? ಒಂದು ವೇಳೆ ಅಲ್ಲಿ ಸಾಧ್ಯವಾಗದಿದ್ದರೆ, ಬಾದಶಹರ ಕಡೆಗೆ ಅಪೀಲು ಮಾಡೋಣಂತೆ!' ಎಂದು ವಕೀಲನು ನುಡಿದನು.

ಡಿಮಿಟ್ರಿಯು ' ಆಗಲಿ ಸಂತೋಷ. ನಿಮ್ಮ ಫೀ ವಿಚಾರವೇನು ? ' ವಕೀಲನು ' ಅದನ್ನೆಲ್ಲ ನನ್ನ ಅಸಿಸ್ಟಂಟನು ನಿಮಗೆ ತಿಳಿಸುವನು. ' ಅಪೀಲು ಮಾಡುವದು ನಿಶ್ಚಿತವಾದ ಮೇಲೆ, ಡಿಮಿಟ್ರಿಯು ಮತ್ತೆ ಅಪೀಲಿನ ಮೇಲೆ ರುಜು ಹಾಕಿಸಲಿಕ್ಕೆಂದು ಮಾಸ್ಲೋವಳಿಗೆ ಭೆಟ್ಟಿಯಾಗಬೇಕಾಯಿತು; ಆದು ದರಿಂದ ಅವನೇ ಮತ್ತೊಮ್ಮೆ ಸೆರೆಮನೆಗೆ ಹೋಗಬೇಕೆಂದು ಯೋಚನೆ ಮಾಡಿದನು. ಅಪೀಲಿನ ದೆಸೆಯಿಂದ ಇಷ್ಟು ಬೇಗ ಮತ್ತೆ ತನ್ನ ನಲ್ಲಳ ಭೆಟ್ಟಿಯಾಗುವ ನೆವ ಸಿಕ್ಕದಕ್ಕಾಗಿ ಅವನಿಗೆ ಆನಂದ.

ಬೆಳಿಗ್ಗೆ ಅಷ್ಟೊತ್ತಿಗೆ ಎದ್ದು ಡಿಮಿಟ್ರಿಯು ಎಡೆಗುದಿಯಿಂದ ತನ್ನ ಬೆಳಗಿನ ಶೌಚಮುಂತಾದವುಗಳನ್ನು ತೀರಿಸಿಕೊಂಡು ಕಟೂಷಳನ್ನು ಕಾಣಲಿಕ್ಕೆಂದು ಬಂದು ಬಹಳ ಹೊತ್ತು ಭೆಟ್ಟಿಯಾಗುವ ಕೋಣೆಯಲ್ಲಿ ದಾರಿಕಾಯುತ್ತ ಕುಳಿತಿದ್ದ. ತನ್ನ ಸರತಿಯು ಬಂದೊಡನೆ ಅವನು ಜೇಲರನ ಕೈಯಲ್ಲಿ ತನ್ನ ಪಾಸನ್ನು ಕೊಟ್ಟನು.

'ಯಾರನ್ನು ಕಾಣಬೇಕಾಗಿದೆ ನಿಮಗೆ?' ಎಂದನು ಜೇಲರನು. 'ಮಾಸ್ಲೋವ ಕಟೂಷಳನ್ನು' ಅಂದನು ಡಿಮಿಟ್ರಿಯು. ಈ ದಿನ ನಿಮಗೆ ಭೆಟ್ಟಿಯಾಗದು' ಜೇಲರನು ಅಂದನು. ಡಿಮಿಟ್ರಿಯು 'ಇನ್ಸಪೆಕ್ಟರು ಎಲ್ಲಿರುವರು? ಹೀಗೆಂದು ವಿಚಾರಿಸಿ, ಅವರನ್ನೇ ಕಾಣಬೇಕೆನ್ನುವಷ್ಟರಲ್ಲಿ 'ಸಿಗರೇಟಿನ ಹೊಗೆಯಿಂದ ಬಣ್ಣಗೆಟ್ಟಿರುವ ಮೀಸೆಯ ಒಬ್ಬ ದೊಡ್ಡ ಆಳು ಖಟ್ ಖಟ್ ಎಂದು ಕಾಲುಸಪ್ಪಳ ಮಾಡುತ್ತ ಬಂದು ಇದನ್ನೆಲ್ಲ ಕೇಳಿದವ ನಂತೆ ಜೇಲರನನ್ನು ಕುರಿತು 'ಕಂಡ ಕಂಡ ಜನರನ್ನು ಒಳಗೆ ಬಿಡಬೇಡಿರೆಂದರೆ ಕೇಳುವದಿಲ್ಲವೇ!' ಹೀಗೆಂದು ಗದರಿಸಿ, ಮತ್ತೆ ಏಕೋ ಡಿಮಿಟ್ರಿಯನ್ನು ನೋಡಿ, 'ನಿಮಗೆ ಯಾರನ್ನಾದರೂ ಕಾಣಬೇಕಿದ್ದರೆ, ಇಲ್ಲಿ ಭೆಟ್ಟಿ ಯಾಗುವದು ಸಾಧ್ಯವಿಲ್ಲ. ಆಚೆಯಕಡೆಗೆ.' ಎಂದು ಜೇಲರನನ್ನು ಕರೆದು 'ಹೆಂಗಸರ ಭಾಗದಲ್ಲಿಯ ಐದನೆಯ ಕೋಣೆಯಲ್ಲಿರುವ ಮಾಸ್ಲೋವಳನ್ನು ಕರಕೊಂಡು ಬಾ' ಎಂದು ಹೇಳಿದನು ಮತ್ತು ಡಿಮಿಟ್ರಿಯನ್ನು ಕುರಿತು 'ಹೀಗೆ ಬನ್ನಿ, ಕೂತುಕೊಳ್ಳಿ.' ಅಂದನು. ಇಬ್ಬರೂ ಒಂದೇ ಒಂದು ಕಿಡಿಕೆ ಇರುವ ಕೋಣೆಯಲ್ಲಿ ಕುಳಿತರು. ಅವರಿಬ್ಬರಿಗೆ ಮಾತುಕತೆ ನಡೆಯಿತು. ಇನ್ಸಪೆಕ್ಟರನು ತನ್ನ ಜೇಬಿನೊಳಗಿಂದ ಒಂದು ಸಿಗರೇಟನ್ನು ತೆಗೆದುಕೊಳ್ಳುತ್ತ 'ರಾತ್ರಿ ಹಗಲು ದುಡಿದು ದುಡಿದು ಜೀವ ಬೇಜಾರಾಗಿದೆ, ನೋಡಿ! ಏನು ಮಾಡುವದು?' ಎಂದು ಅಂದನು. ಡಿಮಿಟ್ರಿಯು ಬಹು ಸಹಾನುಭೂತಿಯ ಕಣ್ಣಿನಿಂದ ಅವನನ್ನು ನೋಡಿ 'ಅಹುದು. ನಿಮ್ಮ ಮುಖ ನೋಡಿದರೆ, ನೀವು ಬೇಸತ್ತಿರುವಂತೆ ಕಾಣುತ್ತದೆ' ಅಂದನು. 'ನೋಡಿ ಸರಕಾರಿ ಚಾಕರಿ ಮಾಡಿ ಮಾಡಿ ಜೀವವೆಲ್ಲ ಹಿಂಡಿಹಿಪ್ಪೆಯಾಗಿದೆ. ಯಾರಿಗೆ ಹೇಳುವದು? ನೀವು ನಮ್ಮ ಜೀವನವನ್ನು ಹಗುರು ಮಾಡಲಿಕ್ಕೆ ಯತ್ನಿಸಿದಂತೆಲ್ಲ ಅದು ಭಾರವಾಗುತ್ತ ಹೋಗುತ್ತದೆ! ಏನು ಮಾಡುವದು? ಹೇಗಾದರೂ ಮಾಡಿ ಪಾರಾಗಬೇಕೆಂದರೆ ಆಗಲೊಲ್ಲದು. ಛೆ. ಛೆ. ಎಷ್ಟು ದುಡಿಯುವದಪ್ಪಾ ಇನ್ನು!' ಅಂದನು ಇನ್ಸಪೆಕ್ಟರನು.

ಡಿಮಿಟ್ರಿಗೆ ಇನ್ಸಪೆಕ್ಟರನ ಕಷ್ಟಗಳಾವವು ಎಂಬುದು ಗೊತ್ತಿರಲಿಲ್ಲ; ಆದರೂ ಅವನ ಇಂದಿನ ಮುಖಚರ್ಯೆಯು ತೀರ ಬಾಡಿ ಬತ್ತಿಹೋದಂತೆ

ಕಾಣಿಸಿತು. ಆಗ ಅವನು ' ಇಷ್ಟಿದ್ದು ನೀವು ಯಾಕೆ ಚಾಕರಿ ಮಾಡುತ್ತೀರಿ? ಅಂದನು.

' ಚಾಕರಿಬಿಟ್ಟರೆ, ಹೆಂಡಿರುಮಕ್ಕಳಿಗೇನು ಹೇಳಬೇಕು.? ' ಎಂದು ಸೊಟ್ಟಮುಖಮಾಡಿ ನುಡಿದನು ಇನ್ಸಪೆಕ್ಟರನು. ಇಷ್ಟು ನಡೆಯುವ ಹೊತ್ತಿಗೆ ಹೊರಗಿಂದ ಜೇಲರನೊಡನೆ ಮಾಸ್ಲೋವಳು ನಗುನಗುತ್ತ ಗೋಣು ಅಲ್ಲಾಡಿಸುತ್ತ ಉಲ್ಲಾಸದ ನಡಿಗೆಯಿಂದ ಬಂದಳು. ಇನ್ಸಪೆಕ್ಟರನು ಅಲ್ಲಿರುವದನ್ನು ಆಕೆಯು ಕಂಡಾಕ್ಷಣವೇ ಆಕೆಯ ಮುಖಲಕ್ಷಣವು ಬದಲಾಯಿತು. ಬೆದರಿ ಅವನನ್ನು ಬಿರಿ ಬಿರಿ ನೋಡಹತ್ತಿದಳು; ಆದರೂ ತಟ್ಟನೆ ಡಿಮಿಟ್ರಿಯ ಕಡೆ ಮುಖ ತಿರುವಿ ' ಏನು ಸಮಾಚಾರ? ಎಲ್ಲವೂ ಆರೋಗ್ಯವೇ ! ' ಹೀಗೆಂದು ನಗುನಗುತ್ತ ದಿಟ್ಟತನದಿಂದ ಅವನ ಕೈ ಹಿಡಿದು ಅಲ್ಲಾಡಿಸಿದಳು. ಅವನ ಎದೆಗೆ ಗುಂಡು ಬಡಿದಂತಾಯಿತು. ಹೀಗೆ ಅಲ್ಲಾಡಿಸುವದರಲ್ಲಿ ಡಿಮಿಟ್ರಿಗೆ ಹಿಂದಿನ ಪ್ರೇಮದ ಆಕೆಯ ಒಂದು ಗುಂಜಿಯಷ್ಟಾದರೂ ಪ್ರೇಮವು ಅವಳಲ್ಲಿ ಈಗ ಕಂಡುಬರಲಿಲ್ಲ; ' ಇದೋ ? ನಿನ್ನ ಅಪೀಲಿನ ಅರ್ಜಿಯನ್ನು ಬರೆಯಿಸಿ ಕೊಂಡು ರುಜುಹಾಕಿಸಲಿಕ್ಕೆಂದು ತಂದಿರುವೆ. ' ಎಂದು ಹೇಳಿದನು. ' ಆಗಲಿ, ನಿಮ್ಮ ಇಷ್ಟದಂತೆ ಆಗಲಿ. ನಾನು ರುಜು ಹಾಕುವೆನು?' ಹೀಗಂದು ಕೈಯಲ್ಲಿ ಟಾಕನ್ನು ತೆಗೆದುಕೊಂಡು ' ಇಲ್ಲೇ ರುಜು ಹಾಕಬೇಕೇನು ? ' ಎಂದು ಕೇಳಿ, ಅದೇಕೋ ಸಿಟ್ಟುಸಿರುಬಿಟ್ಟು ಮಸಿಯಲ್ಲಿ ಟಾಕನ್ನು ಅದ್ದಿ, ಅದನ್ನು ಕೊಂಚ ಮೆತ್ತಗೆ ಕೊಡವಿ, ತನ್ನ ಅಂಕಿತಹಾಕಿದಳು. ಆಕೆಯ ಕೈಯೊಳಗಿಂದ ಟಾಕನ್ನು ತೆಗೆದುಕೊಳ್ಳುತ್ತ ಡಿಮಿಟ್ರಿಯು " ನಿನಗೆ ಕೆಲವು ಮಾತು ಹೇಳಬೇಕಾಗಿದೆ ನಾನು ? ' ಹೀಗೆಂದು ಆಕೆಯನ್ನೇ ಮಿಕಿಮಿಕಿ ನೋಡಲಾರಂಭಿಸಿದ. ' ಆಗಬಹುದು, ಹೇಳಿರಿ. ' ಅಂದಳಾಕೆ. ಇದನ್ನು ಕೇಳಿ ಇನ್ಸಪೆಕ್ಟರನು ಸುಮ್ಮನೆ ಎದ್ದು ಹೊರಗೆ ನಡೆದನು. ಈಗ ಮತ್ತೆ ಡಿಮಿಟ್ರಿಗೆ ಮೈಮೇಲೆ ದೊಡ್ಡ ಗಂಡಾಂತರ ಬಂದಿರುವಂತೆ ಅನಿಸಿತು; ಹೋದಸಾರೆ ಭೆಟ್ಟಿಯಾದಾಗಲೇ ಏಕೆ ಹೇಳಲಿಲ್ಲವೊ ಎಂದು ಮನಸಿನಲ್ಲಿಯೇ ಬೆಂದು ತನ್ನ ಮಂಕುತನಕ್ಕೆ ತಾನೇ ಬೈಯ್ದುಕೊಂಡಿದ್ದನು. ಈಗ–ಈ ಸಾರೆಯಂತೂ

ಹೇಳಿಯೇ ಬಿಡಬೇಕೆಂದು ಮನಸ್ಸು ಗಟ್ಟಿಮಾಡಿದ. ಇಂದು ಇಬ್ಬರೂ ತೀರ ಹತ್ತಿ-ಹತ್ತಿರಕ್ಕೆ ಕುಳಿತದ್ದರಿಂದಲೂ ಕೋಣೆಯಲ್ಲಿ ಸಾಕಷ್ಟು ಬೆಳಕು ಇದ್ದುದ ರಿಂದಲೂ, ಆಕೆಯ ಮುಖವು ಡಿಮಿಟ್ರಿಗೆ ನಿಚ್ಚಳವಾಗಿ ಕಾಣಿಸಿತು. ಕಳೆದ ಹತ್ತು ಹದಿನೈದು ವರ್ಷಗಳಲ್ಲಿ ಆಕೆಯ ಮುಖದಲ್ಲಿ ಇಷ್ಟು ಹೆಚ್ಚುಕಡಿಮೆ ಆದುದಕ್ಕಾಗಿ ಅವನಿಗೆ ಕನಿಕರವೆನಿಸಿತು. ಇಬ್ಬರಲ್ಲಿ ಅಪೀಲಿನ ಬಗ್ಗೆ ಮಾತು ನಡೆಯಿತು. ಡಿಮಿಟ್ರಿಗೆ ತನ್ನ ಎದೆಯಲ್ಲಿ ಕುದಿಯುವ ಮಾತನ್ನು ಯಾವಾಗ ಹೇಳುವೆನೋ ಎಂಬುವ ಕಾತರ. ಆಗಾಗ್ಗೆ 'ನಾನು ನಿನಗೊಂದು ಮಾತು ಹೇಳಬೇಕಾಗಿದೆಂದು ಅನ್ನುವನು; ಇಷ್ಟರಲ್ಲಿ ನಾಲಿಗೆಯು ಒಳಗೆ ಜಗ್ಗುವದು. 'ಕ್ಷಮಿಸುವೆನೆಂದು ಮಾತು ಕೊಟ್ಟರೆ ಹೇಳುವೆ.' ಎಂದು ಪದೆಪದೆ ನುಡಿ ಯುವದರಿಂದೇನು? ಮನಸಿನೊಳಗಿದ್ದುದನ್ನು ಒಮ್ಮೆ ಹೊರಗೆಡಹ ಬಾರದೆ?' ಎಂದು ಸಿಟ್ಟಿನಿಂದ ಕಟೂಷಳು ನುಡಿದಳು. ಡಿಮಿಟ್ರಿಯ ಮುಖ ಇಳಿಯಿತು. ಅದೇ ಸ್ಥಿತಿಯಲ್ಲಿಯೇ 'ನನ್ನ ಪಾಪಕ್ಕೆ ಪ್ರಾಯಶ್ಚಿತ್ತ ತೆಗೆದು ಕೊಳ್ಳಬೇಕೆಂದು ನಾನು ನಿನ್ನ ಮದುವೆಯಾಗಬೇಕೆನ್ನುವೆ. ಇದಕ್ಕೆ ನಿನ್ನ ಅಂಬೋಣವೇನು?' ಎಂದು ಅಂಜಂಜುತ್ತ ನುಡಿದು ತೆಪ್ಪಗೆ ನಿಂತು ಬಿಟ್ಟನು. ಕಟೂಷಳ ಮುಖದಲ್ಲಿ ಹೆದರಿಕೆಯು ಒಡಮೂಡಿತು; ಆಕೆ ಅವನನ್ನು ನಿಟ್ಟಿಸಿದಂತೆ ಮಾಡಿ ಹುಬ್ಬುಗಂಟಿಕ್ಕಿ 'ಆ ಮಾತೇಕೆ ಈಗ!' ಎಂದು ಮುಖಬಿಗಿದುಕೊಂಡಳು. ಡಿಮಿಟ್ರಿಯು ವಿನಯದಿಂದ 'ದೇವರ ಸಾಕ್ಷಿಯಾಗಿ ಹಾಗೆ ಮಾಡುವದು ನನ್ನ ಕರ್ತವ್ಯವೆಂದು ನನ್ನ ಮನಸಿನ ನಂಬಿಗೆ' ಅಂದನು.

'ಈಗೆಲ್ಲಿಂದ ಬಂದನು ಆ ದೇವರು? ನಿಮ್ಮ ಮೈಮೇಲೇನಾದರೂ ಎಚ್ಚರ ಇರುವದೇನು? ದೇವರಂತೆ! ಯಾವ ದೇವರು? ಎಲ್ಲಿರುವನು? ಈ ದೇವರು ನಿಮಗೆ ಆಗ ನೆನಪಾಗಲಿಲ್ಲವೇ?' ಎಂದು ಥಡಾಥಡಾ ಮಾತ ನಾಡಿ ಇದ್ದಕಿದ್ದಂತೆ ಬಾಯಿಬಿಟ್ಟುಕೊಂಡು ದುರು ದುರು ನೋಡುತ್ತ ನಿಂತಳು. 'ಶಾಂತಳಾಗು. ಹಿಂದಿನದೆಲ್ಲ ಮರೆತು ಬಿಡು' ಎಂದು ಡಿಮಿ ಟ್ರಿಯು ಮೆತ್ತಗೆ ನುಡಿದನು. 'ಶಾಂತವಾಗುವದೆಂತು? ನಾನು ನಿಮ್ಮ

ಕಣ್ಣಲ್ಲಿ ಕಾಣಿಸುವದೆಂತು? ಎಷ್ಟೆಂದರೂ ನಾನೆಂದರೆ ಒಬ್ಬ ಅಪರಾಧಿ, ಪೇಟೆಯ ಬಸವಿ. ನೀವು ದೊಡ್ಡವರು. ಸಿರಿವಂತರು. ನಿಮ್ಮ ಕಣ್ಣಿಗೆ ಹೇಗೆ ಕಾಣಿಸೀತು? ನಮ್ಮನ್ನು ಮುಟ್ಟಿದರೆ ನಿಮ್ಮ ಮೈ ಮಾಸುವದು. ಹೋಗಿರಿ. ನಿಮ್ಮ ಆ ರಾಣಿಯ ಕಡೆಗೆ! ನಾವೇನು? ಹತ್ತು ರೂಪಾಯಿಗಳ ನೋಟಿನವರು?' ಎಂದು ಸಿಡಿಲಿನಂತೆ ಖಡಾ ಖಡಿಯಾಗಿ ಮಾತುಗಳನ್ನು ಮಿಂಚಿಸಿ ಸುಮ್ಮ ನಾದಳು 'ನೀನು ಬೇಕಾದಷ್ಟು ಚುಚ್ಚಿ ಮಾತನಾಡಿದರೂ ಅಷ್ಟೇ! ಎದೆ ಯಲ್ಲಿ ನಾನು ನಿನಗಾಗಿ ಮರಗುತ್ತಿರುವದು ನಿನಗೆ ತಿಳಿಯದು' ಎಂದು ಗಡಗಡ ನಡುಗಿ 'ಕಟೂಷಾ! ನಾನಿನ್ನು ನಿನ್ನ ಬಿಡಲಾರೆ. ಬಿಡಲಾರೆ.' ಎಂದು ಆಕೆಯ ಕೈ ಹಿಡಿಯಹೋದನು. 'ನಡೆಯಿರಿ! ನಾನು ಬಸವಿ ನೀವು ಅರಸುಮಕ್ಕಳು. ನನ್ನ ಜೊತೆ ನಿಮಗೇಕೆ? ಹೀಗೆನ್ನುವಾಗ ಕೋಪದಿಂದ ಆಕೆಯ ಮುಖ ಕೆಂಪೇರಿತು, ಮೈ ನಡುಗಿತು; ತುಟಿಗಳು ಕಂಪಿಸತೊಡಗಿ ದವು. ಆತ ಹಿಡಿಯಲಿಕ್ಕೆ ಬಂದ ಕೈಯನ್ನು ಕೊಸರಿಕೊಂಡು ಎದ್ದು ಹೊರ ಟಳು. ಅಷ್ಟರಲ್ಲಿ ಜೇಲರನು ಒಳಗೆ ಬಂದನು. ಡಿಮಿಟ್ರಿಯು ಆತನನ್ನು ವಿನಯದಿಂದ ನೋಡಿ 'ಇನ್ನೊಂದಿಷ್ಟು ತಡೆಯಿರಿ?' ಅಂದನು, ಮತ್ತೆ ಅವನು ಹೊರಗೆ ನಡೆದನು.

ಕಟೂಷಳು ಸಿಟ್ಟಿನಿಂದ ಬಿಗಿದುಕೊಂಡು ಮತ್ತೆ ಅಲ್ಲಿಯೇ ಕುಳಿತಳು. ಮುಂದೇನು ಮಾಡಬೇಕೆಂಬುದು ಡಿಮಿಟ್ರಿಗೆ ಗೊತ್ತಾಗಲಿಲ್ಲ. ಅವನು ತುಸು ಬಾಗಿ ಆಕೆಯ ಮುಖದ ಕಡೆ ನೋಡಿ 'ಏನು? ನನ್ನಲ್ಲಿ ನಿನ್ನ ನಂಬಿಗೆ ಇಲ್ಲವಷ್ಟೇ?' ಎಂದು ಮೆಲ್ಲಗೆ ನುಡಿದನು. "ನನ್ನ ಮದುವೆಯಾಗಬೇ ಕೆಂಬ ನಿಮ್ಮ ಅಪೇಕ್ಷೆ! ಆದರೆ ಅದೆಂದೂ ಆಗದು. ನಾನು ಉರ್ಲು ಹಾಕಿ ಕೊಂಡೇನೇ ಹೊರ್ತು ಇನ್ನು ಮದುವೆಯಾಗಲಾರೆ' ಎಂಬದನ್ನು ಪದರಿಗೆ ಗಂಟು ಹಾಕಿಕೊಳ್ಳಿರಿ!' ಅಂದಳು.

ಡಿಮಿಟ್ರಿಯು 'ನಿನ್ನಿಷ್ಟ; ಆದರೂ ನಾನು ನಿನ್ನ ಬೆನ್ನ ಬಿಡೆನು. ನಿನ್ನ ಸೇವೆಯಲ್ಲಿಯೇ ಕಾಲಕಳೆಯುವೆ' ಅಂದನು.

ಕಟೂಷಳು ' ಅದು ನಿಮ್ಮ ಇಚ್ಛೆ. ನನಗಂತೂ ನಿಮ್ಮಿಂದೇನೂ ಬೇಡ ಎಂಬುದು ಖಂಡಿತ ' ಎಂದಳು.

ಇಷ್ಟು ಮಾತು ನಡೆಯುವಾಗ್ಗೆ ಮತ್ತೆ ಜೇಲರನು ಬಂದು ಹಣಿಕಿ ಹಾಕಿ ' ಹೊತ್ತಾಯಿತು. ಬೇಗ ಮಾತು ಮುಗಿಸಿರಿ' ಎಂದು ಎಚ್ಚರಿಕೆ ಕೊಟ್ಟನು. ಡಿಮಿಟ್ರಿಯು ' ಇಂದು ನೀನು ಬಲು ರೇಗಿರುವಿ. ಬೇಕೆಂದರೆ, ನಾನು ನಾಳೆಯೂ ಬರುವೆ. ನಾನು ಅಂದುದನ್ನು ಇನ್ನೊಮ್ಮೆ ತಿರುಗಿ ವಿಚಾರಿಸು ' ಎಂದನು. ಕಟೂಷಳು ಏನೂ ಮರುನುಡಿಯಾಡದೆ ಎದ್ದಳು. ಅವನನ್ನು ನೋಡದೆ ಸಿದಾ ಜೇಲರನ ಹಿಂದಿಂದೆ ನಡೆದು ತನ್ನ ಕೋಣೆ ಸೇರಿ, ತನ್ನ ಹಾಸಿಗೆಯ ಮೇಲೆ ಯೋಚಿಸುತ್ತ ಬಿದ್ದುಕೊಂಡಳು. ಕೋಣೆ ಯಲ್ಲಿಯ ಕೊಂಪೆಯಲ್ಲಿ ಆಕೆಯ ದೃಷ್ಟಿನೆಟ್ಟಿದ್ದರೂ, ಆಕೆಯ ಮನಸ್ಸು ಹತ್ತು ಹನ್ನೆರಡು ವರ್ಷಗಳಾಚೆಯ ವಿಚಿತ್ರ ಸ್ಥಿತಿಯಲ್ಲಿ ತೇಲುತಲಿದ್ದಿತು.

ಮನಸಿನಲ್ಲಿ ಮತ್ತೆ ಒದ್ದಾಟ ನಡೆಯಿತು. ಒಂದಾನೊಂದು ಕಾಲಕ್ಕೆ ನಾನು ಹೇಗಿದ್ದೆ, ಈಗ ದೈವದ ತಿರುಗಣಿ ಮಡುವಿಗೆ ಸಿಲುಕಿ ಎಲ್ಲಿ ಬಂದು ಬಿದ್ದೆ ಎಂಬುವ ವಿಚಾರವು ಮನಸಿನ ಪಟದ ಮೇಲೆ ಮೂಡಿದಾಗಂತೂ ಆಕೆಗೆ ದೇಹದ ಪರವೆ ಇರಲಿಲ್ಲ. ಹಿಂದಿನ ನೆನಪನ್ನು ಪೂರಾ ಮರೆಯುವದು ಮನು ಷ್ಯರಿಗೆ ಸಾಧ್ಯವೇ ?

ಇತ್ತ, ಡಿಮಿಟ್ರಿಯು ತನ್ನ ಪರಿಚಯದ ದೊಡ್ಡ ದೊಡ್ಡ ಜನರ ಬಿಡ ಯವನ್ನು ವೆಚ್ಚಮಾಡಿ, ಮಾಸ್ಲೋವಳ ವ್ಯಾಜ್ಯದ ಪುನರ್ವಿಚಾರಣೆಯಾಗು ವಂತೆ ಎತ್ತುಗಡೆ ಮಾಡಿದನು; ಅದಕ್ಕೆ ಬಲುಮಟ್ಟಿಗೆ ಗೆಲುವಾಗಬಹು ದೆಂದೂ ಅವನ ಮನಸಿನ ನಂಬಿಗೆ. ಇಷ್ಟು ಕೆಲಸವನ್ನು ಮುಗಿಸಿಕೊಂಡು ನಡೆದ ವೃತ್ತವನ್ನೆಲ್ಲ ಮಾಸ್ಲೋವಳ ಕಿವಿಗೆ ಹಾಕಬೇಕೆಂದು ಮತ್ತೊಮ್ಮೆ ಆಕೆಯನ್ನು ಕಾಣಲು ಸೆರೆಮನೆಗೆ ಹೋದನು.

ಮನುಷ್ಯನೆಂದ ಮೇಲೆ, ಅವನ-ಸ್ವಭಾವ-ಪ್ರವೃತ್ತಿ,-ಸಂಸ್ಕೃತಿಗನುಗುಣ ವಾಗಿ ಕೆಲ ವಿಶಿಷ್ಟ ಗುಣಗಳು ಇದ್ದೇ ತೀರುವವು. ಮನುಷ್ಯರ ಬಾಳನ್ನು ನದಿಗಳಿಗೆ ಹೋಲಿಸಿದರೆ ಚನ್ನಾಗುವದು; ಏಕೆಂದರೆ, ಪ್ರತಿಯೊಂದು ನದಿ

ಯನ್ನು ನೋಡಿರಿ. ಒಂದರಂತೆ ಇನ್ನೊಂದಿರುವದಿಲ್ಲ. ಅವುಗಳ ಒಡಲು, ಹರಿಯುವಿಕೆ, ನೀರಿನ ಗುಣ ಇವೆಲ್ಲವುಗಳಲ್ಲಿ ಒಂದನ್ನೊಂದು ಪೂರಾ ಬಿಡುತ್ತವೆ. ಸಾಮಾನ್ಯವಾಗಿ ಮನುಷ್ಯನಲ್ಲಿ ಮಾನವಜಾತಿಯ ಗುಣಬೀಜ ಗಳೆಲ್ಲ ಕಂಡುಬಂದರೂ, ಯಾವುದಾದರೂ ಒಂದೆರಡು ಗುಣಗಳಾದರೂ ಎದ್ದು ಕಾಣಿಸುವಂತಿರುತ್ತವೆ. ಮನುಷ್ಯರೆಲ್ಲ ಒಂದೇ ಆದರೂ ಪ್ರತಿಯೊಬ್ಬ ನದೂ ಒಂದು ವೈಶಿಷ್ಟ್ಯ ಇದ್ದೇ ಇರುತ್ತದೆ. ಇನ್ನು ಕೆಲವರಲ್ಲ ಈ ಗುಣಗಳು ಬಲು ಬೇಗ ಮಾರ್ಪಾಟು ಹೊಂದುತ್ತಿರುತ್ತವೆ. ನಮ್ಮ ಡಿಮಿಟ್ರಿಯ ಸ್ವಭಾವವೂ ಹೀಗೆಯೇ. ಈ ಮೇರೆ, ಅವನಲ್ಲಿ ತೀವ್ರತರ ಬದಲಾವಣೆಗ ಳಾಗಲು ಅವನ ದೇಹಸ್ಥಿತಿ, ಮನಸಿನ ಆಧ್ಯಾತ್ಮಿಕ ಒಲವು ಇವು ಕೆಲವುಟ್ಟಿಗೆ ಪ್ರಬಲ ಕಾರಣಗಳಿದ್ದವು.

ಇಂದು ಮಾಸ್ಲೋವಳನ್ನು ಕಾಣುವ ಹೆಬ್ಬಯಕೆಯ ಉಬ್ಬಿನಿಂದ ಡಿಮಿಟ್ರಿಯು ಸೆರೆಮನೆಗೆ ಹೋದನು. ವಾಡಿಕೆಯಂತೆ, ಇನ್ಸಪೆಕ್ಟರನು ಡಿಮಿಟ್ರಿಗೆ ಅಪ್ಪಣೆಯ ಚೀಟಿಯನ್ನು ಕೊಟ್ಟನು. ಆದೇಕೋ ಅವನು ಈ ಹೊತ್ತು ಹಿಂದಿನಂತೆ ಮನಸು ಬಿಚ್ಚಿ ಮಾತನಾಡಲಿಲ್ಲ; ಆದರೂ ಸ್ವಲ್ಪ ದರ್ಪದಿಂದ ' ಇದುನೋಡಿ. ನೀವು ಭೆಟ್ಟಿಯಾಗಿ ಬೇಕಾದಷ್ಟು ಮಾತ ನಾಡಬಹುದು; ಆದರೆ ಆಕೆಯ ಕೈಯಲ್ಲಿ ದುಡ್ಡುಗಿಡ್ಡು ಕೊಡಕೂಡದು. ನೀವು ಕೊಟ್ಟ ದುಡ್ಡಿನಿಂದ ಆಕೆ ಸೆರೆ ತರಿಸಿಕೊಂಡು ಕುಡಿಯುವಳು. ಈ ಜನರ ಸ್ವಭಾವ ನಿಮಗೆ ತಿಳಿಯುವದು ಬಹು ಕಷ್ಟ; ಅವೆಲ್ಲ ನಮಗೇ ಗೊತ್ತು ' ಅಂದನು.

ಡಿಮಿಟ್ರಿಯು ಸೆರೆಯಾಳುಗಳನ್ನು ಕಾಣುವ ಕೋಣೆಗೆ ಹೋಗಿ, ಅಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತನು. ಇಷ್ಟರಲ್ಲಿ, ಕಟೂಷಳು ಹಿಂದಿಂದ ತುಸು ಹೆದರಿದವಳಂತೆ ಮುಖಮಾಡಿಕೊಂಡು ಬಂದವಳೇ ಡಿಮಿಟ್ರಿಯನ್ನು ನೋಡ ಲಿಕ್ಕೆ ಸಂಕೋಚಪಟ್ಟುಕೊಂಡು, ' ಕ್ಷಮಿಸಿರಿ. ನಿನ್ನೆ ನಾನೇನೇನೋ ನಿಮಗೆ ಬಾಯಿಗೆ ಬಂದಂತೆ ಆಡಿದಕ್ಕಾಗಿ ' ಅಂದಳು. ' ಈಗ ನಾನು ನಿನ್ನನ್ನು ಕ್ಷಮಿಸುವ ಕೆಲಸ ಉಳಿದಿಲ್ಲ. ನೀನು ನನ್ನನ್ನು ಕ್ಷಮಿಸಬೇಕಾಗಿದೆ. ' ಎಂದು ಡಿಮಿಟ್ರಿಯು ಆಕೆಯನ್ನು ಆಸೆಗಣ್ಣಿನಿಂದ ನೋಡಿ ನುಡಿದನು. ' ಅದೇನೇ

ಇರಲಿ. ನನ್ನನ್ನು ಮಾತ್ರ ನೀವು ಬಿಡಲಿಕ್ಕೆ ಬೇಕು ' ಎಂದು ಮತ್ತೆ ಬಿಗಿದ ಮುಖದಿಂದ ನಿಷ್ಠುರವಾಗಿ ನುಡಿದಳು. ' ಆ ಮಾತು ಎಂದಿಗೂ ಆಗದು. ನೀನು ನನ್ನ ಕೈಹಿಡಿಯಲಿಕ್ಕೆ ಬಾಗಿ ಬೇಡುವೆ. ಅದಕ್ಕೊಪ್ಪದಿದ್ದರೆ, ನಾನು ನಿನ್ನ ಬೆನ್ನಟ್ಟುವೆ. ನಿನ್ನ ಅಪೀಲಿನ ವಿಚಾರವಾಗಿ ನಾನು ಸಾಕಷ್ಟು ಪ್ರಯತ್ನಿಸಿರುವೆ. ದೇವರ ಅನುಗ್ರಹವಿದ್ದರೆ, ಅದು ರದ್ದಾಗಬಹುದು.' ಅಂದು ಸುಮ್ಮನಾದನು.

ಕಟೂಷಳು ಇತ್ತಿತ್ತ ಹೆಚ್ಚು ಕುಡಿತದ ವ್ಯಸನಕ್ಕೆ ಮನಸೋತಿರುವ ವಿಷಯವು ಡಿಮಿಟ್ರಿಗೆ ತಿಳಿದಿತ್ತು; ಆದುದರಿಂದ ಆಕೆಯನ್ನು ಸೆರೆಮನೆಯ ಆಸ್ಪತ್ರೆಯಲ್ಲಿ ಕೆಲಸ ಮಾಡಲಿಕ್ಕೆ ಕಳಿಸುವ ವಿಚಾರಮಾಡಿ, ಒಂದೆರಡು ಸಲ ಈ ಮಾತು ಆಕೆಯ ಮುಂದೆಯೂ ಆಡಿದ್ದನು; ಅದನ್ನು ಕುರಿತು ಕಟೂಷಳು ಇಂದಿನ ಭೆಟ್ಟಿಯಲ್ಲಿ ಮಾತು ಎತ್ತ ' ನಿಮ್ಮ ಅಪೇಕ್ಷೆ ಇದ್ದರೆ, ನಾನು ಆಸ್ಪತ್ರೆಗೆ ಹೋಗುವೆ, ಮತ್ತು ಇನ್ನು ಮುಂದೆ ನಾನು ಕುಡಿಯುವದಿಲ್ಲ ' ಎಂದು ಪಶ್ಚಾತ್ತಾಪಪಟ್ಟಂತೆ ಮಾತಾಡಿದಳು. ' ಈ ಬಗೆಯ ಪಶ್ಚಾತ್ತಾಪ ಹುಟ್ಟಲಿಕ್ಕೆ ನಿನ್ನೆಯ ದಿನ ಸೆರೆ ಕುಡಿದ ಮಬ್ಬಿನಲ್ಲಿ ನನಗೆ ಬಿರುನುಡಿಗಳ ನ್ನಾಡಿದ್ದೇ ಕಾರಣವಿರಬಹುದು. ಅದೇನೇ ಇರಲಿ. ಇಂದು ಆಕೆಯ ಮನಃಸ್ಥಿತಿಯು ಹಿಂದಿನಂತಿಲ್ಲ. ಮಾಡಿದ ಪ್ರೇಮವು ವ್ಯರ್ಥವಾಗದು. ಪ್ರೇಮಕ್ಕೆ ಎಂದೂ ಸೋಲು ಆಗದು ' ಎಂದು ಕಳಕೊಂಡ ಪ್ರೀತಿಯ ವಸ್ತುವು ಕೈಗೆ ಬಂದಷ್ಟು ಇಂದು ಅವನಿಗಾನಂದ.



# ೧೧ ಮಾತೃಭೂಮಿಯ ಭೆಟ್ಟಿ.



ಮಾಸ್ಲೋವಳ ವ್ಯಾಜ್ಯದ ಪುನರ್ವಿಚಾರಣೆಯು ಇನ್ನೊಂದು ಹತ್ತು ಹದಿನೈದು ದಿನಗಳಲ್ಲಿಯೇ ಹಾಯಕೋರ್ಟಿನಲ್ಲಿ ನಡೆಯುವದಿದ್ದುದರಿಂದ, ಡಿಮಿಟ್ರಿಯು ಸೆಂಟಪೀಟರ್ಸಬರ್ಗಕ್ಕೆ ತರಾತುರಿಯಿಂದ ಕೈಯೊಳಗಿನ ಕೆಲಸಗಳನ್ನೆಲ್ಲ ಅಲ್ಲಿಯೇ ಬಿಟ್ಟು ನಡೆದನು. ಒಂದು ವೇಳೆ ವಕೀಲನ ಹೇಳಿಕೆಯಂತೆ ಬಾದಶಹರ ಮುಂದೆ ಅದು ಮಂಡಿಸಲ್ಪಡದಿದ್ದರೂ, ಜೂನ ತಿಂಗಳಲ್ಲಿ ಮಾಸ್ಲೋವಳು ಎಲ್ಲ ಅಪರಾಧಿಗಳ ಸಂಗಡ ಸೈಬೇರಿಯಕ್ಕೆ ಹೋಗುವದಾದರೆ, ತಾನು ಆಕೆಯ ಜೊತೆಯಲ್ಲಿಯೇ ಹೊರಡಲು ಅನುವಾಗಬೇಕೆಂದು ತನ್ನ ಸಿದ್ಧತೆಯಲ್ಲಿರಬೇಕಾಗಿತ್ತು; ಆದುದರಿಂದ ಡಿಮಿಟ್ರಿಯು ತನ್ನ ಒಡೆತನದ ಹೊಲಮನೆ ಮುಂತಾದ ಆಸ್ತಿಯ ವ್ಯವಸ್ಥೆಯನ್ನು ನೋಡಿಕೊಂಡು ಬರಲಿಕ್ಕೆಂದು ತನ್ನ ಇನಾಮದಾರಿಕೆಯ ಹಳ್ಳಿಗೆ ಮೊದಲು ನಡೆದನು. ಅಲ್ಲಿಯ ಭೂಮಿಯು ಎರೆ; ಆದರಿಂದಲೇ ಅವನಿಗೆ ಮುಕ್ಕಾಲು ಪಾಲು ಹುಟ್ಟುವಳಿ ಇದ್ದಿತು.

ಅಲ್ಲಿ, ಡಿಮಿಟ್ರಿಯು ತನ್ನ ಬಾಲ್ಯದಲಿದ್ದ; ವಯಸಿಗೆ ಬಂದನಂತರ ಒಂದೆರಡು ಸಲ ಮಾತ್ರ ತನ್ನ ತಾಯಿಯ ಅಪ್ಪಣೆಯಂತೆ ಅಲ್ಲಿ ಹೋಗಿ ಬಂದಿದ್ದ. ಅಲ್ಲಿಯ ಹೊಲಮನೆ, ಲಾವಣಿ-ಸಂಚಣಿಯನ್ನೆಲ್ಲ ನೋಡಿಕೊಳ್ಳಲಿಕ್ಕೆ ಅವನೊಬ್ಬ ಜರ್ಮನ್ ಕಾರಕೂನನನ್ನು ನಿಯಮಿಸಿದ್ದನು. ಇವನನ್ನು ಬಹು ದಿನಗಳಿಂದಲೂ ಡಿಮಿಟ್ರಿಯು ಚನ್ನಾಗಿ ಬಲ್ಲ. ಅಂತೆಯೇ, ಏನೋ ಒಂದು ಬಗೆಯ ನಂಬಿಗೆಯಿಂದ ಅವನಿಗೆನೇ ತನ್ನ ಆಸ್ತಿಯ ವ್ಯವಸ್ಥೆಯನ್ನು ಒಪ್ಪಿಸಿದ್ದನು. ಸೈಬೇರಿಯಕ್ಕೆ ಹೋಗುವ ಹೊತ್ತು ಬಂದರೆ, ಜೇಬಿನಲ್ಲಿ ಹಣಬೇಕಷ್ಟೇ? ಆದಿಲ್ಲದೆ ಹೋದರೆ, ತನ್ನ ಜೀವನವೂ ಸೆರೆಯಾಳುಗಳಂತೆಯೇ ಆಗುವದು; ಆಮೇಲೆ ತಾನು ಕಟೂಷಳ ಸಂಗಡ

ಹೋಗಿ ಪ್ರಯೋಜನವೇನು ? ಹೀಗೆಂದು ಆಲೋಚನೆ ಮಾಡಿ, ಏನಾದರೂ ಮುಂಗಡ ಹಣ ತೆಗೆದುಕೊಂಡು ಹೋಗಬೇಕೆಂದೇ ಅವನು ಬಂದಿರುವ ಉದ್ದಿಶ್ಯವಾಗಿತ್ತು; ಆದುದರಿಂದ ಇನ್ನು ಮುಂದೆ ಹೊಲಗಳನ್ನು ಮನೆಯ ಕಮತಕಟ್ಟಿ, ಆಳುಹೋಳು, ಕುದುರೆ ಬಂಡಿಗಳನ್ನಿಟ್ಟು ಮಾಡಿಸದೆ, ರೈತರಿಗೆ ಪೂರಾ ಲಾವಣಿ ಕೊಟ್ಟು ತನ್ನ ಮೈಮೇಲಿನ ಭಾರ ತಪ್ಪಿಸಿಕೊಳ್ಳಬೇಕಾಗಿತ್ತು. ಒಕ್ಕಲಿಗರಿಂದ ಕೂಲಿಯಿಂದ ಕೆಲಸ ಮಾಡಿಸಿಕೊಂಡು ಒಕ್ಕಲತನ ನಡಿಸುವದಕ್ಕಿಂತ ಅವರಿಗೇ ಲಾವಣಿಕೊಡುವದು ವಿಹಿತವೆಂದು ಅವನ ಬಲು ದಿನದ ವಿಚಾರ. ಒಕ್ಕಲಿಗರನ್ನು ಜೀತದಾಳಾಗಿ ಇಟ್ಟುಕೊಳ್ಳುವದಕ್ಕಿಂತ ಇದು ಒಳ್ಳೆಯದೆಂದು ಅವನ ಮತ.

ಸಂಕಲ್ಪ ಮಾಡಿದಂತೆ, ಡಿಮಿಟ್ರಿಯು ತನ್ನ ಊರಿಗೆ ಹೊರಟನು ರೈಲಿನಿಂದ. ಆ ಊರ ಸ್ಟೇಶನ್ನಿಗೆ ಮಧ್ಯಾಹ್ನಕ್ಕೆ ಮುಟ್ಟಿದ. ಅಲ್ಲಿ ನಿಂತಿರುವ ಒಂದು ಕುದುರೆಯ ಬಂಡಿಯನು ಬಾಡಿಗೆ ಮಾಡಿಕೊಂಡು ಹೊರಟನು. ತನ್ನ ಪಾರುಪತ್ಯಗಾರ ( ಕಾರಕೂನ ) ನಿಗೆ ಒಂದು ತಂತಿ ಬಿಟ್ಟಿದ್ದರೆ, ಅವನು ಬೇಕಾದಂಥ ಕುದುರೆಯ ಬಂಡಿ, ಆಳುಹೋಳುಗಳ ಸಮೇತನಾಗಿ ಬಂದು; ತನ್ನ ಹಳ್ಳಿಗೆ ಒಳ್ಳೇ ಗೌರವದಿಂದ ಕರಕೊಂಡು ಹೋಗಬಹುದಾಗಿತ್ತು, ಆದರೆ, ಅಂತಹ ಆಢ್ಯತೆಯು ಡಿಮಿಟ್ರಿಗೆ ಸರಿಬರಲಿಲ್ಲ. ಯಾರೋ ಏನೋ ಅಂಬುವ ಹಾಗೆ, ಬಂಡಿಯವನಿಗೆ ತನ್ನ ಗುರುತು ಕೊಡದೆ, ಅವನೊಡನೆ ಊರ ಸಂಬಂಧವಾದ ಮಾತುಗಳನ್ನಾಡುತ್ತ ನಡೆದನು. ಆ ಮಾತುಗಳಲ್ಲಿ ನಮ್ಮಲ್ಲಿ ನೋಡಿ, ಸ್ವಾಮಿಯವರೇ, ಒಬ್ಬರು ಜರ್ಮನಿಯ ಕಾರಕೂನರಿದ್ದಾರೆ. ಅವರು ತಮ್ಮ ಮನೆ ಹೆಂಗಸರೊಡನೆ ಹೊರಗೆ ಹೊರಟರೆ, ಒಳ್ಳೇ ಜರಬಿನಿಂದ ಹೋಗುವರು. ಅವರ ಬಂಡಿ ಏನು ? ಅದರೊಳಗೆ ವಿದ್ಯುದ್ದೀಪವೇನು ? ಅಂಥಾ ಬಂಡಿ ನಮ್ಮ ಸೀಮೆಯಲ್ಲೇ ಇಲ್ಲ ನೋಡಿ. ಅವರು, ಸ್ವಾಮಿಯವರೇ, ಬೇಕಾದಷ್ಟು ದುಡ್ಡು ಕೂಡು ಹಾಕಿದ್ದಾರೆ; ಅಷ್ಟೇ ಅಲ್ಲ, ಹೊಲಗದ್ದೆಗಳನ್ನೂ ಕೊಂಡಿರುವರೆಂದೂ ಕೇಳಿಕೆ.' ಎಂದು ಹೇಳಿದನು. ಅದನ್ನೆಲ್ಲ ಡಿಮಿಟ್ರಿಯು ಸುಮ್ಮನೆ ಕೇಳಿಕೊಂಡ.

ಊರಿಗೆ ಹೋಗಿ ಮುಟ್ಟಿದ ಮೇಲೆ, ಹೊಲಮನೆ, ಲೆಕ್ಕಪತ್ರಗಳನ್ನೆಲ್ಲ ನೋಡಿದನು. ಕಾರಕೂನನ ಸಂಗಡ ಮಾತನಾಡಿ ಅಲ್ಲಿಯ ಸ್ಥಿತಿಗತಿಗಳನ್ನು ಕೇಳಿದನು. 'ಇಲ್ಲಿಯ ಒಕ್ಕಲಿಗರಿಗೆ ಸ್ವಂತ ಒಡೆತನದ ಭೂಮಿ ಎಂಬುದು ಇಲ್ಲೇ ಇಲ್ಲವೆಂದರೂ ಸಲ್ಲುವದು; ಚೂರು ಚಾರು ಇದ್ದರೂ, ಇನಾಮದಾರಿಕೆಯ ಭೂಮಿಗಳ ನಡುವೆ ಸಿಕ್ಕಿಕೊಂಡಿವೆ' ಎಂದನು. ಇದರಿಂದ ಡಿಮಿಟ್ರಿಗೆ ಒಕ್ಕಲತನ ತೆಗೆದು, ಒಕ್ಕಲಿಗರಿಗೆ ಲಾವಣಿಯಂತೆ ಕೊಡುವದೇ ಒಳ್ಳಿತು ಎಂಬ ವಿಚಾರವು ದೃಢವಾಯಿತು; ಅಲ್ಲದೆ ಒಕ್ಕಲಿಗರೀಗ ಬಹಳ ಸಾಲದಲ್ಲಿ ಮುಳುಗಿದ್ದು, ಕೆಲ ದಿನಗಳವರೆಗೆ ಅವರಿಗೇ ಸಾಗು ಮಾಡಲಿಕ್ಕೆ ಕೊಟ್ಟರೆ ಅವರ ಸಾಲ ಕಡಿಮೆಯಾಗಿ ತನಗೂ ಚನ್ನಾಗಿ ಲಾಭವಾಗುವದೆಂದು ಮನಸಿನಲ್ಲಿಯೇ ಲೆಕ್ಕ ಹಾಕಿದನು. ತನ್ನಂತಹ ದುಡ್ಡಿದ್ದವರು ಬಡ ಒಕ್ಕಲಿಗರಿಗೆ ಹೀಗೆ ಒಂದಿಲ್ಲೊಂದು ಬಗೆಯಿಂದ ನೆರವಾದರೆ, ಈಗ ತಾಳಗೆಟ್ಟಿರುವ ಒಕ್ಕಲಿಗರ ಸ್ಥಿತಿಯು ರವೆಯಷ್ಟಾದರೂ ಸುಧಾರಿಸಬಹುದೆಂದುಕೊಂಡನು; ಆದರೆ ಡಿಮಿಟ್ರಿಯ ಈ ವಿಚಾರವು ಕಾರಕೂನನಿಗೆ ಸಮ್ಮತವಿರಲಿಲ್ಲ. ಇದ್ದುಬಿದ್ದ ಹೊಲಗದ್ದೆಗಳನ್ನೆಲ್ಲ ಒಕ್ಕಲಿಗರಿಗೆ ಗೇಣಿಯಿಂದ ಸಾಗುಮಾಡಲು ಕೊಟ್ಟರೆ, ಈಗಿರುವ ಒಕ್ಕಲತನದ ಸಾಮಾನುಗಳೆಲ್ಲ ಸುಮ್ಮನೆ ಹಾಳಾಗಿ ಹೋಗುವವು; ಅವುಗಳನ್ನು ಕೊಳ್ಳಲಿಕ್ಕೆ ಮಾಡಿಸಲಿಕ್ಕೆ ಹಾಕಿದ ಹಣದಲ್ಲಿಯ ಒಂದು ನಾಲ್ಕಾಂಶ ಹಣ ಸಹ ಕೈಗೆ ಹತ್ತದೆ, ಹೋಗುವದು; ಮೇಲಾಗಿ, ಒಕ್ಕಲಿಗರಿಗೆ ಲಾವಣಿಗೆಂದು ಹೊಲ ಕೊಟ್ಟರೆ, ಅವರು ಭೂಮಿ ಕೆಡಿಸುವರು; ಆದರಿಂದ ತುಂಬಾ ಹಾನಿ ತಟ್ಟುವದು, ಎಂದು ಅವನ ಮನದ ಮೇಲೆ ಮೂಡಿಸಲು ಪ್ರಯತ್ನಿಸಿದ; ಆದರೆ ಬಗೆಹರಿಯಲಿಲ್ಲ. ಜನತೆಯ ಹಿತದಲ್ಲಿಯೇ ಸಂಪೂರ್ಣ ದೃಷ್ಟಿ ಇಟ್ಟಿರುವ ಡಿಮಿಟ್ರಿಗೆ ತನ್ನ ಹಾನಿಯ ಕಡೆಗೆ ಅಷ್ಟು ಲಕ್ಷ ಹೋಗಲಿಲ್ಲ. ಅವನು ತನ್ನ. ಕಾರಕೂನನನ್ನು ಕುರಿತು 'ಒಳ್ಳೇದು. ನಾನಿಲ್ಲಿರುವಾಗಲೇ ಈ ಮಾತಿನ ತೀರುಗಡೆ ಮಾಡಬೇಕಾಗಿದೆ; ಆದುದರಿಂದ ನಾಳಿಂದ ನಾಳೆ ಎಲ್ಲ ರೈತರಿಗೆ ಒಂದೆಡೆ ಕಲೆಯಲಿಕ್ಕೆ ಹೇಳಿರಿ? ಅವರು ಯಾವ ಕರಾರಿನಿಂದ ಹೊಲ ಸಾಗುಮಾಡಲಿಕ್ಕೆ ಸಿದ್ಧರಿರುವರೆಂಬುದನ್ನು ನೋಡುವ. ಮರೆಯಬೇಡಿ?' ಎಂದು ಆಜ್ಞಾಪಿಸಿ, ತಾನು ತನ್ನ ಮನೆಯ ಸುತ್ತಲಿನ ಹೂದೋಟ

ದಲ್ಲಿ ಸೇದುತ್ತ ಅಡ್ಡಾಡ ಹತ್ತಿದನು. ಆಗ ನಾಳೆ ರೈತರೆಲ್ಲ ಒಟ್ಟುಗೂಡಿದಾಗ ಅವರಿಗೆ ಏನು ಹೇಳತಕ್ಕದ್ದೆಂಬುದರ ವಿಚಾರ ಮಾಡಿಕೊಂಡನು.

ರಾತ್ರೆ ಆಯಿತು. ಊಟ ತೀರಿಸಿಕೊಂಡ. ತನ್ನ ತಾಯಿ ಯಾವಾಗಲೂ ಕೂಡ್ರುತ್ತಿರುವ ಒಂದು ಹಳೆಯ ಆರಾಮ ಖುರ್ಚಿಯು ಮೂಲೆಗುಂಪಾಗಿ ಬಿದ್ದಿರುವದನ್ನು ಕಂಡನು. ಅದರಿಂದ ಅವನ ಮನವೆಲ್ಲ ಒಮ್ಮಿಂದೊಮ್ಮೆ ಹಿಂದಿನ ಕಾಲಕ್ಕೆ ಹಾರಿತು. ‘ಒಂದಾನೊಂದು ಕಾಲಕ್ಕೆ ಒಳ್ಳೇ ವೈಭವದಿಂದಲೂ, ಆಳುಹೋಳುಗಳಿಂದಲೂ ಗದ್ದಲವಾಗಿರುವ ಮನೆಯು ಇನ್ನು ಹಾಳುಬೀಳುವದು, ಹೂದೋಟವು ಒಣಗಿ ಬರಲಾಗಿ ಹೋಗುವದು, ಹಲವು ಬಗೆಯ ಗಿಡಗಂಟಿಗಳಿಂದ ತುಂಬಿರುವ ಕಾಡು ಜನರ ಕೈಗೆಸಿಕ್ಕು ಹಾಳಾಗುವದು; ಅಷ್ಟೇ ಅಲ್ಲದೆ, ಈ ಕಮತದ ದೆಸೆಯಿಂದೆಂದುಕೊಂಡಿರುವ ಸಾಮಾನುಗಳು ಕೂಡ ಮೂಲೆಗುಂಪಾಗುವವಲ್ಲ’ ಎಂಬ ವಿಚಾರ ಮನಸಿನಲ್ಲಿ ಆಡಿಯಿಟ್ಟೊಡನೆ, ಅವನ ಹೊಟ್ಟೆಯಲ್ಲಿ ಕಸಿವಿಸಿಯಾಯಿತು. ಮರುಕ್ಷಣಕ್ಕೆ’ ‘ನಾನೇ ಇಲ್ಲಿ ಇಲ್ಲದ ಮೇಲೆ ಇವುಗಳಿಂದೇನು? ಸುಮ್ಮನೆ ಮಾರಿಬಿಡುವದು, ಅಥವಾ ಲಾವಣಿಗೆ ಕೊಡುವದು ಯೋಗ್ಯವೆಂದು ಒಮ್ಮೆ ಯೋಚನೆ ಮಾಡಿದನು; ಆದರೆ, ತತ್‌ಕ್ಷಣವೇ ‘ನೀನು ಸೈಬೀರಿಯಾಕ್ಕೆ ಹೋಗುತ್ತಿದ್ದರೂ, ನಿನ್ನ ಆಯುಷ್ಯವನ್ನೆಲ್ಲ ಅಲ್ಲಿಯೇ ಕಳೆಯುವದು ಸಾಧ್ಯವಿಲ್ಲ. ಇಂದಿಲ್ಲ ನಾಳೆ ಮದುವೆಯಾಗಿ ನಾಲ್ಕು ಮಕ್ಕಳು ಮರಿಗಳು ಹುಟ್ಟಿದರೆ, ಅವರಿಗೇನೂ ದಿಕ್ಕು ಬೇಡವೇ? ಹಿಂದಿನ ಹಿರಿಯರು ಗಳಿಸಿದ್ದನ್ನು ಹೀಗೆ ಹಾಳು ಮಾಡಿದರೆ, ಮುಂದಿನವರು, ನಿನಗೇನಂದಾರು? ಮೇಲಾಗಿ, ಯಾವುದಾದರೊಂದು ವಸ್ತುವನ್ನು ಪೋಲುಮಾಡುವದು ಸುಲಭ, ಗಳಿಸುವದು ಬಹು ಕಷ್ಟ; ಆದುದರಿಂದ, ನಿನ್ನ ಮುಂದಿನ ಆಯುಷ್ಯದ ಗುಟ್ಟುಗುರಿಗಳನ್ನು ಚನ್ನಾಗಿ ತೂಗಿ ಅಳೆದುಕೊಂಡು ಮಾಡಬೇಕಾದ್ದನ್ನು ಮಾಡಬೇಕಲ್ಲದೆ, ಸುಮ್ಮನೆ ದುಡುಕಲಾಗದು.’ ಎಂದು ಒಳದನಿಯೊಂದು ಅವನನ್ನು ಚನ್ನಾಗಿ ಜಬರಿಸಿತು. ಡಿಮಿಟ್ರಿಯ ಮೈಮೇಲೆ ಅರಿವು ಬಂತು; ಆದರೂ ವಿಚಾರಗಳ ಗೊಂದಲ ತಪ್ಪಲಿಲ್ಲ. ಮಲಗಿಬಿಟ್ಟರಾದರೂ, ಈ ವಿಚಾರಗಳ

ಕಾಟವು ತಪ್ಪಬಹುದು; ಏನೆಂಬುದನ್ನು ನಾಳೆ ಬೆಳಿಗ್ಗೆ ಎದ್ದು ನಿಧಾನವಾಗಿ ವಿಚಾರ ಮಾಡೋಣಂತೆ! ಎಂದು ಮಲಗಿದನು.

ಮರುದಿನ ಬೆಳಿಗ್ಗೆ ಒಂಭತ್ತು ಗಂಟೆಗೆ ಎದ್ದನು. ಅವನ ಕಾರಕೂನನು ಅವನಿಗೋಸುಗ ಬೆಳಗಿನ ತಿಂಡಿಯ ವ್ಯವಸ್ಥೆಯನ್ನು ಮಾಡಿಸಿಟ್ಟಿದ್ದನು. ಒಡೆಯನು ಎದ್ದುದನ್ನು ನೋಡಿ, 'ರೈತರೆಲ್ಲರೂ ಕೂತುಕೊಂಡಿದ್ದು ತಮ್ಮ ದಾರಿಕಾಯುತ್ತಿರುವರೆಂದು ಸೂಚನೆ ಕೊಟ್ಟನು. ಡಿಮಿಟ್ರಿಯು ಪಲಂಗದಿಂದ ಟಣ್ಣನೆ ಜಿಗಿದು ಮುಖ ತೊಳೆದು ಹಲ್ಲು ಉಜ್ಜಿಕೊಂಡು, ತತ್ಕಾಲದ ಮಟ್ಟಿಗೆ ಕೊಂಚ ಫಲಾಹಾರ ಮಾಡಿದನು. ಕಿಡಿಕೆಯೊಳಗಿಂದ ಹಣಿಕಿ ನೋಡಲಾಗಿ, ಟೇನಿಸ್ ಗ್ರಾವುಂಡಿನ ಮೇಲೆ ರೈತರೆಲ್ಲರೂ ಬಂದು ಕುಳಿತಿರುವಂತೆ ಕಾಣಿಸಿತು. ತಾನೂ ಲಗುಬಗೆಯಿಂದ ಉಡುಪು ಹಾಕಿಕೊಂಡು ರೈತರು ನೆರೆದ ಸ್ಥಳಕ್ಕೆ ಬಂದನು. ಸಂಗಡ ಕಾರಕೂನನು ಇದ್ದೇ ಇದ್ದನು. ಅವನು ಸ್ವಲ್ಪ ಮುಂದುಮುಂದಕ್ಕೆ ಹೋಗಿ, ರೈತರನ್ನೆಲ್ಲ ಕುರಿತು, 'ಧಣಿಗಳು ನಿಮ್ಮೆಡೆಗೆ ಬರುತ್ತಿದ್ದಾರೆ. ನಿಮಗೇನು ಬೇಕೆಂಬುದನ್ನು ಕೇಳಿಕೊಳ್ಳಿರಿ! ಅವರೇನೋ ನಿಮ್ಮ ಮೇಲೆ ಅನುಗ್ರಹ ಮಾಡಲಿಕ್ಕೆ ಸಿದ್ಧರಿದ್ದಾರೆ. ನೀವು ಮಾತ್ರ ಅದಕ್ಕೆ ಪಾತ್ರರಿಲ್ಲ' ಎಂದು ರೈತರನ್ನಷ್ಟು ಬೀಳುಗಳೆದು ನುಡಿದನು. ಡಿಮಿಟ್ರಿಯು ಬಂದು ಒಂದೆಡೆ ಕುರ್ಚಿಯ ಮೇಲೆ ಕೂತುಕೊಂಡ. ಎಲ್ಲ ರೈತರು ತಮ್ಮತಮ್ಮ ಟೊಪ್ಪಿಗೆ ತೆಗೆತೆಗೆದು ನಮಸ್ಕಾರ ಮಾಡಿದರು. ಕೂಡಿದ ರೈತರಲ್ಲೊಬ್ಬ ಕೆಂದಗೂದಲಿನ ಬಾಯಿಬಡಕನು ಕೂಡಲೇ ಕುಳಿತಲ್ಲಿಯೇ ಕುಳಿತು 'ಅದೇಕೆ ಸ್ವಾಮಿ, ನಾವೇಕೆ ಪಾತ್ರರಿಲ್ಲ.' ಧಣಿಯರ ದೆಸೆಯಿಂದ ನಾವು ಬೆವರು ಬಸಿದು ದುಡಿಯುವದಿಲ್ಲವೇ ? ಧೊರೆಸಾನಿಯವರು ಇರುವವರೆಗೆ ನಾವೆಲ್ಲರೂ ಹೇಗೆಂದರೆ, ಮಕ್ಕಳಂತೆ ಇದ್ದೆವಲ್ಲಾ ? ಅಂದ ಮೇಲೆ ಈಗಲೇ ಯಾಕೆ ತಂಟೆ? ನಮ್ಮ ಸಣ್ಣ ಧಣಿಯರು ನಮ್ಮನ್ನು ನಡು ನೀರಲ್ಲಿ ಕೈ ಬಿಡಬಾರದೆಂದು ಬೇಡಿಕೊತೇವೆ.' ಎಂದನು. ಅಷ್ಟರಲ್ಲಿ ಇನ್ನೊಬ್ಬ ಹರವಾದ ಎದೆಯ ಒಕ್ಕಲಿಗನು 'ನಮಗೆ ಇನ್ನಷ್ಟು ಭೂಮಿಕೊಡಬೇಕು ಧಣಿಯರು. ಈಗ ನಮಗೆ ಕೊಟ್ಟಷ್ಟರಿಂದ ನಮ್ಮ ಹೊಟ್ಟೆ ತುಂಬುವದಿಲ್ಲ.' ಎಂದು ನುಡಿದನು.

'ಹೌದು. ನಾನು ಕೂಡ ಅದಕ್ಕಾಗಿಯೇ ನಿಮ್ಮನ್ನೆಲ್ಲ ಕರೆಯಿಸಿದ್ದು; ನೀವು ಇಷ್ಟಪಟ್ಟರೆ, ನಿಮ್ಮ ವಶದಲ್ಲಿರುವ ಎಲ್ಲ ಭೂಮಿಯನ್ನು ನಿಮಗೆ ಸಾಗು ಮಾಡಲಿಕ್ಕೆ ಕೊಡಿಸುವೆ.' ಎಂದು ಕಾರಕೂನನು ಹೇಳಿದನು. ರೈತರು ಸುಮ್ಮನಿದ್ದರು. ಬೇಕು ಅನ್ನಲಿಲ್ಲ ಬೇಡ ಅನ್ನಲಿಲ್ಲ.

'ಇದುನೋಡಿ, ದಣಿಯರು ನಿಮಗೆ ಬಹು ಇಳಿಲಾವಣಿಗೆ ತಮ್ಮ ಭೂಮಿಯನ್ನು ಸಾಗುವಳಿ ಮಾಡಿಕೊಳ್ಳಲಿಕ್ಕೆ ಕೊಡುವವರಿದ್ದಾರೆ. ಚನ್ನಾಗಿ ಮೈಮುರಿದುಡಿದು ಬದುಕು ಮಾಡಿದರೆ, ನಿಮಗೆ ನಾಲ್ಕು ದುಡ್ಡು ಉಳಿತಾಯವಾಗುವದು.' ಎಂದು ಕಾರಕೂನನು ತಿಳಿಹೇಳಿದನು.

'ಹಾಗೆಲ್ಲಾ ಮಾತಾಡುವದು ಸುಲಭ ಸ್ವಾಮಿ. ಮಾಡುವದು ಕಷ್ಟ. ಹಾಗಾದರೆ, ನೀವು ನಮ್ಮ ನಮ್ಮ ಹೊಲಗದ್ದೆಗಳಿಗೆ ಬೇಲೀ ಹಾಕಿಕೊಡುತ್ತೀರಾ?' ಎಂದು ಮತ್ತೊಬ್ಬ ರೈತನು ಕೇಳಿದನು.

'ಏನು ಬಿಡಿರಿ! ಹೋದವರ್ಷ ನಾನು ನನ್ನ ಹೊಲಕ್ಕೆ ಬೇಲಿಹಚ್ಚಬೇಕಂತಿದ್ದೆ; ಒಂದು ಗಿಡವನ್ನೂ ಕಡಿಸಿದ್ದೆ. ನಿಮಗೆ ಗೊತ್ತಿಲ್ಲವೇ? ಹೇಗೆ ಮುಖಹರಕೊಂಡಿರೆಂಬದು! ಅದು ಅಲ್ಲಿಯೇ ಕೊಳೆತು ಹೋಯಿತು. ಹೊರ್ತಾಗಿ ನನಗೇನೂ ಬೇಲಿಗೆ ಕಾಡಕಟ್ಟಿಗೆ ಸಿಗಲಿಲ್ಲ.' ಅಂದನು.

ಡಿಮಿಟ್ರಿಯು ತನ್ನ ಕಾರಕೂನನನ್ನು ಕುರಿತು 'ಇವರೇನು ಅನ್ನುತ್ತಾರೆ' ಎಂದು ಕೇಳಿದನು. ಅದನ್ನೆಲ್ಲ ಅವನು ತಿಳಿಸಿ ಹೇಳಿದ. ನೆರೆದ ಎಲ್ಲ ಜನರ ಅಂಬೋಣ ಏನೇನಿರುವದೆಂಬುದನ್ನು ಕೇಳಿಕೊಳ್ಳುವದೆಂದರೆ, ಅವನಿಗೆ ತಲೆಬೇಸರ; ಆದುದರಿಂದ ಮಿಕ್ಕ ಹಾಳು ರಗಳೆಯನ್ನು ಅಲ್ಲಿಯೇ ನಿಲ್ಲಿಸಿ 'ಒಳ್ಳೆದು. ಅದೆಲ್ಲ ಇರಲಿ. ಈಗ ನಿಮಗೆ ನಾನು ಎಲ್ಲ ಭೂಮಿಯನ್ನು ಗುತ್ತಿಗೆಯಿಂದ ಸಾಗುಮಾಡಲಿಕ್ಕೆ ಬಿಟ್ಟುಕೊಟ್ಟರೆ ನೀವೆಷ್ಟು ಕೊಡುವಿರಿ?' ಎಂದು ಡಿಮಿಟ್ರಿಯು ಕೇಳಿದ. 'ನಾವೇನು ಹೇಳೋಣ! ದಣಿಯರ ಸೊತ್ತು. ನೀವು ಒಡೆಯರು. ಅದೆಲ್ಲಾ ನಿಮ್ಮ ಕೆಲಸ,' ಎಂದು ರೈತರು ನುಡಿದರು.

ಡಿಮಿಟ್ರಿಯು ಹೀಗೆ ತುಸು ಹೊತ್ತು ಲೆಕ್ಕಹಾಕಿಕೊಂಡು ಆಲೋಚನೆ ಮಾಡಿದ. ತನ್ನ ನೆರೆಯ ಇನಾಮದಾರರಿಗಿಂತ ಕಡಿಮೆ ಲಾವಣಿ ಹೇಳಿದ;

ಆದರೂ ರೈತರು ಬಹಳ ಏರಲಾವಣಿ ಆಯಿತು. ಇಷ್ಟುಹಣ ಸಲ್ಲಿಸುವದು ನಮ್ಮಿಂದಾಗದ ಮಾತೆಂದು ಗುಣಗುಟ್ಟಿದರು. ತನ್ನ ಹೇಳಿಕೆಯಂತೆ ರೈತ ರೆಲ್ಲರೂ ಬಹು ಸಂತೋಷದಿಂದ ನಡೆಯಬಹುದೆಂದು ಅಂದುಕೊಂಡಿದ್ದ ಡಿಮಿಟ್ರಿಯು; ಆದರೆ ಅದೆಲ್ಲ ಜೊಳ್ಳಾಯಿತು; ಯಾರ ಮುಖದ ಮೇಲೆಯೂ ಸಂತೋಷದ ಚಿನ್ಹ ಕಂಡುಬರಲಿಲ್ಲ; ಕೊನೆಗೆ ಗಂಡಾಗುಂಡಿಮಾಡಿ, ಕಾರಕೂನನು ಇಂತಿಷ್ಟು ಲಾವಣಿ ಕೊಡಬೇಕೆಂದು ಹೊಂದಿಸಿದ. ರೈತರು ತಮ್ಮತಮ್ಮೊಳಗೆ ಗುಲ್ಲುಮಾಡಿ ಮಾತನಾಡುತ ತಮ್ಮ ಹಳ್ಳಿಗೆ ನಡೆದರು; ಇತ್ತ, ಡಿಮಿಟ್ರಿಯು ಮತ್ತು ಅವನ ಕಾರಕೂನ ಇವರಿಬ್ಬರು ಕರಾರುಪತ್ರ ಗಳನ್ನು ಬರೆಯಲಿಕ್ಕೆಂದು ತಮ್ಮ ಆಫೀಸಿನ ಕೋಣೆಗೆ ಹೊದರು. ರೈತರ ಮಾತಿನ ಮೇಲಿಂದ ಅವರಿನ್ನೂ ಅಗ್ಗ ಲಾವಣಿಯಿಂದ ಹೋಲ ಬೇಡುವವ ರಿದ್ದರು. ಅವರಿಗೆ ಈಗ ಕೊಟ್ಟಷ್ಟಕ್ಕೆ ತೃಪ್ತಿಯಾಗಿಲ್ಲವೆಂದು ಕಂಡು ಬಂತು ಡಿಮಿಟ್ರಿಗೆ. ಮರುದಿನ ಕರಾರುಪತ್ರಗಳ ಮೇಲೆ ಎಲ್ಲರ ರುಜುವಾತು ಗಳಾದವು. ಡಿಮಿಟ್ರಿಯ ಮನಸಿನಲ್ಲಿಯೂ ಏನು ಕಾರಣವೋ ಸಮಾಧಾನ ವಿರಲಿಲ್ಲ; ಹುಂ. ಆಗಲಿ ನಾನಿನ್ನು ಹೊರಡುವೆ ಎಂದು ಬಂಡಿಯನ್ನು ಹೂಡಿಸ ಲಿಕ್ಕೆ ಕಾರಕೂನನಿಗೆ ಆಜ್ಞಾಪಿಸಿದ. ಕಾರಕೂನನು ಸಿದ್ಧವಾಗಿದೆ ಎಂದು ಹೇಳಲು, ಎಲ್ಲ ರೈತರ ಮುಜರೆ ಸ್ವೀಕರಿಸುತ್ತ ಬಂಡಿಯಲ್ಲಿ ಕುಳಿತನು. ಡಿಮಿಟ್ರಿಯು ಬಹು ಸೂಕ್ಷ್ಮ. ಅವನಿಗೆ ರೈತರ ಮುಖದ ಮೇಲೆ ಇನ್ನೂ ಸಂತೋಷದ ಲಕ್ಷಣಗಳು ತೋರಲಿಲ್ಲ. ಎಲ್ಲರೂ ಮುಖ ಸಪ್ಪಗೆ ಮಾಡಿ ಕೊಂಡು ನಿಂತಿರುವದನ್ನು ಕಂಡು ಅವನಿಗೂ ಅಸಮಾಧಾನವೆನಿಸಿತು; ನಾಚಿಕೆ ಎನಿಸಿತು.

ಅಲ್ಲಿಂದ ಹೊರಟವನು ಡಿಮಿಟ್ರಿಯು ತನ್ನ ಸೋದರತ್ತೆಂದಿರ ಹಳ್ಳಿಗೆ ನಡೆದನು. ತನ್ನ ಚಿಕ್ಕವಯಸಿನ ಬಹು ಭಾಗವನ್ನೆಲ್ಲ ಅಲ್ಲಿಯೇ ಕಳೆದಿದ್ದರಿಂದ, ಅದು ಅವನಿಗೆ ಇನ್ನಿಷ್ಟು ಪ್ರಿಯವಾಗಿತ್ತು. ಅಲ್ಲಿಯೇ ಕಟೊಷಳ ಭೆಟ್ಟಿಯಾಗಿ ಆಕೆಯೊಡನೆ ಪ್ರೀತಿ ಬೆಳೆದಿತ್ತು; ಆದುದರಿಂದ ತನ್ನ ತಾರುಣ್ಯದ ಆನಂದಕ್ಕೆ ಕಾರಣವಾದ ಆ ಸ್ಥಳವನ್ನೂ ನೋಡಬೇಕೆಂಬ ಹಿರಿಯಾಸೆ; ಮೇಲಾಗಿ ಕಟೊಷಳಿಗೆ ಹುಟ್ಟಿದ ಕೂಸು ಹೇಗೆ ಎಲ್ಲಿ ಸತ್ತಿತೆಂಬುದನ್ನೂ ಕೇಳುವದೊಂದು ಒಳ ಹಂಬಲ ಅವನಿಗೆ.

ಇವೆಲ್ಲ ಒಳಗುಟ್ಟುಗಳಿಂದ ಡಿಮಿಟ್ರಿಯು ತನ್ನ ಸೋದರತ್ತೆಯವರ ಹಳ್ಳಿಗೆ ಹೋದ. ಅವನ ಬಂಡಿಯು ಅಲ್ಲಿಗೆ ಬೆಳಗುಮುಂಜಾನೆ ತಲ್ಪಿತು. ಎಲ್ಲಿ ನೋಡಿದಲ್ಲೆಲ್ಲ ಅವನಿಗೆ ಹಾಳುಹಾಳು ಕಾಣಿಸಿತು; ಸೋದರತ್ತೆಂದಿರು ಇದ್ದ ಮನೆ, ದನಕಟ್ಟುವ ಕೊಟ್ಟಿಗೆ, ಎಲ್ಲವೂ ಹಾಳುಬಿದ್ದಿದ್ದವು. ಮನೆಗೆ ಹಾಕಿದ್ದ ಕಬ್ಬಿಣದ ಜಂತಿಗಳು ಜಂಗುಗಟ್ಟಿ ಕೆಂಪು ಹಳದಿ ಬಣ್ಣಾಗಿದ್ದವು; ಮೇಲೆ ಹೊಚ್ಚಿದ್ದ ತಗಡುಗಳು ಗಾಳಿಗೆ ಹಾರಿ ಎಲ್ಲಿಯೋ ದೂರದಲ್ಲಿ ಹೋಗಿ ಬಿದ್ದಿದ್ದವು; ಇದ್ದ ಕೆಲವು ಅಲ್ಲಿಯೇ ಬಾಗಿದ್ದವು. ಮನೆಯ ಎರಡೂ ಮಗ್ಗಲಿಗಿದ್ದ ಎರಡು ಸುಂದರವಾದ ಪೌಳಿಗಳು— ಇದರಲ್ಲಿ ಒಂದನ್ನು ನೋಡಿದೊಡನೆ ಡಿಮಿಟ್ರಿಗೆ ಕಟುಃಷಳ ನೆನಪಾಯಿತು— ಬಿರುಕು ಬಿಟ್ಟು ಬೀಳುವಂತಾಗಿದ್ದವು. ಹಿಂದಿನ ಮಗ್ಗಲಿನ ಅಡಿಗೆಮನೆ ಮುಂತಾದವು ಗೋಡೆಗಳು ಬೋಳಾಗಿ ನಿಂತಿದ್ದು, ಹಸಿ ಜೌಳದ ಮೂಲಕ ಅಲ್ಲಿಯೂ ಹುಲ್ಲು ಕರಿಕೆ ಬೆಳದಿತ್ತು. ಹೂದೋಟ ಒಂದು ಮಾತ್ರ ಚನ್ನಾಗಿತ್ತು. ಹೂವಿನಗಿಡಗಳು ವಿಶಾಲವಾಗಿ ಬೆಳೆದು ಬಗೆಬಗೆಯ ಹೂಗಳಿಂದ ಮಘಮಘಿಸುತಿದ್ದವು.

ಅಲ್ಲಿಯ ಒಂದು ಹಾಳು ಕಟ್ಟೆಯ ಮೇಲೆ ಕುಳಿತು ಹಿಂದಿನದೆಲ್ಲವನ್ನೂ ನೆನವು ಮಾಡಿಕೊಂಡನು. ಹಸುಮಗುವಿನಂಥ ತನ್ನ ಆ ನಿರ್ಮಲವೃತ್ತಿ, ಆ ತೋಟದ ಸೊಬಗು, ಅಡ್ಡಾಡಲಿಕ್ಕೆ ಹೋಗುವದರ ಸೊಗಸು, ಇವೆಲ್ಲವು ಜ್ಞಾಪಕಕ್ಕೆ ಬಂದವು; ಆದರೆ, ಆ ಸುಖವು ಇನ್ನೆಂತು ಸಿಕ್ಕೀತೆಂಬುವ ನಿರಾಸೆಯು ಮನಸಿನಲ್ಲಿ ಮೂಡಿದೊಡನೆ ಅವನ ಮುಖ ನೆಲಕ್ಕೆ ಬಿದ್ದಷ್ಟು ವ್ಯಥೆಯಿಂದ ಬಾಡಿಬತ್ತಿತು.

ಈ ಹಳ್ಳಿಯಲ್ಲಿಕೂಡ ಡಿಮಿಟ್ರಿಯ ಕೆಲಭೂಮಿ ಆಸ್ತಿ ಇತ್ತು; ಆದುದರಿಂದ, ಇಲ್ಲಿಯ ರೈತರ ಸಂಗಡಲೂ ನಾಲ್ಕು ಮಾತು ಆಡಿ, ಲಾವಣಿಯ ವಿಚಾರವನ್ನು ನಿಷ್ಕರ್ಷಕ್ಕೆ ತರಬೇಕಾದ್ದರಿಂದ, ಡಿಮಿಟ್ರಿಯು ತನ್ನ ತೋಟದಿಂದ ಹಳ್ಳಿಗೆ ಹೋದನು; ಮತ್ತು ಎಲ್ಲರಿಗೆ ಭೆಟ್ಟಿಯಾಗಲು ಹೇಳಿಕಳಿಸಿದನು.

ಹಳ್ಳಿಯೊಳಗಷ್ಟು ಅಡ್ಡಾಡಿಕೊಂಡು ಬರಬೇಕೆಂದು ಡಿಮಿಟ್ರಿಯು ಹೊರಟನು. ದಾರಿಯಲ್ಲಿ ಕೆಲ ಹಳ್ಳಿಯ ಹುಡುಗರು, ಒಬ್ಬಿಬ್ಬರು ಹಿರಿಯರು

ಮೈಯಲ್ಲಿ ಒಂದು ಅಂಗಿ, ತಲೆಗೊಂದು ಸೊಟ್ಟ ಪಟ್ಟೆ ಟೊಪ್ಪಿಗೆ ಹಾಕಿಕೊಂಡು ನಿಂತಿದ್ದರು. ಅವರೂ, ದೊಡ್ಡ ಮನುಷ್ಯರು ತಮ್ಮ ಊರಿಗೆ ಬಂದಿರುವರೆಂದು ತಿಳಿದು ಅವನ ಬೆನ್ನಟ್ಟಿದರು. ಡಿಮಿಟ್ರಿಯು ಹಿಂತಿರುಗಿ ನೋಡಿ, 'ಇಲ್ಲಿ, ಮ್ಯಾಟ್ರಿನಾ ಹರೀನಾ ಅವಳ ಮನೆ ಎಲ್ಲಿ?' ಎಂದು ವಿಚಾರಿಸಿದನು. ಸಂಗಡ ಇದ್ದ ಒಬ್ಬ ಹುಡುಗ ನಕ್ಕನು; ಇನ್ನೊಬ್ಬನು 'ಏನೋ, ನಮಗೆ ಗೊತ್ತಿಲ್ಲ! ಎಂದು ಸ್ವಲ್ಪ ಎಟ್ಟೆ ಮಾತನಾಡಿದ. ಹಿರಿಯವನು 'ಮ್ಯಾಟ್ರಿನಾ ಹರೀನಾ ಎಂಬವಳೇ?' ಎಂದು ಆಲೋಚನೆಯಿಂದ ತುಟಿಗೆ ಕೈ ಇಟ್ಟು ಕೊಂಡು 'ಓಹೋ! ಬಲ್ಲೆ. ಮುದುಕಿ ಏನು?' ಅಂದನು. 'ಹೌದು ಮುದುಕಿ' ಎಂದು ಡಿಮಿಟ್ರಿಯು ಉತ್ತರಕೊಡಲು, 'ಆಕೆ, ಇದೇ ಬೀದಿ ಯಲ್ಲಿ ಕೊನೆಯ ಮುರುಕು ಗುಡಿಸಲಲ್ಲಿರುವಳು. ತೋರಿಸುವೆ ಬನ್ನಿರಿ.' ಎಂದನು ಅವನ ಸಂಗಡ ಎಲ್ಲರೂ ನಡೆದರು.

ಡಿಮಿಟ್ರಿಗೆ ಯಾವಾಗಲೂ ಹಿರಿಯರಿಗಿಂತಲೂ ಚಿಕ್ಕ ಹುಡುಗರೆಂದರೆ ಬಲು ಸಂತಸ. ಅವರನ್ನು ಕಂಡರೆ, ಅವರ ಮಾತಿನಂತೆಯೇ ಮಾತನಾಡು ವನು. ಚೇಷ್ಟೇ ಮಾಡುವನು. ಅವರಿಗೆ ಚಮತ್ಕಾರದ ಪ್ರಶ್ನೆಗಳನ್ನು ಹಾಕಿ ಸಂಗತಿಯನ್ನು ಕಲೆ ಹಾಕುವನು. ಹೀಗೆ ಅವನ ಸ್ವಭಾವಕ್ಕನುಸರಿಸಿ, ಡಿಮಿಟ್ರಿಯು 'ಈ ಊರಲ್ಲಿ ಬಹಳ ಬಡವರು ಯಾರೆಂಬುದು ನಿನಗೆ ಗೊತ್ತುಂಟೇ?' ಎಂದು ಕೇಳಿದನು. 'ಬಹಳ ಬಡವರೇ!' ಎಂದು ಧೇನಿಸಿ ಕೊಂಡಂತೆ ಮಾಡಿ ಅವನು 'ಇಬ್ಬರು ಮೂವರ ಹೆಸರು ಹೇಳಿದನು.' ಅವರಲ್ಲಿ ಮ್ಯಾಟ್ರಿನಾ ಎಂಬವಳ ಹೆಸರನ್ನೂ ಹೇಳಿದ್ದನು.

'ಮ್ಯಾಟ್ರಿನಾ ಬಹಳ ಬಡವಿ ಏನು?' ಎಂದು ಮತ್ತೆ ವಿಶೇಷ ಸಂಗತಿ ತಿಳಿದುಕೊಳ್ಳಲಿಕ್ಕೆಂದು ಪ್ರಶ್ನೆ ಮಾಡಿದನು.

'ಬಡವಿಯೇ ಸರಿ. ಸರಾಯಿಯ ವ್ಯಾಪಾರದಿಂದ ಹೊಟ್ಟೆ ತುಂಬಿ ಕೊಳ್ಳುವಳು.' ಹೀಗನ್ನುವ ಹೊತ್ತಿಗೆ ಆಕೆಯ ಮನೆಯು ಹತ್ತರವೇ ಬಂದರು. ಡಿಮಿಟ್ರಿಯು 'ಇದೇ ಮನೆ ಏನು'? ಎಂದು ಅವರ ಕಡೆ ಮುಖತಿರುವಿ ಕೇಳಿ, 'ನಾನು ಕೊಂಚ ಒಳಗೆ ಹೋಗಿ ಮಾತನಾಡಿಸಿಕೊಂಡು ಬರುವೆ'

ಎಂದು ಹೇಳಿ ಅಂಗಳದೊಳಗೆ ಹೊಕ್ಕನು. ಮುಂದೆ ಗುಡಿಸಲು. ಅದರೊಳಗೆ ಕಾಲಿಡುವಾಗ ಬಾಗಿಲ ಮೇಲು ಚೌಕಟ್ಟು ಅವನ ತಲೆಗೆ ಬಡಿಯಿತು. ಟೊಪ್ಪಿಗೆ ಸರಿಪಡಿಸಿಕೊಂಡು ಒಳಗೆ ಹೊಕ್ಕು ಅತ್ತಿತ್ತ ನೋಡಿದನು. ಒಂದೆರಡು ಚಿಕ್ಕಮಕ್ಕಳು ಅಲ್ಲಿ ಆಡುತ್ತಿದ್ದವು. ' ನೀವ್ಯಾರು ? ಏನು ಬೇಕು ' ಎಂದು ಕೇಳಿದರು; ಇಷ್ಟರಲ್ಲಿ ಒಳಗಿಂದ ಒಬ್ಬ ಮುದುಕಿಯು ಹೊರಗೆ ಬಂದಳು. ಆಕೆ ಮುಪ್ಪಿನವಳು. ಕೈಲಿಂದ ಕೆಲಸವಾಗದೆ ಕೈಲಾಗದವರು ಮೈಯೆಲ್ಲ ಹರಕೊಂಡರೆಂಬುವ ಗಾದೆಯ ಮಾತಿನಂತೆ, ಉರಿಮೋರೆಯಿಂದ ಇದ್ದಳು; ಮೇಲಾಗಿ ' ಹೊತ್ತಲ್ಲದ ಹೊತ್ತಿನಲ್ಲಿ ಕೂಡ ಆಕೆ ಸರಾಯ ಮಾರುತ್ತಿದ್ದುದರಿಂದ, ತನ್ನ ಕಳ್ಳತನವು ಯಾರಿಗೂ ತಿಳಿಯಬಾರದೆಂದು ಯಾವಾಗಲೂ ಆಕೆಯ ಮನಸ್ಸು ಹುಳ್ಳುಳ್ಳಗೆ ಇರುತ್ತಿದ್ದುದರಿಂದ, ಯಾರಾದರೂ ಹೇಳದೆ ಕೇಳದೆ ಒಮ್ಮೆಲೆ ಮನೆಯಲ್ಲಿ ಸೇರಿದರೆ, ಅವರ ಮೇಲೆ ನಾಯಿಯಂತೆ ಅದ್ರ ಎಂದು ಹೋಗುವಳು. ಬಾಯಿಂದ ಥಡಾ ಥಡಾ ಬೈಯ್ಯುವಳು. ಮುದುಕಿ ಆದ್ದರಿಂದ ಆಕೆಯ ಬಾಯಿ ಕಟ್ಟುವದು ಎಲ್ಲರಿಗೂ ಕಷ್ಟವಾಗುತ್ತಿತ್ತು. ಡಿಮಿಟ್ರಿಯು ಆಕೆಯ ಉರಿಮೋರೆ ನೋಡಿ ' ನಾನು ನೆರೆಯ ಹಳ್ಳಿಯ ಇನಾಮದಾರ. ನಿಮಗೆ ಕೆಲವು ಮಾತು ಕೇಳಬೇಕಿತ್ತು; ಅಂತ, ಬಂದಿದ್ದೆ ' ಅಂದನು. ಮುದುಕಿಯ ಮುಖಚರ್ಯೆಯಲ್ಲಿರುವ ಉರಿಯು ತುಸು ನೊಂದದಂತಾಗಿ, ಸಮಾಧಾನದಿಂದ ' ನೀವೋ ? ನಾನು ಹುಚ್ಚಿ, ಯಾರೋ ಎಂದು ತಿಳಿದಿದ್ದೆ ' ಎಂದು ' ಕ್ಷಮಿಸಿರಿ ! ದಯವಿಟ್ಟು ?' ಹೀಗೆಂದು ಮೃದುವಾಗಿ ಆಡಿದಳು.

' ನಾನು ನಿಮಗೆ ಗುಟ್ಟಿನದೊಂದು ಮಾತು ಕೇಳಬೇಕಾಗಿದೆ ? ಎಂದು ಹಿಂದುಮುಂದೆ ನೋಡುತ್ತ ನುಡಿದನು. ಮುದುಕಿಯು ' ಆಗಬಹುದು. ಏನೂ ಸಂಕೋಚಬೇಡ. ಬೇಕೆಂದರೆ, ಬಾಗಿಲು ಮುಂದಕೆ ಮಾಡುವೆ. ನಾನು ಯಾರೋ ಎಂದು ಭಾವಿಸಿದೆ; ನೀವು ನಮ್ಮವರು ಕೂತುಕೊಳ್ಳಿರಿ ಸರಿಯಾಗಿ ? ಎಂದು ಒಳ್ಳೇ ಮಾತಿನಿಂದ ಕುಳ್ಳಿರಹೇಳಿದಳು. ಡಿಮಿಟ್ರಿಯಾದರೂ ಎಷ್ಟೆಷ್ಟೂ ಸಂಕೋಚಪಟ್ಟುಕೊಳ್ಳದೆ ಕುಳಿತುಕೊಂಡ. ಮುದುಕಿಯು

ಅವನ ಮುಂದೆ ನಿಂತು ‘ ನೀವು ದೊಡ್ಡವರಾಗಿದ್ದೀರಿ. ಚಿಕ್ಕವರಿದ್ದಾಗ ನಾನು ನಿಮ್ಮನ್ನು ನೋಡಿದ್ದು ? ಹೀಗೆಂದು ಮಾತಿಗೆ ಮೊದಲು ಮಾಡಿದಳು. ‘ ಸರಿ. ಈಗ ನಾನು ನಿಮ್ಮೆಡೆಗೆ ಬಂದ ಕೆಲಸದ ವಿಷಯ. ನಿಮಗೆ ಮಾಸ್ಲೋವಾ ಕಟೊಷಳ ಜ್ಞಾಪಕವಿದೆಯೇ ? ಅಂದನು. ಹೀಗೆ ಸ್ವಲ್ಪ ಯೋಚಿಸಿಕೊಂಡಂತೆ ಮಾಡಿ ‘ ಆಕೆ ! ಆ ಹುಡಿಗೆ. ಹೌದು ಬಲ್ಲೆ. ಆಕೆ ನನ್ನ ಸೋದರ ಸೊಸೆ. ಜ್ಞಾಪಕ ಇರದೆ ಏನು ಮಾಡೀತು ! ಆಕೆಯ ದೆಸೆಯಿಂದಲ್ಲವೇ ನಾನು ಎಷ್ಟೋ ದಿನ ಕಣ್ಣೀರು ಅನ್ನ ಕೂಡಿಯೇ ಉಂಡೆ. ನಿಮ್ಮಿಂದೇ ಹುಡಿಗೆ ಕೆಟ್ಟಿತು. ಅದು ಹೇಗೆ ಮರವಾದೀತು ? ’ ಎಂದು ನುಡಿದು ನಿಟ್ಟುಸಿರುಬಿಟ್ಟಳು. ಆಮೇಲೆ ‘ ಆಕೆ ನನ್ನ ಮಾತು ಕೇಳಲಿಲ್ಲ. ಕೇಳಿದ್ದರೆ ಆಕೆಯ ಗತಿ ಹೀಗೆ ಕೆಡುತ್ತಿರಲಿಲ್ಲ. ಆಕೆ ನನ್ನ ಸೋದರ ಸೊಸೆಯಾದರೂ ಬಾಯಿಬಿಚ್ಚಿ ಹೇಳಬೇಕೆಂದರೆ, ಆದೇನು ಒಳ್ಳೇ ಹುಡಿಗೆಯಲ್ಲ. ಆಕೆಗೆ ಎಂಥಾ ಸ್ಥಳ ಗಂಟು ಹಾಕಿಕೊಟ್ಟಿದ್ದೆ. ಅದನ್ನೆಲ್ಲ ಕೆಡಿಸಿಕೊಂಡು ಬಿಟ್ಟಳು. ಮಾಡುವದೇನು ? ’ ಅಂದಳು. ‘ ಅದೆಲ್ಲ ಹೋಗಲಿ ! ಈಗ ಆ ಮಗುವೆಲ್ಲಿ ? ’ ಅಂದನು. ‘ ಎಲ್ಲಿಂದರೆ, ಸತ್ತು ಹೋಯಿತು ’ ಅಂದಳು. ‘ ಮಗು ಹೇಗಿತ್ತು ? ’ ಎಂದು ತನ್ನತನದ ಹುಚ್ಚಿನಿಂದ ಡಿಮಿಟ್ರಿಯು ವಿಚಾರಿಸಿದ. ‘ ಹೇಗೆಂದರೆ, ಏನು ಹೇಳಲಿ ! ಅಂಥಾ ಮಕ್ಕಳೇ ಹುಟ್ಟುವದು ಅಪರೂಪ; ಹುಟ್ಟಿದರೂ ದಕ್ಕುವದು ಅಪರೂಪ. ನಿಮ್ಮ ಮುಖವನ್ನೇ ಹರಿದು ಹಚ್ಚಿದಂತಿತ್ತು ಕೂಸು ’ ಎಂದು ಎದೆಬಡಿದು ನುಡಿದಳು ಮುದುಕಿ. ಡಿಮಿಟ್ರಿಯು ಇಷ್ಟು ಸಂಗತಿಯನ್ನು ತಿಳಿದುಕೊಂಡ. ಮುಖ ಒಣಗಿಸಿಕೊಂಡು ‘ ಬರುತ್ತೇನೆ ’ ಎಂದು ಹೇಳಿ ಹೊರಟನು.

ಅಲ್ಲಿಂದ ಡಿಮಿಟ್ರಿಯು ಮರಳಿ, ತನ್ನ ರೈತರನ್ನು ಕಂಡು ಮಾತಾಡಲಿಕ್ಕೆ ಹೊರಟನು. ಹುಡುಗರು ಅವನ ಬೆನ್ನಟ್ಟಿದ್ದರಷ್ಟೇ ! ಅವರಿಗೂ ಡಿಮಿಟ್ರಿಯು ಕಿಸೆಯೊಳಗಿಂದ ಕೆಲವು ಆಣೆಗಳನ್ನು ಕೊಟ್ಟುಕಳುಹಿದನು. ಅಷ್ಟರಲ್ಲಿ ಕೆಲ ಬಡ ಹೆಂಗಸರು ತಮ್ಮ ತಮ್ಮ ಮಕ್ಕಳನ್ನು ಬಗಲಲ್ಲಿ ಎತ್ತುಕೊಂಡು ಬಹು ದೀನವದನದಿಂದ ಬಂದರು. ಡಿಮಿಟ್ರಿಯು ಅವರ ಕೈಯಲ್ಲಿಯೂ ಕೆಲವು ರೂಪಾಯಿಗಳನ್ನಿಟ್ಟನು. ಹಳ್ಳಿಯ ಜನರು, ಅವರ ಮಕ್ಕಳು, ಇವರೆಲ್ಲರ ದುಃಸ್ಥಿತಿಯನ್ನು ಕಂಡು ಅವನ ಮನಸು ಬಹು ನೊಂದಿತು.

ಇಷ್ಟರಲ್ಲಿ ಒಬ್ಬ ರೈತನು ಬಂದು 'ರೈತರೆಲ್ಲರೂ ಸಾಯಂಕಾಲಕ್ಕೆ ಇಂತಹ ಸ್ಥಳದಲ್ಲಿ ಕೂಡುವದು ಗೊತ್ತಾಗಿದೆ. ಆ ಸಮಯಕ್ಕೆ ತಾವೂ ಬರಬೇಕು.' ಎಂದು ಹೇಳಿ ನಡೆದನು. ಅಲ್ಲಿಯವರೆಗೆ ಸುಮ್ಮನೆ ಅಲ್ಲಲ್ಲಿ ತಿರುಗಿ ಕಾಲಕಳೆಯೋಣವೆಂದು ಡಿಮಿಟ್ರಿಯು ಒಂದು ತೋಟದಲ್ಲಿ ಹೊಕ್ಕು, ಅಲ್ಲಿಯ ಹೂಗಳನ್ನು ಮೂಸಿನೋಡುತ್ತಲೂ ಯೋಚನೆ ಮಾಡುತ್ತಲೂ ಕುಳಿತನು. 'ಏನಿದು? ಹಳ್ಳಿಯ ಸ್ಥಿತಿಯು? ಒಳ್ಳೇ ಅನ್ನ-ಆಹಾರವಿಲ್ಲದೆ ಜನರು ಸಾಯುತ್ತಿದ್ದಾರೆ; ಕೆಲವರು ಸತ್ತೇ ಹೋಗಿದ್ದಾರೆ. ಸಣ್ಣ ಮಕ್ಕಳಂತೂ ಕೈಕಾಲು ಸಣ್ಣಾಗಿಯೂ ಹೊಟ್ಟೆಡುಮ್ಮಾಗಿಯೂ ನಡೆಯಲಿಕ್ಕೆ ಕೂಡ ಬರದಂತೆ ನರಳುತ್ತಿವೆ. ಹೆಣ್ಣುಮಕ್ಕಳು ಹೂಂ ಅಂತ ದುಡಿದುಡಿದು ನವೆಯು ತ್ತಿದ್ದಾರೆ; ಸಾಕಷ್ಟು ಅವರ ಹೊಟ್ಟೆಗೆ ಸಿಗುವದಿಲ್ಲ. ದೊಡ್ಡವರ ಬೆಳಗೆಗೆ ಎಷ್ಟು ಬೇಕಷ್ಟು ಪೋಷಕ ಆಹಾರ ಕೂಡ ಸಿಕ್ಕುವದಿಲ್ಲ. ಹೀಗಿರುವದರಿಂದಲೇ ಇಲ್ಲಿಯ ಜನರ ಸ್ಥಿತಿಯು ಇಷ್ಟು ಕೀಳಾಗಿದೆ. ಇದಕ್ಕೆಲ್ಲ ಬೇರೆಂದರೆ, ಬಡ ತನ. ಜಮೀನದಾರ ಇನಾಮದಾರ ಎಂಬುವರು ಮೈಮುರಿ ಅವರನ್ನು ದುಡಿಸಿಕೊಂಡು ಅವರ ಹೊಟ್ಟೆಗೆ ಸಾಕಾಗುವಷ್ಟು ಕೂಡ ಹಣ ಕೊಡದಿರು ವದೇ. ಮನೆಗಳಲ್ಲಿ ದನಕರುಗಳನ್ನು ಕಟ್ಟಿ ಹಾಲು ಉಣ್ಣಬೇಕಾದರೆ, ದನ ಗಳಿಗೆ ಮೇವು ಮಿಡಚಿ ಹೊಟ್ಟು ಕಣಿಕೆಯ ಸಮೃದ್ಧಿ ಇಲ್ಲ; ಮೇಯಿಸಲಿಕ್ಕೆ ಹುಲ್ಲುಗದ್ದೆಗಳಿಲ್ಲ. ಯಾವ ಭೂಮಿಯಿಂದ ಅವರ ಪೋಷಣೆಯಾಗಬೇಕೋ ಅದೇ ಅವರ ಕೈಯಲ್ಲಿಲ್ಲದ್ದರಿಂದ ಅವರು ದುಃಸ್ಥಿತಿಗೀಡಾಗಿದ್ದಾರೆ; ಇತ್ತ, ಇನಾಮದಾರರು ಭೂಮಿಯ ಒಡೆತನ ತಮ್ಮದೆಂದು, ಭೂಮಿಯಲ್ಲಿ ದುಡಿ ಯದೆ, ಬಂದ ಬೆಳೆಯನ್ನೆಲ್ಲ ತಾವೇ ಉಣ್ಣುವರು. ರೈತರು ಹೊಟ್ಟೆಗೆ ಹಿಟ್ಟಿಲ್ಲದೆ ದುಡಿದು ಹೊಲ ಸಾಗು ಮಾಡಬೇಕು, ಬಿತ್ತಬೇಕು, ಹರಗಬೇಕು, ಬೆಳೆಬಂದಮೇಲೆ ಅದನ್ನು ಜೀವದ ಹಂಗು ತೊರೆದು ಕಾಯಬೇಕು, ರಾತ್ರಿ ಹಗಲು ಚಳಿಮಳೆ ಎನ್ನದೆ, ಹೊಲದಲ್ಲಿ ಬಿದ್ದುಕೊಂಡು, ರಾಶಿಮಾಡಿ, ಒಡೆಯರ ಮನೆಗೆ ಒಯ್ದು ಹಾಕಬೇಕು; ಅವರು ಅದನ್ನೆಲ್ಲ ಮಾರಿ ಬೂಟು, ಹ್ಯಾಟು, ಬಣ್ಣದ ಬೆತ್ತ-ಬಡಿಗೆಗಳನ್ನು ಕೊಂಡು ಅವರು ಬೀದಿಯಲ್ಲಿ- ಇವರನ್ನು ಕಣ್ಣೆತ್ತಿ ಕೂಡ ನೋಡದೆ-ಮೆರೆಯಬೇಕು. ನಿಜವಾಗಿಯೂ ಇದು

ಭೀಕರ; ಆದರೂ ಜಗದ ವಾಡಿಕೆಯೇ ಇದು. ಏನೇ ಅಂದರೂ, ಇದಕ್ಕೇನಾದರೂ ಉಪಾಯ ಹುಡುಕಲಿಕ್ಕೆ ಬೇಕು; ಕೊನೆಗೆ ನಾವಾದರೂ ಇಂಥ ಪಾಪದಿಂದ ದೂರಾಗಿರಬೇಕು. ಒಳ್ಳೇದು. ನಾನು ಏನಾದರೊಂದು ಉಪಾಯ ಹುಡುಕಿಯೇ ತೀರಬೇಕು. ಎಲ್ಲರೂ ಹೀಗೆ ಬಳ್ಳಿಗುರುಡರಂತೆ ನಡೆದರೆ ಹೇಗೆ? ನಾವು ಸಾರ್ವಜನಿಕ ಸಭೆಗಳಲ್ಲಿ, ವೃತ್ತಪತ್ರಗಳಲ್ಲಿ ಈ ವಿಷಯ ಚರ್ಚಿಸುತ್ತೇವೆ, ಜನರ ಸ್ಥಿತಿ ಸುಧಾರಿಸುವ ಉಪಾಯಗಳನ್ನು ಕುರಿತು ಲೇಖ ಬರೆಯುತ್ತೇವೆ; ಆದರೆ, ಅವರ ಭಾರವನ್ನು ಇಳಿಸಲಿಕ್ಕೆ ಯಾರೂ ಮುಂಬಾಗುವದಿಲ್ಲವಲ್ಲ. ಅವರ ಭಾರವನ್ನಿಳಿಸುವದೆಂದರೆ, ಅವರಿಗೆ ಬೇಕಾದ ಭೂಮಿಯನ್ನು ಅವರಿಗೆ ಕೊಟ್ಟುಬಿಡುವದು. ಇದಕ್ಕಿಂತ ಇನ್ನಾವ ಕೆಲಸ? ಅದನ್ನೇ ಮಾಡಲು ನಾವು ಒಲ್ಲೆವು.' ಹೀಗೆಂದುಕೊಂಡು, ಇದೇ ವಿಚಾರದಲ್ಲಿಯೇ ಮುಳುಗಿದನು.

ಬರುಬರುತ ಹೆನ್ರಿ ಜಾರ್ಜನ ತತ್ವವು ಅವನ ಮನಸಿನಲ್ಲಿ ಮೂಡಿತು. ತನ್ನತನಗೇ ಆಚ್ಚರಿ ಎನಿಸಿತು. 'ಏನಿದು? ಇಷ್ಟು ಸಾದಾತತ್ವವು ಕೂಡ ನಮಗೆ ತಿಳಿಯುವದಿಲ್ಲವಲ್ಲ. ಭೂಮಿಯು ಯಾರ ಒಡೆತನದ್ದಾದರೂ ಆಗುವದುಂಟೆ? ನೀರು, ಗಾಳಿ, ಸೂರ್ಯನ ಬೆಳಕಿನಷ್ಟೇ ಅದೂ ನಿಸರ್ಗದ ಸೊತ್ತು. ಇವುಗಳನ್ನನುಭವಿಸಲಿಕ್ಕೆ ಎಲ್ಲರಿಗೂ ಸಮಾನ ಹಕ್ಕು ಇದ್ದು, ನಾಲ್ಕೇ ಜನರು ಅದನ್ನನುಭವಿಸುವದು ಯಾವ ನ್ಯಾಯ?' ಎಂದು ವಿಚಾರಿಸಿದೊಡನೆಯೇ, ಅವನಿಗೆ ತನ್ನ ಇನಾಮದಾರಿಯ ಹಳ್ಳಿಗಳಲ್ಲಿ ತಾನು ನಡಿಸಿದ ವ್ಯವಹಾರವೆಲ್ಲ ಜ್ಞಾಪಕಕ್ಕೆ ಬಂದಿತು. ಯಾರಿಗೂ ಈ ಭೂಮಿಯು ತನ್ನದೆಂಬುವ ಹಕ್ಕ ಇಲ್ಲ; ಹೀಗಿದ್ದು, ಇಂತಿಂಥ ಭೂಮಿಯು ತನ್ನದೆಂದು ತಾನು ಅವುಗಳನ್ನೊಕ್ಕಲಿಗರಿಗೆ ಸಾಗು ಮಾಡಲಿಕ್ಕೆ ಕೊಡುವದೆಲ್ಲಿಯ ನ್ಯಾಯ? ಇನ್ನು ಮುಂದೆ, ನಾನು ಹೀಗೆ ನಡೆದು ಪ್ರಯೋಜನವಿಲ್ಲ. ನನ್ನ ಸ್ಥಿತಿಯನ್ನೊ ನಾನು ಮಾರ್ಪಡಿಸಲಿಕ್ಕೆ ಬೇಕು, ಎಂದು ವಿಚಾರಮಾಡಿ, ತನ್ನ ಮನಸಿನಲ್ಲಿ ಒಂದು ಯೋಜನೆಯನ್ನು ಸಿದ್ಧಪಡಿಸಿದನು. ಅದೇನಂದರೆ, ಒಕ್ಕಲಿಗರಿಗೆ ತನ್ನ ಭೂಮಿಗಳನ್ನೆಲ್ಲ ಸಾಗುವಳಿಗೆ ಕೊಟ್ಟು, ತಾವು ಅವರು ಕೊಟ್ಟಷ್ಟು

ಹಣವನ್ನು ತೆಗೆದುಕೊಂಡು ಅದನ್ನು ಕೂಡ ಅವರ ಕೆರಿಗೆ ಮತ್ತು ಜಾತಿಯ ಹಿತಕ್ಕೆಂದು ವೆಚ್ಚ ಮಾಡಬೇಕು. ಭೂಮಿಯಿಂದ ಬಂದ ದುಡ್ಡಿನಿಂದ ತಾನು ಲಾಭ ಹೊಂದಿ ತಾನು ಪುಷ್ಟನಾಗಬಾರದೆಂದು ಅವನ ಮನಸಿನ ಇಂಗಿತ.

ಇಷ್ಟಾಗುವ ಹೊತ್ತಿಗೆ ಸೂರ್ಯನು ಮುಳುಗಿದನು; ಗುಂಗಾಡುಗಳು ಗುಂಯಿಗುಟ್ಟುತ್ತ ಬಂದು ಕಾಲಿಗೆ ಕಚ್ಚುತ್ತ ಮನೆಯಲ್ಲಿ ಸೇರಿಕೊಂಡವು. ಅತ್ತ ದನಕರುಗಳ ಅಂಬಾ ಅನ್ನುವ ಧ್ವನಿಯು ಕೇಳಿಸಿತು. ರೈತರು ಒಬ್ಬೊಬ್ಬರೇ ಸಭೆಗಾಗಿ ಬರುತ್ತಿರುವಂತೆ ತೋರಿತು. ಡಿಮಿಟ್ರಿಯು ಮೆಲ್ಲಗೆ ತೋಟದ ಸ್ಥಳಬಿಟ್ಟು ಹಳ್ಳಿಯೊಳಗೆ ಹೋಗಲು ಸಿದ್ಧನಾದನು.

ಡಿಮಿಟ್ರಿಯು ಜನರು ನೆರೆದಲ್ಲಿಗೆ ಹೋದೊಡನೆ ಎಲ್ಲರೂ ಮರ್ಯಾದೆಯಿಂದ ತಮ್ಮ ತಮ್ಮ ಟೊಪ್ಪಿಗೆಗಳನ್ನು ತೆಗೆದರು. ಅಲ್ಲಿಯ ರೈತರು ಬಲು ಬಡವರಿದ್ದುದರಿಂದ ಕೆಲವರು ಕಾಲಲ್ಲಿ ಗಿಡದ ತೊಗಟೆಯ ಮೆಟ್ಟುಗಳನ್ನು, ಮೈಯಲ್ಲಿ ಮನೆಯಲ್ಲಿಯೇ ನೇದು ಹೊಲಿದ ಅರಿವೆಯ ಅಂಗಿಗಳನ್ನು ಹಾಕಿಕೊಂಡಿದ್ದರು. ಕೆಲವರು ಮನೆಗೆ ಹೋಗದೆ ತಮ್ಮ ತಮ್ಮ ಕೆಲಸಗಳನ್ನು ತೀರಿಸಿಕೊಂಡು ಹಾಗೇ ಬಂದಿದ್ದರು.

ತನ್ನ ಹೊಲಗದ್ದೆಗಳನ್ನು ಜನರಿಗೆ ಹಾಗೇ ಬಿಟ್ಟುಕೊಡುವ ತನ್ನ ಹಿರಿಯಾಸೆಯನ್ನು ಡಿಮಿಟ್ರಿಯು ಅವರ ಮುಂದೆ ಮಂಡಿಸಿದನು. ರೈತರೆಲ್ಲರೂ ಸುಮ್ಮನಿದ್ದರು. ಅವರ ಮುಖಚರ್ಯೆಯಲ್ಲಿ ವಿಶೇಷವೇನೂ ಏರು ಪೇರು ಕಾಣಲಿಲ್ಲ. ' ಪ್ರತಿಯೊಬ್ಬನಿಗೆ ದೇವರು ನಮ್ಮೆಲ್ಲರಿಗಾಗಿ ಕೊಟ್ಟ ಭೂಮಿಯ ಉಪಯೋಗಮಾಡಿಕೊಳ್ಳುವ ಹಕ್ಕು ಇದೆ ' ಎಂದು ಡಿಮಿಟ್ರಿಯು ನುಡಿದಾಗ ಕೆಲವರು ' ಅದೇನೋ ನಿಜ. ನಿಮ್ಮ ಮಾತು ಸರಿ. ' ಎಂದು ನಗೆಮುಖದಿಂದ ಆಡಿದರು. ಡಿಮಿಟ್ರಿಯು ಮುಂದೆ ಅಂದದ್ದು:—ಭೂಕಂದಾಯವು ನಿಜವಾಗಿ ನೋಡಿದರೆ ಎಲ್ಲರೊಳಗೆ ಹಂಚಲ್ಪಡತಕ್ಕದ್ದು; ಇದನ್ನು ಪ್ರಚಾರಗೊಳಿಸಲೋಸುಗವೇ ನಾನು ನಿಮಗೆ ನನ್ನ ಭೂಮಿಯನ್ನು ಬಿಟ್ಟುಕೊಡಲಿಕ್ಕೆ ಸಿದ್ಧನಾಗಿರುವೆ; ಅದಕ್ಕೆ ನೀವೇ ಯೋಚನೆಮಾಡಿಕೊಂಡು ನಿಶ್ಚಿತವಾದ ಲಾಭ

ಯನ್ನು ಕೊಟ್ಟುಬಿಡಿರಿ! ಅಂದರಾಯಿತು." ಡಿಮಿಟ್ರಿಯ ಈ ಮಾತು ಎಷ್ಟೋ ಜನರಿಗೆ ಸರಿಬರಲಿಲ್ಲ. ಕೆಲವರು ಇದರಲ್ಲೇನೋ ಮೋಸದ ಒಳಹೊಡತ ಇರುವದೆಂದರು. ಒಬ್ಬರಿಗೊಬ್ಬರು ಮುಖನೋಡಹತ್ತಿದರು. ಯಾರಿಗೂ ಸ್ವಾರ್ಥವೆಂಬುದು ತಪ್ಪಿದ್ದಲ್ಲ; ಆದುದರಿಂದ ಇವರಾಡುವ ಮಾತಿನಲ್ಲಿ ಏನೋ ವಿಶೇಷ 'ಸ್ವಾರ್ಥವಿದೆ. ಇನಾಮದಾರರು ತಮ್ಮ ಆಸ್ತಿಯನ್ನು ಒಕ್ಕಲಿಗರ ಬಾಯಿಗೆ ಗಡ್ಡೆಯನ್ನಿಟ್ಟಾದರೂ ಉಳಿಸಿಕೊಳ್ಳುವದು ತಲೆತಲಾಂತರಗಳಿಂದ ನಡೆದುಬಂದ ಅನುಭವ; ಅಂದಮೇಲೆ, ನಮ್ಮನ್ನೆಲ್ಲ ಠಕ್ಕಿಸಲಿಕ್ಕೆ ಇವರೇನೋ ಈ ಮಾತಿನ ಜಾಲ ಹೂಡಿರುವರು.' ಎಂದುಕೊಂಡರು.

ಕೆಲ ರೈತರು ಮುಂದೆ ಬಂದು 'ಒಳ್ಳೇದು. ಈಗಂತೂ ಹೊಲ ನಿಮ್ಮ ಕೈಯಲ್ಲಿದೆ; ಅದರ ಒಡೆತನ ನಿಮ್ಮದಿದೆ. ಅಂದಮೇಲೆ ಅದಕ್ಕೆ ನಿಶ್ಚಿತವಾದ ಲಾವಣಿಯನ್ನು ಎಷ್ಟೆಂದು ಗೊತ್ತುಮಾಡುವಿರಿ ?' ಅಂದರು. ಡಿಮಿಟ್ರಿಯು 'ಏ. ಏ. ಹಾಗಲ್ಲ. ನಾನನ್ನುವದೇನಂದರೆ, ಆ ಲಾವಣಿಯ ಹಣವನ್ನು ಕೂಡ ನೀವೇ ನಿಮ್ಮ ಜಾತಿಯವರ ಹಿತಕ್ಕಾಗಿ ಬಳಸಿಕೊಳ್ಳತಕ್ಕದ್ದು. ಅದನ್ನು ನಾನು ಮುಟ್ಟುವದು ಕೂಡ ಇಲ್ಲ !, ಅಂದನು. ಎಲ್ಲರಿಗೂ ಸಂದೇಹ. ಇದರಿಂದ ನಾವು ಪೂರಾ ಮುಳುಗುವೆವು' ಎಂದು ಕೆಲವರು ಬಿರುಸಾಗಿ ನುಡಿದರು. ಡಿಮಿಟ್ರಿಗೆ ವ್ಯಸನವಾಯಿತು. ಆದರೂ ಅವನು ಅವರ ಅಜ್ಞಾನವನ್ನು ತಿಳಿದವನಾದ್ದರಿಂದ, 'ನಾನು ಬರಿಯ ಮಾತನಾಡಿ ಸುಮ್ಮನಿರುವದಿಲ್ಲ. ಅವರಂತೆ ಒಂದು ಕರಾರಪತ್ರವನ್ನೂ ಮಾಡಬೇಕೆಂದಿರುವೆ. ಅದರ ಮೇಲೆ ನಮ್ಮಿಬ್ಬರ ರುಜುಗಳಾಗಲಿ ಅಂದರೆ ಸಂದೇಹವೇ ತಪ್ಪಿಹೋಗುವದು' ಅಂದನು.

'ನಮಗಾ ರುಜುಗುಜು ಗೊತ್ತಿಲ್ಲ. ಓದುಬರೆ ಬರದವರು ನಾವು. ನಮಗೇತಕ್ಕೆ ಅದೆಲ್ಲ ಗೊಂದಲ. ನಾವು ನಮ್ಮ ಮಟ್ಟಿಗೆ ಸುಮ್ಮನೆ ಹಿಂದಿನಂತೆ ಕೆಲಸ ಮಾಡುತ್ತ ಹೋಗುವೆವು. ನಮಗೀ ಹೊಸಪದ್ಧತಿ ಬೇಡ. ಹಳೆಯದೇ ಸಾಗಲಿ. ನಿಮಗೆ ಇಷ್ಟವಿದ್ದರೆ, ಬಿತ್ತಲಿಕ್ಕಷ್ಟು ಬೀಜಗಳನ್ನು ಮಾತ್ರ ಪೂರೈಸಿರಿ. ಅಂದರಾಯಿತು.' ಎಂದು ರೈತರು ನುಡಿದರು.

‘ ಹಾಗಾದರೆ, ನಿಮಗೆ ಭೂಮಿಗಳು ಬೇಡವಷ್ಟೇ?’ ಎಂದು ಡಿಮಿಟ್ರಿಯು ನಡುವಯಸ್ಸಿನ ಒಬ್ಬನನ್ನು ಕೇಳಿ, ‘ ನಿಮಗೆ ಸಾಕಷ್ಟು ಭೂಮಿಯಿರುವದೆಂದು ಬೇಡನ್ನುವಿರೋ ಹೇಗೆ? ’ ಎಂದು ಮತ್ತೆ ಪ್ರಶ್ನೆ ಮಾಡಿದನು. ‘ ಹಾಗೇನೂ ಇಲ್ಲ.’ ಎಂದು ಅವನು ಉತ್ತರ ಕೊಟ್ಟನು. ನಾನು ‘ ಕೊಡ ಮಾಡುವ ಭೂಮಿಗಳನ್ನೂ ಇವರು ತೆಗೆದುಕೊಳ್ಳಲಿಕ್ಕೆ ಹೆದರುತ್ತಿರುವರಲ್ಲಾ ’ ಎಂದು ಡಿಮಿಟ್ರಿಗೆ ಅಚ್ಚರಿ. ರೈತರೊಳಗಿನ ಬಚ್ಚಬಾಯಿಯ ಒಬ್ಬ ಮುದುಕನು ‘ ನಮಗೆ ಭೂಮಿಗಳನ್ನು ಕೊಡುವ ವಿಚಾರವೆ ಬೇಡ.’ ಎಂದು ರೋಷದಿಂದ ಮಾತಾಡಿದನು. ಡಿಮಿಟ್ರಿಯು ಮತ್ತೆ ‘ ಇದು ನೋಡಿ. ನಾನೇನು ನನ್ನ ಭೂಮಿಯನ್ನು ನಿಮ್ಮ ಮೇಲೆ ಹೇರಲಿಕ್ಕೆ ಬಂದಿಲ್ಲ. ಸದ್ಬುದ್ಧಿಯಿಂದ ಮನಕರಗಿ ನಾನೇ ಮಾತುಗಳನ್ನಾಡುತಿರುವೆ. ನಾಳೇ ಒಂದು ದಿನ ನಾನಿಲ್ಲಿರುವೆ. ಅಷ್ಟರಲ್ಲಿ ನಿಮ್ಮ ಮನಸು ಬದಲಾದರೆ, ನನ್ನನ್ನು ಬಂದು ಕಾಣಬಹುದು.’ ಹೀಗೆಂದನು.

ರೈತರಾರೂ ಮರು ಮಾತಾಡಲಿಲ್ಲ. ಯಾರಿಗೂ ಏನೆಂಬದು ತಿಳಿಯಲಿಲ್ಲ. ಡಿಮಿಟ್ರಿಯ ಸಂಗಡ ಇದ್ದ ಒಬ್ಬ ರೈತನು ಆಗ ಅಂದದ್ದು:— ಇವರು ಹೀಗಾದರೆ ಹಾದಿಗೆ ಬರುವದಿಲ್ಲ. ಇವರಲ್ಲಿ ಅಜ್ಞಾನವಿದ್ದುದರಿಂದ ಯಾವುದೊಂದು ಕೆಲಸ ಮಾಡಬೇಕೆಂದರೆ ಹೆದರಿಕೆ ಹೆಚ್ಚು, ಅಂದನು. ಹಾಗಾದರೆ, ಕೆಲವು ಜಾಣ ಮತ್ತು ಹಿರಿಯದವರನ್ನು ಮನೆಗೆ ಕರೆಯಿಸು; ಅಂದರೆ ಎಲ್ಲವನ್ನು ಅವರಿಗೆ ತಿಳಿಹೇಳಿ, ನಾನು ಹೇಳುವದು ಅವರ ಹಿತದ ದಾರಿಯೇ ಎಂಬುದನ್ನು ಮನದಟ್ಟ ಮಾಡಿಕೊಡುವೆನು. ಅವರಿಗೆ ಒಂದು ಕಪ್ಪು ಬಿಸಿ ಬಿಸಿ ಚಹವನ್ನು ಕೊಟ್ಟರೆ ಸಾಕು; ತತ್ ಕ್ಷಣವೆ ಒಪ್ಪುವರು; ಅದೇ ಅವರು ನಾಲ್ಕು ಜನರೊಡನೆ ಸಭೆಯಲ್ಲಿ ಕುಳಿತರೆ, ಅವರಾಡಿದ ಮಾತಿಗೇನೇ ಗೋಣುಹಾಕುವರು. ಇದೀಗ ಅವರ ಚಾಳಿ. ಒಳ್ಳೇದು, ಈದಿನ ರಾತ್ರಿ ಕೆಲ ಜನರನ್ನು ನನ್ನಡೆಗೆ ಕರೆದುಕೊಂಡು ಬಾ; ಅಂದರೆ, ನಾನೆಲ್ಲ ಅವರನ್ನು ಸರಿಮಾಡುವೆನು; ಅವರ ಹಿತವೇ ಅವರಿಗೆ ತಿಳಿಯದು. ’ ಹೀಗೆಂದು ಅವನನ್ನು ಕಳಿಸಿದನು.

ಇತ್ತ ತಾನು ಬೆಳದಿಂಗಳಲ್ಲಿ ಅಡ್ಡಾಡಲಿಕ್ಕೆಂದು ಒಬ್ಬನೇ ಹೊರಟನು. ಬೆಳದಿಂಗಳಿನ ಆಡ್ಡಾಟವೆಂದರೆ ಡಿಮಿಟ್ರಿಗೆ ಯಾವಾಗಲೂ ಬಲು ಅಕ್ಕರೆ. ಅವನ ಮನಸ್ಸಿಗೆ ಅದೊಂದು ಕೋರೂಟ. ಅಡ್ಡಾಡಲಿಕ್ಕೆ ಬಲು ದೂರ ಹೋಗಿ, ಅಲ್ಲಿಯ ಒಂದು ಕಲ್ಲಿನ ಮೇಲೆ ವಿಚಾರಮಗ್ನನಾಗಿ ಕುಳಿತನು. ಚಿಕ್ಕವನಿದ್ದಾಗಿನ ತನ್ನ ಸ್ಥಿತಿ, ತನ್ನ ಸೋದರತ್ತೆಂದಿರು, ಆ ಮನೆಮುದ್ದಾದ ಕಟೂಷಳು, ಆಕೆಗೆ ತಾನು ಹುಚ್ಚಾದುದು, ತನ್ನ ಜೀವನದ ಗುರಿ, ತನ್ನ ಸ್ವೈರವರ್ತನೆಯ ಜೀವನ, ಇವೆಲ್ಲವುಗಳ ಹಳೇ ರಗಳೆಯು ನೆನಪಿಗೆ ಬಂದು, ಮನಸು ಚಲ್ಲಾಪಿಲ್ಲಿ ಆಯಿತು. ಯಾವುದೂ ತಿಳಿಯದೆ, 'ದೇವರ ಅಪೇಕ್ಷೆ ಏನೇನಿರುವದೆಂಬದನ್ನೆಲ್ಲ ಅರಿಯುವದು ನಮ್ಮಂಥವರಿಗೆ ಶಕ್ಯವಿಲ್ಲ; ಆದರೆ ಏನೇನು ಒದಗುತ್ತದೋ ಅದೆಲ್ಲವೂ **ಅವನ** ಇಚ್ಛೆಯೇ ಎಂದುಕೊಂಡು ಸಮಾಧಾನ ಮಾಡಿಕೊಳ್ಳುವದೇ ರಾಮುದಾರಿ; **ಅವನ** ಇಚ್ಛೆಯಂತೆ ನಡೆಯುವದರಲ್ಲಿಯೇ ನಮ್ಮ ಶಕ್ತಿ-ಸರ್ವಸ್ವ, '**ಅವನು ಒಡೆಯ**, ನಾನು ಅವನ ಕೈಯೊಳಗಿನ **ಆಳು**' ಎಂದು ಮನಸಿನಲ್ಲಿ ಗಟ್ಟಿಮುಟ್ಟಾದ ಗಂಟು ಹಾಕಿಕೊಂಡಿರುವದೇ ಧೈರ್ಯವೆಂದು ಆನಂದಪಟ್ಟನು.

ಮನೆಗೆ ತಿರಿಗಿ ಬಂದು ಹಾಸಿಗೆಗೆ ಮಗ್ಗಲು ಹಚ್ಚುವವನು. ಆ ಸಮಯಕ್ಕೆ, ಮತ್ತೂ 'ಕಟೂಷಳು ಸೈಬೀರಿಯಕ್ಕೆ ಹೋದರೆ, ನಾನೂ ಆಕೆಯೊಡನೆ ಹೋಗಬೇಕೆಂದೇನೋ ನಿಶ್ಚಯಿಸಿದೆ; ಆದರೆ, ಅಲ್ಲಿಯ ಸ್ಥಿತಿಗತಿಯು ಹೇಗೋ ಏನೋ! ಎಂದು ಅನುಮಾನಿಸುತ್ತ ದೀಪವನ್ನು ಸಣ್ಣಾಗಿಸಿ ಮಲಗಿದನು. ಹಾಸಿಗೆಗೆ ಮೈ ಹಚ್ಚಿದೊಡನೆ ಒಂದು ದೊಡ್ಡ ತಗಣಿಯು ಕಚ್ಚಿತು; 'ಇಲ್ಲಿಯೇ ಈ ಅವಸ್ಥೆಯಾದರೆ, ಸೈಬೀರಿಯದಂಥ ಗಡಿಪಾರಿನ ಶಿಕ್ಷೆಯ ಸ್ಥಳದಲ್ಲಿ ಎಷ್ಟು ತಗಣಿ, ಎಷ್ಟು ಚಿಕ್ಕಾಡ, ಏನದು ಭವಣೆಯೋ ದೇವರೇ ಬಲ್ಲ.' ಎಂದು, 'ಆಗಲಿ, ಬಂದದ್ದೆಲ್ಲ ಬರಲೆಂದು ಎದೆಗೊಡದಿದ್ದರೆ ಬೇರೆ ವಿಧಿಯಿಲ್ಲ' ಹೀಗೆಂದು ನುಡಿದು ಮುಸುಕು ಹಾಕಿದನು; ತಗಣಿ ಚಿಕ್ಕಾಡುಗಳ ಕಡಿತಕ್ಕೆ ಅವನ ಈ ನಿಚ್ಚಟದ ತಾಳ್ಮೆಯು ಸಡಲಿತು; ಚಟ್ಟನೆ ಹಾಸಿಗೆಯಿಂದೆದ್ದು ಕಿಟಕಿಯ ಬಳಿ ಇದ್ದ ಖುರ್ಚಿಯ ಮೇಲೆ ಹೋಗಿ ಕುಳಿತು.

ಮುಗಿಲಿನಲ್ಲಿ ನಡೆದಿರುವ ಮೋಡಗಳ ಸುಳಿದಾಟ, ಈಗ ಮೋಡಗಳಲ್ಲಿ ಅಡಗಿ, ಮತ್ತೆ ಮೋಡವಿಲ್ಲದ ನೀಲ ಆಕಾಶದ ಸ್ಥಳಕ್ಕೆ ಬಂದೊಡನೆ ಝಗ್ಗನೆ ಪ್ರಕಾಶಿಸಿ, ಒಂದು ವಿಧದ ಆಟವನ್ನೇ ನಡಿಸಿರುವ ಚಂದ್ರನ ನಿಟ್ಟೋಟವನ್ನು ನಿಟ್ಟಿಸುತ ಕುಳಿತನು. ತಂಗಾಳಿ ಬಿಟ್ಟೊಡನೆ ಅವನ ಕಣ್ಣುಗಳು ಬಿಗಿಯ ಹತ್ತಿದವು. ತೂಕಡಿಕೆಯಿಂದ ಭಾರಗೊಂಡ ಕಣ್ಣುಗಳಿಂದ ಹಾಸಿಗೆಯಮೇಲೆ ಹೋಗಿ ಬಿದ್ದನು. ತತ್‌ಕ್ಷಣವೇ ನಿದ್ರೆಹತ್ತಿತು. ಏಳಲಿಕ್ಕೆ ತಡವಾಯಿತು.

ಮೊದಲು ಏರ್ಪಾಡು ಮಾಡಿರುವಂತೆ ಕೆಲ ಪ್ರತಿಷ್ಠಿತ ರೈತರು ಡಿಮಿಟ್ರಿಯನ್ನು ಕಾಣಲಿಕ್ಕೆಂದು ಬಂದರು; ಅವನೂ ಎದ್ದು ಬೆಳಗಿನ ಶೌಚ ಮುಖ ಮಾರ್ಜನ ಫಲಾಹಾರಗಳನ್ನು ತೀರಿಸಿಕೊಂಡ. ಅವರೆಲ್ಲರ ಮುಂದೆ ಇದ್ದ ಖುರ್ಚಿಯ ಮೇಲೆ ಬಂದು ಕುಳಿತನು. ಎಲ್ಲರೂ ವಾಡಿಕೆಯಂತೆ, ತಂತಮ್ಮ ಟೊಪ್ಪಿಗೆಗಳನ್ನು ತೆಗೆದು ಡಿಮಿಟ್ರಿಗೆ ಮರ್ಯಾದೆ ಮಾಡಿದರು. ಮೊತ್ತ ಮೊದಲು, ಡಿಮಿಟ್ರಿಯು ತನ್ನ ಸ್ವಂತ ಆಸ್ತಿಯ ವಿಷಯದಲ್ಲಿದ್ದ ತನ್ನ ವಿಚಾರ-ಅಭಿಪ್ರಾಯಗಳನ್ನು ಅವರೆಲ್ಲರ ಮುಂದೆ ಈ ಮೇರೆ ಮಂಡಿಸಿದನು; " ಇದು ನೋಡಿರಿ. ನನ್ನ ಮಟ್ಟಿಗೆ ನಿಮಗೆ ಭರವಸೆ ಕೊಡುವದೇನಂದರೆ, ನನಗೆ ಈ ಹೊಲ-ಮನೆಗಳ ಆಸೆಯಿಲ್ಲ. ನಮ್ಮಿಬ್ಬರಿಗೂ ನ್ಯಾಯ್ಯವಿರುವ ದಾರಿಯಿಂದ ನಾವು ನಡೆದುಕೊಂಡರಾಯಿತು. ಇಷ್ಟೇ ನನ್ನ ಅಭಿಪ್ರಾಯ. ನಿಮ್ಮೆಲ್ಲರಿಗೆ ನಾನವುಗಳನ್ನು ಹಂಚುವದಾದರೆ, ನೀವು ಅವುಗಳನ್ನು ಹೇಗೆ ಹಂಚಿಕೊಳ್ಳು ವಿರಿ? ಒಂದು ವೇಳೆ ಎಲ್ಲರೂ ಒಂದೇ ಸಮನಾಗಿ ಹಂಚಿಕೊಳ್ಳುವದಾದರೆ, ಕೆಲಸ ಮಾಡದವರು ತಮ್ಮ ಪಾಲಿಗೆ ಬಂದದ್ದನ್ನು ಸಿರಿವಂತರಿಗೆ ಮಾರಿಬಿಡ ಬಹುದು; ಹೀಗಾಗಿ ಮತ್ತೆ ಮತ್ತೆ ಭೂಮಿಯು ದುಡ್ಡಿದ್ದವರ ಕೈಗೆ ಸಿಲುಕಿ ಬಡವರಾದವರು ' ಇದ್ದಾಂಗಿರೋ ಸಿದ್ಧೇಶ್ವರಾ ' ಎಂಬಂತೆಯೇ ಆಗುವದರಲ್ಲಿ ಸಂದೇಹವಿಲ್ಲ; ಅಂದಮೇಲೆ ನಾನು ಭೂಮಿ ಕೊಟ್ಟದ್ದಕ್ಕೆ ಪ್ರಯೋಜನವೇನು.? ನಾನು ನಿಮಗೆ ಭೂಮಿ ಬಿಟ್ಟುಕೊಟ್ಟದ್ದಕ್ಕೆ ನೀವು ನಿಮ್ಮ ಬೆವರು ಬಸಿಯು ವಂತೆ ದುಡಿದು ಬದುಕು ಮಾಡಿದರೆ, ಅದು ಒಂದಕ್ಕೆರಡಾದೀತು; ನಿಮಗೂ ಸುಖವಾದೀತು. ! "

ಈ ವಿಚಾರಸರಣಿಯು ಅವರಲ್ಲಿ ಬಹು ಜನರಿಗೆ ಒಪ್ಪಿತವಾಯಿತು. "ಹಾಗಾದರೆ ದುಡಿದು, ಬದುಕು ಮಾಡಲಿಕ್ಕೆ ಹೊಲ ಕೊಟ್ಟದ್ದನ್ನು ಮಾರಲಾಗದೆಂದು ಕಟ್ಟುಮಾಡಿರಿ" ಎಂದು ಹತ್ತರ ಕುಳಿತಿರುವ ಒಬ್ಬ ರೈತನು ನುಡಿದನು. 'ಅದೇನೂ ಗೊತ್ತಾಗುವದಿಲ್ಲ' ಎಂದು ಮತ್ತೊಬ್ಬನು ಉತ್ತರಕೊಟ್ಟನು. ಇಷ್ಟರಲ್ಲಿ ಬಹು ಧೂರ್ತನೂ ಅತಿ ಅನುಭವಿಕನೂ ಆದ ರೈತನು 'ಹೊಲವನ್ನು ಎಲ್ಲರೂ ಕೂಡಿಕೊಂಡೇ ನೇಗಿಲು ಹೊಡೆಯಬೇಕು; ಮತ್ತು ಹೀಗೆ ರೆಂಟೆ ಹೊಡೆಯಲಿಕ್ಕೆ ನೆರವಾಗುವವರೇ ಬೆಳೆ ತೆಗೆದುಕೊಳ್ಳಲಿಕ್ಕೆ ಬಾಧ್ಯಸ್ಥರಾಗಬೇಕು' ಎಂದು ಒಂದು ಹಂಚಿಕೆ ಸೂಚಿಸಿದನು.

'ನೀವೆಲ್ಲರು ಸಾಮೂಹಿಕವಾಗಿ ಕೆಲವು ರೆಂಟೆ-ಕುಂಟೆಗಳನ್ನು ಕುದುರೆ, ಮುಂತಾದ ಒಕ್ಕಲತನಕ್ಕೆ ಬೇಕಾಗುವ ಸಲಕರಣೆಗಳನ್ನು ಕೊಳ್ಳಿರಿ; ಮತ್ತು ನಿಮ್ಮ ನಿಮ್ಮ ಕೆಲಸ ತೀರಿಸಿಕೊಳ್ಳಿರಿ!' ಅಂದನು. ಇಷ್ಟರಲ್ಲಿ ಮತ್ತೊಬ್ಬನು 'ಅದೆಲ್ಲಾ ಹೇಗಾದರೂ ಆದೀತು. ಹೊಲವನ್ನು ಒಂದೇ ಸಮನಾಗಿ ಹಂಚಿಕೊಳ್ಳುವದೆಂತು? ಒಬ್ಬನಿಗೆ ಮಳಲಭೂಮಿ ಬಂದರೆ ಹೇಗೆ? ನೀವು ಭೂಮಿಯ ಒಡೆಯರು, ಅಂದ ಮೇಲೆ ನಿಮ್ಮ ಮನಸಿಗೆ ಬಂದಂತೆ ನೀವೇ ಹಂಚಿಕೊಟ್ಟು ಬಿಡಿರಿ. ಅದರಲ್ಲೇನು? ನೀವು ಕೊಟ್ಟಂಥವುಗಳನ್ನು ತೆಗೆದುಕೊಂಡೇ ತೀರಬೇಕು.' ಅಂದನು. ಡಿಮಿಟ್ರಿಯು ತಟ್ಟನೆ ವಿಚಾರದೃಷ್ಟಿಯಿಂದ 'ಹಾಗೆಲ್ಲ ಒಬ್ಬರಿಗೊಂದು ಇನ್ನೊಬ್ಬರಿಗೊಂದು ಆಗಬಾರದೆಂಬ ದೃಷ್ಟಿಯಿಂದ ವಿಚಾರ ನಡಿಸಿದ್ದರಿಂದಲೇ ಯಾವದೂ ಬಗೆಹರಿಯದಾಗಿದೆ. ಭೂಮಿ ಎಂಬುದು ಎಲ್ಲರ ಸೊತ್ತು. ಎಲ್ಲರಿಗೂ ಅದರ ಮೇಲೆ ಸಮನಾದ ಹಕ್ಕು. ಅಂದ ಮೇಲೆ ಒಬ್ಬರಿಗೆ ಚಲೋದು, ಇನ್ನೊಬ್ಬರಿಗೆ ಕೆಟ್ಟದು ಬರುವದು ಒಳಿತಲ್ಲ; ಒಂದು ವೇಳೆ ಒಬ್ಬರಿಗೆ ಕೆಟ್ಟದ್ದು, ಇನ್ನೊಬ್ಬರಿಗೆ ಒಳ್ಳೇ ಭೂಮಿ ಬಂದರೆ, ಇಬ್ಬರಿಗೂ ಸಮಭಾಗ ಹಂಚಬೇಕೆಂದರೆ ಏನು ಮಾಡಬೇಕು? ಅಂದರೆ, ಚಲೋ ಭೂಮಿಯನ್ನು ಉಣ್ಣುವವನು ತನಗೆ ಹೆಚ್ಚಿಗೆ ಬಂದ ಹಣವನ್ನು ಕೆಟ್ಟ ಭೂಮಿಯುವನಿಗೆ ಕೊಡಬೇಕು; ಹೀಗೆ ಎಲ್ಲರೂ ಕೊಟ್ಟರೆ, ಅದು ಸಾಮೂಹಿಕ ಹಣವಾಗುವದು; ಆ ಸಾಮೂಹಿಕ ಹಣದಿಂದ ಎಲ್ಲರಿಗೆ ಉಪಯೋಗವಾಗುವದು. ಚಲೋ ಭೂಮಿ ಬೇಕಾದವರು ಹೆಚ್ಚಿಗೆ ದುಡ್ಡು ಕೊಟ್ಟು ಅದನ್ನು

ಸಾಗಮಾಡಲಿ; ಅದರ ಕಂದಾಯ ಕೊಡಲಿ; ಒಟ್ಟಿಗೆ, ಯಾರನ್ನೂ ಸುಲಿದು ಕೊಂಡು, ಯಾರೂ ಶ್ರೀಮಂತರಾಗಬಾರದು. ದುಡ್ಡು ಎಲ್ಲರಲ್ಲಿಯೂ ಹಂಚಿ ಹೋಗಬೇಕು. ಒಬ್ಬರು ಬಹಳ ಬಡವರಿದ್ದು, ಇನ್ನೊಬ್ಬರು ಬಹಳ ಸಿರಿವಂತಾ ಗಿರಬಾರದು ಅದರಿಂದ ಮನುಷ್ಯನ ನೀತಿಗೆ ಪೆಕ್ಕೆ ತಗಲುತ್ತದೆ ಎಂದನು. ಎಲ್ಲರಿಗೂ ಅವನು ಹೇಳಿದ್ದು ಒಪ್ಪಿತವಾಯಿತು. ಎಲ್ಲರು ನಗುತ್ತಲೂ, ಅದೇ ವಿಷಯವನ್ನು ಕುರಿತು ಹೆಚ್ಚಿಗೆ ಚರ್ಚೆ ಮಾಡುತಲೂ ಹೊರಟರು; ಆದರೂ ಅವರಲ್ಲಿ ಇತ್ತಂಡಗಳಾದವು. ಕೆಲವರಿಗೆ ಇದು ಒಪ್ಪಿತು; ಕೆಲವರಿಗೆ ಒಪ್ಪಲಿಲ್ಲ.

ಈ ರೈತರಲ್ಲಿ ಒಬ್ಬರೈತನ ತಾಯಿ ಇದ್ದಳು. ಆಕೆ ದಿವಸಾದವಳು. ಬಹು ವಿಚಾರವಂತ ಹೆಂಗಸು. ಆಕೆಯು ಎಲ್ಲ ಜನರು ಕೂತಿರುವಲ್ಲಿಗೆ ಹೋಗಿ, 'ನಿಮ್ಮ ಯಜಮಾನನು ಒಳ್ಳೇ ಧರ್ಮಾತ್ಮ. ಅವನಿಗೆ ಬಡವರ ಕಲ್ಯಾಣ ಮಾಡಬೇಕೆಂಬ ಹಂಬಲವಿದೆ. ಅವನು ಲೋಭಿಯಲ್ಲ. ಸಣ್ಣವನಿದ್ದಾಗಿ ನಿಂದಲೂ ನಾನವನನ್ನು ನೋಡಿ ಬಲ್ಲೆ. ನಿಮ್ಮಹಿತವಾಗಬೇಕೆಂದನ್ನುವವನು; ಆದುಪರಿಂದ ಅವನು ಹೇಳುವಂತೆ ನೀವು ಕೇಳಿದರೆ, ನಿಮ್ಮ ಉದ್ಧಾರವಾಗು ವದು. ಹುಚ್ಚರಂತೆ ನಡೆಯಬೇಡಿರಿ. ಯಾರ ನಡೆ ನುಡಿ ಹೇಗೆ, ಯಾರ ಯೋಗ್ಯತೆ ಎಷ್ಟೆಂಬುದನ್ನು ಅಳೆದು ನೋಡಿರಿ! ಹಿಟ್ಟೂ, ನುಚ್ಚೂ ಸಮವೆಂದು ತಿಳಿಯಬೇಡಿರಿ. ನಿಮಗೇನೂ ತಿಳಿಯುವದಿಲ್ಲ; ನನ್ನ-ಮುದುಕಿಯ ಮಾತು ಕೇಳಿರಿ.' ಎಂದು ಬುದ್ಧಿಯ ಮಾತು ಹೇಳಿದಳು. ಎಲ್ಲರಿಗೂ ಹೌದೆನಿಸಿತು.

ಡಿಮಿಟ್ರಿಯ ಹೃದಯ ಬಲು ಮೃದು; ಪರರ—ಬಡವರ ಭವಣೆ, ಕಷ್ಟಗಳನ್ನು ಕಂಡೊಡನೆ, ಅವನ ಮನಸು ಬೆಣ್ಣೆಯಂತೆ ಕರಗುವದು. ತನ್ನ ವರಾದವರು ಹೀಗೆ ಕಷ್ಟಪಡುತಿರುವಾಗ ತಾನೊಬ್ಬನು ಸಿರಿವಂತನಾಗಿ ಸಂತೋಷದೊಳಗೆ ಓಲಾಡುತ್ತಿರುವದು ಮಹತ್‌ಪಾಪವೆಂದು ಅವನ ರೋಮರೋಮಗಳಲ್ಲಿಯೂ ನುಡಿದು, ಅವನ ಜೀವನದಲ್ಲಿಯೇ ಬೀರುಗಾಳಿ ಏಳುವದು. ಇಂಥ ಸ್ಥಿತಿಯು ಅವನಿಗೀಗ ಪ್ರಾಪ್ತವಾಯಿತು. ತನ್ನಲ್ಲಿ ಸಿಲುಕು ಇದ್ದ ಹಣವನ್ನೆಲ್ಲ ಬಡವರಿಗೆ ಹಂಚಿ ಕಡೆಗಾದನು. ಅದರಿಂದ ಅವ ನಿಗೆ ಉಂಡು ತೇಗಿದಷ್ಟು ಆನಂದ.

---

# ೧೨ ಕರ್ತವ್ಯಾನಂದದ ಬೆಳಕು.





ಲ್ಲಿಯ ಕೆಲಸ ಮುಗಿಸಿಕೊಂಡು ಡಿಮಿಟ್ರಿಯು ತನ್ನ ಊರಿಗೆ ಬಂದ. ತನ್ನ ದಾಸಿಯಳಿಗೆ ಎಲ್ಲ ಸ್ಥಿತಿಯನ್ನು ತಿಳಿಸಿ, ಮನೆಯನ್ನು ಬರಿದು ಮಾಡಿಸಿದನು. ಸಾಮಾನುಗಳಲ್ಲಿ ಕಟೂಷಳದೊಂದು ಭಾವಚಿತ್ರ ವಿತ್ತು; ಅದನ್ನು ಹತ್ತರ ಇಟ್ಟುಕೊಂಡನು; ಮತ್ತು ಮಿಕ್ಕ ಸಾಮಾನುಸಟ್ಟುಗಳನ್ನೆಲ್ಲ ಬೇರೆ ಒಂದು ಕೋಣೆಯಲ್ಲಿಡಹೇಳಿದನು. ಹಳ್ಳಿಗಳಲ್ಲಿಯ ಬಡವರ ಭವಣಿಗಳನ್ನು ಕಣ್ಣಾರೆ ಕಂಡು, ಅವನ ಮನಸು ನೊಂದು ಹಣ್ಣುಹಣ್ಣಾಗಿತ್ತು; ಆದರಿಂದ ತನ್ನ ಸಿರಿವಂತಿಕೆಯ ಒಡವೆಗಳ ಕಡೆಗೆ ಅವನ ಲಕ್ಷ್ಯವಿರಲಿಲ್ಲ; ಇದರೊಳಗೇ ಬಹು ದಿನಗಳಲ್ಲಿ ಕಟೂಷಳನ್ನು ಕಂಡಿರದ್ದೊಂದು ಕೊರಗಣೆ; ಆದುದರಿಂದ ಯಾವುದರ ಕಡೆಗೂ ಅವನ ಮನಸೆಳೆಯಲಿಲ್ಲ; ಅಂದಿನದಿನ ಹೇಗೋ ಆ ಕೋಣೆಯಲ್ಲಿ ರಾತ್ರಿಯೆಲ್ಲ ಕಾಲ ಕಳೆದು ಬೆಳಗ್ಗೆದ್ದು, ಮೈಯಲ್ಲಿ ಓವ್ಹರಕೋಟನ್ನು ಹಾಕಿಕೊಂಡು ಹೊರಬಿದ್ದನು. ಹೊರಗೆ ವಿಪರೀತ ಚಳಿ. ಮೈಯಲ್ಲಿ ಸ್ವಲ್ಪ ಉಷ್ಣತೆ ಹುಟ್ಟಲೆಂದು ಭರದಿಂದನಡೆದನು. ದಾರಿಯಲ್ಲಿ ಒಂದು ಮೋಟಾರ ಬಾಡಿಗೆ ಮಾಡಿಕೊಂಡು ಸೆರೆಮನೆಗೆ ಹೊಡೆಯ ಹೇಳಿದನು.

ಸೆರೆಮನೆಯ ಹೆಬ್ಬಾಗಿಲಿಗೆ ಮೋಟಾರ ಬಂದು ನಿಂತಿತು. ಡಿಮಿಟ್ರಿಯು ಕೆಳಗಿಳಿದು, ಗಾಡಿಯವನಿಗೆ ದುಡ್ಡುಕೊಟ್ಟು ತಾನು ಒಳಗೆ ಹೋಗಿ, ಒಂದು ಕೋಣೆಯಲ್ಲಿ ಕುಳಿತನು. ಇಷ್ಟರಲ್ಲಿಯೇ ಗಂಟೆಯು ಸಪ್ಪಳವಾಯಿತು. ಕಟೂಷಳನ್ನು ನೋಡಲಿಕ್ಕೆ ಹೋದ ಪ್ರತಿಯೊಂದು ಸಾರೆಯೂ ಡಿಮಿಟ್ರಿಗೆ ಅದೇಕೋ ಎದೆಯೊಡಿಕೆ; ಅದರಂತೆ, ಈ ದಿನವೂ ಆಯಿತು. ಅತ್ತಿತ್ತ ಆಡ್ಡಾಡಿ, ಯಾರಾದರೂ ಇರುವರೋ ಹೇಗೆಂದು ನೋಡುವಷ್ಟರಲ್ಲಿ ಅಲ್ಲೊಬ್ಬ ಆಫೀಸರ ಕಾಣಿಸಿದ. ಅವನನ್ನು ಕುರಿತು 'ಇಲ್ಲಿ ಮಾಸ್ಲೋವಳೆಂಬ ಹೆಂಗಸು ಸೆರೆಯಾಳು ಇರುವಳೇ? ಅವಳನ್ನು ಕಾಣಬೇಕಾಗಿದೆ.' ಎಂದ.

'ಹೌದು. ಆಕೆ ಆಸ್ಪತ್ರೆಯಲ್ಲಿರುವಳು.' ಅಂದು, ಅದೋ ಅದೇ ಆಸ್ಪತ್ರೆಯ ಕಟ್ಟಡ.' ಎಂದು ಅತ್ತ ಕೈ ಮಾಡಿ ತೋರಿಸಿದ. ಓವ್ಹರಕೋಟನ್ನು ಬಗಲಲ್ಲಿಟ್ಟುಕೊಂಡು, ಆಚೆಯ ಕಡೆ ನಡೆದು, ಅಲ್ಲಿರುವ ಬಾಗಿಲ ಕಾವಲನನ್ನು ಕುರಿತು ವಿಚಾರಿಸಿಕೊಂಡು 'ಚಿಕ್ಕಮಕ್ಕಳು ಇರುವ ಭಾಗ'ಕ್ಕೆ ಲಗುಬಗೆಯಿಂದ ನಡೆದನು. ದಾರಿಯಲ್ಲಿ ಒಬ್ಬ ತರುಣ ಡಾಕ್ಟರನು ಬರುತ್ತಿದ್ದ. ಅವನ ಮೈಯಲ್ಲ ಕ್ಯಾರಬಾಲಿಕ್ ಸಬಕಾರದ ವಾಸನೆಯೋ ವಾಸನೆ. ಅವನು ಡಿಮಿಟ್ರಿಯನ್ನು ನಿಟ್ಟಿಸಿನೋಡಿ, 'ಯಾರು ನೀವು? ಏನು ಬೇಕಾದ್ದು ನಿಮಗೆ?' ಎಂದು ಗದರಿಸಿ ನುಡಿದನು. ಡಿಮಿಟ್ರಿಯು 'ಇಲ್ಲಿ ಒಬ್ಬ ಹೆಂಗಸು ಇರುವಳು. ಆಕೆಯನ್ನು ಕಾಣಬೇಕಾಗಿದೆ' ಅಂದ. 'ಇಲ್ಲಿ ಹೆಂಗಸರಿಲ್ಲ. ಮಕ್ಕಳು ಇರುವ ಭಾಗವಿದು' ಅಂದ. 'ಹೌದು; ಆದರೆ, ಸೆರೆಯಾಳಾಗಿದ್ದ ಒಬ್ಬ ಹೆಂಗಸನ್ನು ಇಲ್ಲಿ ಸೂಲಗಿತ್ತಿ ಕೆಲಸಕ್ಕೆ ಸೇರಿಸಿಕೊಂಡಿರುವರೆಂದು ಕೇಳಿದ್ದೇನೆ, ಅಂದ. 'ಯಾರವರು? ಹೆಸರೇನು?' ಎಂದ ಡಾಕ್ಟರನು. 'ಮಾಸ್ಲೋವಾ' ಎಂದು ಡಿಮಿಟ್ರಿಯು ಮಾರ್ನುಡಿದನು. 'ಆಗಬಹುದು' ಎಂದು ಅವನು ಒಬ್ಬ ಹೆಂಗಸನ್ನು ಕೂಗಿಕರೆದು ಮಾಸ್ಲೋವಳನ್ನು ಕಳಿಸಲು ಅಪ್ಪಣೆಮಾಡಿ, 'ನೀವು ಇಲ್ಲಿಯೇ ಭೆಟ್ಟಿಯಾಗುವಿರೋ ಏನು ಬೇರೆ ಕೋಣೆಯಲ್ಲಿಯೋ?' ಎಂದು ಕೇಳಿದ. ಬಲು ಸಲುವಳಿಯಿಂದ ಮಾತಾಡಿಸುವ ಆ ಡಾಕ್ಟರನ ನೀತಿ-ನಡೆಯನ್ನು ಕಂಡು ಮೊದಲು ಹೆದರಿದ. ಡಿಮಿಟ್ರಿಗೆ ಈಗ ಧೈರ್ಯಬಂದು, 'ಮಾಸ್ಲೋವಳು ಆಸ್ಪತ್ರೆಯಲ್ಲಿ ಚನ್ನಾಗಿರುವಳೇ!' ಎಂದು ಕೇಳಿ ಆಕೆಯ ಬಗ್ಗೆ ಅವರ ಅಭಿಪ್ರಾಯವನ್ನು ತಿಳಿಯಬೇಕೆಂಬುವ ತನ್ನ ಮನೀಷೆಯನ್ನು ತೋರ್ಪಡಿಸಿದ. ಅವನಾದರೂ ಒತ್ತಡವೆಯೋ, 'ಚನ್ನಾಗಿದಾಳೆ ಅಡ್ಡಿ ಇಲ್ಲ.' ಅಂದನು. ಇಷ್ಟರಲ್ಲಿ ಒಬ್ಬ ವಯಸ್ಸಾದ ದಾದಿಯಳ ಸಂಗಡ ಮಾಸ್ಲೋವಳು ಬಂದಳು. ಆಕೆಯೂ ದಾದಿಯ ಉಡುಪಿನಲ್ಲಿಯೇ ಇದ್ದಳು. ಡಿಮಿಟ್ರಿಯನ್ನು ನೋಡಿ ನಾಚಿದಳು. ಸ್ವಲ್ಪ ಹೊತ್ತು ದೂರದಲ್ಲಿಯೇ ನಿಂತು, ಹುಬ್ಬುಗಂಟಿಕ್ಕಿ ಕೆಳಮುಖ ಮಾಡಿಕೊಂಡೇ ಅವನಿದ್ದಲ್ಲಿಗೆ ಹೋಗಿ, ಜುಕ್ಕುಜುಲುಮೆಯಿಂದ ಅವನ ಕೈಯಲ್ಲಾಡಿಸಿದಳು.

ಹಿಂದಕ್ಕೆ ತಾನು ಆಕೆಯನ್ನು ಕಂಡಾಗ ಇರುವಂತೆಯೇ ಈವಾಗಲೂ ಇರಬಹುದೆಂದು ಡಿಮಿಟ್ರಿಯ ಯೋಚನೆ; ಆದರೆ, ಅದೆಲ್ಲ ಪಲ್ಲಟವಾಗಿತ್ತು. ಇಂದು ಆಕೆಯ ಮುಖಚರ್ಯೆಯಲ್ಲಿ ಹೊಸದೊಂದು ಕಳೆ; ತನ್ನ ವಿಷಯದಲ್ಲಿ ಆಕೆಯ ಮನಸಿನಲ್ಲಿ ದ್ವೇಷಭಾವ ಹುಟ್ಟಿರುವಂತೆ ಅವನಿಗೆ ಕಾಣಿಸಿತು; ಆದರೂ ತನ್ನ ಕರ್ತವ್ಯ ತಾನು ಮಾಡಬೇಕೆಂದು 'ಇದೋ! ನಿನ್ನ ವ್ಯಾಜ್ಯದ ವಿಚಾರವಾಗಿಯೇ ನಾನೀಗ ಸೀಟರ್ಸಬರ್ಗಕ್ಕೆ ಹೋಗಲನುವಾಗಿದ್ದೇನೆ; ಇಕ್ಕೋ ನಿನ್ನೀ ಭಾವಚಿತ್ರ' ಎಂದೆನುತ ತನ್ನ ಜೇಬಿನೊಳಗಿಂದ ಭಾವಚಿತ್ರವನ್ನು ಹೊರತೆಗೆದು ಆಕೆಯ ಕೈಯಲಿಟ್ಟನು. ಅವಳು ಅದನ್ನು ಕೈಯಲ್ಲಿ ತಕ್ಕೊಂಡು ವಿಸ್ಮಯದೃಷ್ಟಿಯಿಂದ ಇದನೇತಕ್ಕೆ ನನ್ನ ಕೈಗೆ ಕೊಟ್ಟಿರಿ ಎಂಬುವ ಭಾವಭಂಗಿಯಿಂದ ಅವನನ್ನು ದಿಟ್ಟಿಸಿ, ತನ್ನ ಕಸಿಯಂಗಿಯ ಕಿಸೆಲ್ಲಿಟ್ಟುಕೊಂಡಳು. ಇಬ್ಬರು ಕ್ಷೇಮಸಮಾಚಾರದ ಮಾತುಗಳನ್ನಾಡಿದರು. ಆದರೊಳಗೂ ಡಿಮಿಟ್ರಿಗೆ ತನ್ನ ವಿಷಯದಲ್ಲಿ ಆಕೆಯ ಮನಸಿನಲ್ಲೇನೂ ಪ್ರೀತಿಯ ಹಸಿ ಕಂಡುಬರಲಿಲ್ಲ; ಆದರೂ ತನ್ನ ಕರ್ತವ್ಯವನ್ನು ತಾನು ಮಾಡಿಯೇ ತೀರುವ ನಿಶ್ಚಯವನ್ನು ಆಕೆಗೆ ಮನಗಟ್ಟು ಮಾಡಿದನು. ವೇಳೆಯಾದೊಡನೆ ಗಂಟೆ ಬಾರಿಸಿತು. ಕಟೂಷಳು ಹೊರಟಳು. ಡಿಮಿಟ್ರಿಯು ತನ್ನ ಕೈಮುಂದೆ ಚಾಚಿದ್ದರೂ ನೋಡದೆ, ಅವಸರದಿಂದ ನಡೆದಳು.

ಆಕೆಯ ಈ ಬಗೆಯ ಅಚ್ಚರಿಯ ನಡೆಯನ್ನು ನೋಡಿ ಡಿಮಿಟ್ರಿಯ ಮನಸು ಕದಡಿತು. ಮನಸು ವಿಚಾರಪರವಶವಾಯಿತು. ಇದೇನು? ಈಕೆಯು ಇದನೆಲ್ಲ ನಡಿಸಿರುವದು ನನ್ನ ಮನಸು ಪರೀಕ್ಷಿಸಲಿಕ್ಕೆ ಇರಬಹುದೇನು? ಎಂದು ಬಹುಪರಿಯಾಗಿ ತನ್ನೊಳು ತಾನೇ ಪೇಚಾಡಿದನು. ಅವನ ಯೋಚನೆಯು ಯಾವ ದಂಡೆಗೂ ಮುಟ್ಟಲಿಲ್ಲ; ಕೊನೆಗೆ, 'ಆಕೆಯಲ್ಲಿ—ಆಕೆಯ ಅಂತರ್ಯದಲ್ಲಿ—ಏನೋ ಒಂದು ಬಗೆಯ ಸ್ಥಿತ್ಯಂತರ ನಡೆದಿರುವದು ಸಿದ್ಧ' ಎಂದು ಸಂತೋಷಲಹರಿಯಲ್ಲಿ ಮುಳುಗೆದ್ದನು.

ಇತ್ತ, ಕಟೂಷಳು ತನ್ನ ಜೇಬಿನೊಳಗಿದ್ದ ಭಾವಚಿತ್ರವನ್ನು ತಿರುತಿರುಗಿ ಹೊರತೆಗೆದು ನೋಡಿ ನೋಡಿ, ತನ್ನ ಪೂರ್ವದ ಸ್ಥಿತಿ, ಇಂದಿನ ಸ್ಥಿತಿಯನ್ನು

ನೆನಿಸಿಕೊಂಡು ವ್ಯಸನಪಡುವಳು. ತನ್ನ ಕೌಮಾರ್ಯದ ಚಿತ್ರ, ತನ್ನ ಮುಂದಲೆಯ ಮೇಲೆ ಆಡುತ್ತಿರುವ ಆ ಸುತ್ತು ಸುತ್ತಿಕೊಂಡಿರುವ ಉಂಗುರು ಗೂದಲು, ಆ ಮುದ್ದಾದ ಮೀಸಲ ಕಳೆ, ಆವಾಗಿನ ತನ್ನ ಪ್ರೇಮದ ಮಾಧುರ್ಯ ಮುಂತಾದವುಗಳನ್ನು ಕಣ್ಮುಂದೆ ತಂದುಕೊಂಡು ಒಮ್ಮೆ ಸಂತಾಪದಿಂದ ರೇಗುವಳು; ತನ್ನ ಆಯುಷ್ಯವನ್ನೇ ಹಾಳುಮಾಡಿದ ತಾಪಕ್ಕಾಗಿ ಅವನ ಮುಖ ಕೂಡ ನೋಡಬಾರದೆನ್ನುವಳು; ಹೀಗಾಗಿ, ಆಕೆಯ ತಲೆ ಕಾಯ್ದು ಹೋಗುವದು. ನೆಲಕ್ಕೆ ಬಿದ್ದು ಬಿಸುಸುಯ್ವಳು, ಭೋರಿಟ್ಟು ತನ್ನಷ್ಟಕ್ಕೆ ತಾನೇ ಅಳುವಳು; ಮತ್ತೆ ಕಣ್ಣೊರಸಿಕೊಂಡು ಸುಮ್ಮನಾಗುವಳು.

ಡಿಮಿಟ್ರಿಯು ಪೀಟರ್ಸ-ಬರ್ಗಕ್ಕೆ ಹೋಗಿ, ಅಪೀಲಿನ ವಿಷಯದಲ್ಲಿ ಪ್ರಯತ್ನಿಸಲಿಕ್ಕೆ ತನ್ನ ಆಪ್ತ-ಇಷ್ಟರ ಕಡೆಗೆ ಹೋಗಿ ಬಂದ. ಅವನಿಗೆ ಕೆಲವು ವಸೀಲಿಯ ಪತ್ರಗಳು ಸಿಕ್ಕವು. ತಾನೂ ಹೋಗಿ ತನ್ನ ಗುರುತು-ಸ್ನೇಹದ ಬಲದಿಂದ ಅಪೀಲಿನ ಎತ್ತುಗಡೆ ಮಾಡಿದ; ಆದರೆ, ಯಾರಿಗೂ ಜನಹಿತದ ನಿಜವಾದ ಹಂಬಲವಿದ್ದಂತೆ ಕಾಣಲಿಲ್ಲ. ಎಲ್ಲರೂ ತಮ್ಮ ಸ್ವಾರ್ಥಕ್ಕಾಗಿ-ಒದ್ದಾಡುವವರೇ; ಆದುದರಿಂದ ಜಗದೊಳಗೆ ನಡೆದಿರುವ ನ್ಯಾಯ್ಯದ ಈ ಬಂಜೆ ಮಾತುಗಳು, ಸತ್ಯದ ಬಣಗು ಕೂಗು, ದೇವರು-ಧರ್ಮವೆಂದು ನಡಿಸಿರುವ ಒಣ ಗಲಭೆ, ಇವೆಲ್ಲ ಶಬ್ದ ಜಾಲಗಳು, ಈ ಜಾಲಗಳನ್ನು ಜನರ ಮೇಲೆ ಬೀಸಿ, ತಮ್ಮ ಜೀವನ, ತಮ್ಮ ಬಾಳುವೆ, ತಮ್ಮ ಆಸೆ-ಬಯಕೆಗಳನ್ನು ಪೂರೈಸಿಕೊಳ್ಳುವದೇ ಅರಮನೆ-ಗಿರಮನೆ, ಸಿರಿವಂತಿಕೆ ಮುಂತಾದವುಗಳ ಒಳಗುಟ್ಟು ಎಂಬದು ಮನವರಿಕೆ ಆಯಿತು. ಮನುಷ್ಯನ ಮನಸಿನಲ್ಲಿ ಹುದುಗಿಕೊಂಡಿರುವ ಪಶುಭಾವನೆ ಎಂಬುದು ಬರಿಯ ಬತ್ತಲೆಯಿಂದಿರುವವರೆಗೆ ಆದರಿಂದ ಮನುಷ್ಯನಿಗೇನೂ ಅಪಾಯವಾಗುವದಿಲ್ಲ; ಹೆಚ್ಚಿಗೇನು ? ಮನುಷ್ಯನು ಅದರ ಹತ್ತಿರ ಹೋಗಲು ತಾನೇ ಹೆದರುತ್ತಾನೆ; ಆದರೆ, ಅದು ತನ್ನ ನಿಜರೂಪವನ್ನು ಮನಮೋಹಕವಾದ ಯಾವುದೊಂದು ಪರದೆಯಿಂದ ಮುಚ್ಚಿಕೊಂಡು, ನಮ್ಮಲ್ಲಿ ಸೇರಿತೆಂದರೆ, ಅದರ ಮೇಲಿನ ರೂಪವನ್ನು ನೋಡಿ ನಾವು ಅದನ್ನು ಹೊಗಳುತ್ತೇವೆ; ಪೂಜಿಸುತ್ತೇವೆ;-ಈ ಅವಸ್ಥೆಯಲ್ಲಿಯೇ ಅದು ನಮ್ಮ ಮೇಲೆ ಬಂದು, ನಮ್ಮನ್ನು ತಿಂದು ತೇಗುವದು; ಆಗ ಮಾತ್ರ ನಮಗೆ ಬೆಳಿತು

ಕೆಟ್ಟದರ ಎಚ್ಚರ ಉಳಿಯುವದಿಲ್ಲ. ಇಂಥ ಅವಸ್ಥೆಯು ಬಹು ಭಯಂಕರ ವೆಂದು ಅವನ ಮನಸಿನಲ್ಲಿ ಸ್ವಚ್ಛ ಪ್ರಕಾಶ ಬಿದ್ದಿತು. ಇಷ್ಟು ದಿನ ಅವನಿಗೆ ಒಳಿತು, ಚಂದ ಎಂದು ಕಾಣುವ ವಸ್ತುಗಳೆಲ್ಲ ಇಂದು ಅವನ ಕಣ್ಣುಗಳಲ್ಲಿ ಚುಚ್ಚಲಾರಂಭಿಸಿದುವು. ಜಗವೆಂಬುದು ಅವನಿಗೆ ಹೇಸಿಕೆ ಇಟ್ಟಿತು.

ಇದನೆಲ್ಲ ಒಂದೇ ಏಟಿಗೆ ಮರೆತು ನಿರಾಳನಾಗಬೇಕೆಂದು ಅವನಿಗ ನಿಸಿತು; ಹಾಗೆ ಪ್ರಯತ್ನಿಸಿದ; ಆದರೆ, ಸಾಧ್ಯವಾಗಲಿಲ್ಲ; ಆದರೂ, ಅವನ ಪುಣ್ಯದಿಂದ ಅವನ ಸದ್ಭಾವನೆಗಳ ಮೂಲಕ ಜ್ಞಾನ-ಕಿರಣಗಳು ಅವನ ಎದೆ ಯಲ್ಲಿ ಮಿಂಚಿದಂತೆ ಭಾಸವಾಯಿತು. ಅರೆಕ್ಷಣ ಅವನಿಗೆ ಆನಂದದಿಂದ ಮೈಮರೆಯಿತು. ತನ್ನೊಳಗೆ ತಾನು ಮುಳುಗಿದನು. ಪೀಟರ್ಸಬರ್ಗಕ್ಕೆ ಹೋಗಿ, ಅಲ್ಲಿಯ ಹಾಯಕೋರ್ಟಿನಲ್ಲಿ ನಡೆಯುವ ಕಟೂಷಳ ಅಪೀಲಿನ ತಾರೀಖಿನ ದಿನ ತಿಳಿದುಕೊಂಡನು. ನ್ಯಾಯಾಧೀಶರು ಎಷ್ಟು ಮಂದಿ? ಯಾರು ಯಾರು ಇರುವರು? ಅವರಲ್ಲಿ ಯಾರಿಗೆ ತಾನು ವಸೀಲಿ ಹಚ್ಚಿ ತನ್ನ ಕಾರ್ಯ ಸಾಧಿಸಿಕೊಳ್ಳಬಹುದು? ಎಂದು ಮುಂತಾಗಿ ಆಲೋಚನೆ ನಡಿಸಿದನು. ತನ್ನ ಪರಿಚಯುದ-ಗುರುತಿನ ಸಿರಿವಂತ ನೆಂಟರನ್ನೆಲ್ಲ ಇದೇ ಉದ್ದಿಶ್ಯವಾಗಿಯೇ ಕಂಡು ಮಾತನಾಡಿ, ಅವರಿಂದ-ಶಕ್ಯವಿದ್ದರೆ-ಕಾಗದಗಳನ್ನು ಸಹ ತೆಗೆದುಕೊಂಡು ಬಂದು ಸಜ್ಜಾಗಿ ಕುಳಿತನು.

ಹಾಯಕೋರ್ಟಿನಲ್ಲಿ ವ್ಯಾಜ್ಯದ ಪುನರ್ವಿಚಾರಣೆ ನಡೆಯುವ ಮೊದಲೇ ಅವನು ಭೆಟ್ಟಿಯಾಗಬೇಕಾದವರಿಗೆ ಭೆಟ್ಟಿಯಾಗಿ ತನ್ನ ಮತ್ತು ಕಟೂಷಳ ಬಗ್ಗೆ ಹೇಳಬೇಕಾದ್ದನ್ನು ಹೇಳಿಬಂದನು. ನಿಶ್ಚಿತ ದಿವಸ ಅದರ ವಿಚಾರಣೆ ನಡೆಯಿತು. ನ್ಯಾಯಾಧೀಶ-ಮಂಡಲಿಯಲ್ಲಿ ಒಬ್ಬನಿಗೆ 'ಕಟೂಷಳಂಥ ಸೂಳೆಯನ್ನುಳಿಸಲು ಡಿಮಿಟ್ರಿಯಂಥವನು ಪ್ರಯತ್ನಪಡು ವದು ತುಂಬಾ ಅನೀತಿಯ'ದೆಂದು ಮನವರಿಕೆಯಾದ್ದರಿಂದ ಅವನು ಮತ್ತು ಇನ್ನು ಕೆಲವರು ವಿರುದ್ಧ ಮತ ಕೊಟ್ಟದ್ದರಿಂದ ಅದನ್ನು ಪುನರ್ವಿಚಾರಣೆಗೆ ತೆಗೆದುಕೊಳ್ಳಲಿಕ್ಕಾಗಲಿಲ್ಲ. ಈಮೇರೆಗೆ, ಯಾವುದರ ದೆಶೆಯಿಂದ ಡಿಮಿಟ್ರಿಯು ಹಲವು ವರ್ಷಗಳಿಂದ ಶ್ರಮಪಡುತ್ತಿದ್ದನೋ, ಅದು ನಿರಾಸೆಯಾದ್ದರಿಂದ

ಡಿಮಿಟ್ರಿಯ ಎದೆಯೊಡೆದು ನೀರಾಯಿತು; ಆದಾಗ್ಯೂ, ಬಾದಶಹರ ಕಡೆಗೆ ಕಡೆಯ ತೀರ್ಮಾನಕ್ಕಾಗಿ ಹೋಗಿಯೇ ತೀರಬೇಕೆಂದು ನಿಶ್ಚಯಿಸಿ, ಅದರದೊಂದು ಅರ್ಜಿಯನ್ನು ಬರೆಯಿಸಿಕೊಂಡು, ಕಟೂಷಳ ರುಜು ಹಾಕಿಸಿಕೊಂಡು ಬರಲಿಕ್ಕೆ ಮತ್ತೆ ಸೆರೆಮನೆಗೆ ಹೋದನು. ಬಾದಶಹರ ಕಡೆಗೆ ಅಪೀಲು ಮಾಡಿಕೊಂಡರೂ ಅದರಲ್ಲಿ ಎಷ್ಟರ ಮಟ್ಟಿಗೆ ಜಯ ದೊರಕುವದೆಂಬುವ ವಿಷಯದಲ್ಲಿ ಅವನಿಗೆ ಸಂದೇಹವಿತ್ತು. ತನ್ನ ಮಟ್ಟಿಗೆ ತಾನು ಕಟೂಷಳೊಡನೆ ಸೈಬೀರಿಯಕ್ಕೆ ಹೋಗಿ, ಅಲ್ಲಿಯೇ ಕಾಲಕಳೆಯುವ ಸಿದ್ಧತೆಯನ್ನೆಲ್ಲ ಮಾಡಿಟ್ಟುಕೊಂಡಿದ್ದನು. ಆ ವೇಳೆಯಲ್ಲಿ ಅವನಿಗೆ ಅಮೇರಿಕದ ಥೋರೋ ಎಂಬ ಪ್ರಸಿದ್ಧ ಗ್ರಂಥಕಾರನು 'ಸರಕಾರದವರು ಒಳ್ಳೆಯವರನ್ನೆಲ್ಲ ಅನ್ಯಾಯದಿಂದ ಹಿಡಿದು ಸೆರೆಮನೆ ಕಾಣಿಸುತ್ತಿರುವಾಗ, ನ್ಯಾಯಪಕ್ಷಪಾತಿಯಾದ ಸಂಭಾವಿತನಿಗೆ ಕೂಡ ಸೆರೆಮನೆಯೇ ಮನೆಯಾಗುವದು' ಎಂದು ನುಡಿದ ಮಿಂಚು ಮಾತು ಜ್ಞಾಪಕಕ್ಕೆ ಬಂದು ಸಮಾಧಾನವಾಯಿತು; ಮತ್ತು ಈ ಸಮಯದಲ್ಲಿ ತನಗೂ ಇದೇ ಮಾತು ಅಕ್ಷರಶಃ ಹೊಂದುತ್ತದೆಂದು ಮನಸ್ಸು ಗಟ್ಟಿಮಾಡಿಕೊಂಡನು.

ಮತ್ತೆ ಸೆರೆಮನೆಗೆ ಬಂದನು. ಹೆಬ್ಬಾಗಿಲಲ್ಲಿ ಕುಳಿತಿರುವ ಬಾಗಿಲ ಕಾಯುವವನು ಡಿಮಿಟ್ರಿಯನ್ನು ಗುರುತಿಸಿದ. 'ಮಾಸ್ಲೋವಳು ಇಲ್ಲಿಲ್ಲ; ಮತ್ತೆ ಆಕೆಯನ್ನು ಸೆರೆಮನೆಗೆ ಕಳಿಸಿದ್ದಾರೆ'ಂದು ಹೇಳಿದನು. 'ಚನ್ನಾಗಿದ್ದವಳನ್ನು ಮತ್ತೇಕೆ ಸೆರೆಮನೆಗೆ ಬದಲಾಯಿಸಿದರು?' ಎಂದು ಡಿಮಿಟ್ರಿಗೆ ಸಂದೇಹ; ಆದರೂ ಬಾಗಿಲ ಕಾಯ್ವವನನ್ನೇ ಕೆದರಿ ಕೇಳಲಿಕ್ಕಾಗಿ ಅವನು 'ಏನು ಸ್ವಾಮಿ. ಇಂಥವರನ್ನೆಲ್ಲ ನಂಬಲಿಕ್ಕಾಗುತ್ತದೆಯೇ? ಮಾಸ್ಲೋವಳು ಅಸಿಸ್ಟಂಟ ಡಾಕ್ಟರನೊಡನೆ ದುರ್ವ್ಯವಹಾರ ನಡಿಸಿದಳೆಂದು ತಿರಿಗಿ ಸೆರೆಮನೆಗೆ ಕಳಿಸಿದರು' ಎಂದು ತಿರಸ್ಕಾರಪೂರ್ಣ ನಗೆಯಿಂದ ನುಡಿದನು. ಡಿಮಿಟ್ರಿಗೆ ಸಿಡಿಲು ಬಡಿದಂತಾಯಿತು. ಜೀವವು ಬಹು ಕಳವಳಿ ಆಯಿತು; ಮೊತ್ತಮೊದಲು ಅವನ ಮನಸು ನಾಚಿತು. ಆಕೆಯ ಮನಃಸ್ಥಿತಿಯನ್ನು ಸರಿಯಾಗಿ ತಿಳಿದುಕೊಳ್ಳದೆ, ತಾನೇ ತನ್ನ ಮನಸಿಗೆ ಬಂದಂತೆ ಆಕೆಯ ವಿಷಯದಲ್ಲಿ ವಿಚಾರಿಸುತ್ತ ಕುಳಿತದ್ದನ್ನು ಕಂಡು, ತನ್ನ ಹುಚ್ಚುತನಕ್ಕೆ ಡಿಮಿಟ್ರಿಯು

ನಕ್ಕನು. ತನ್ನ ಬಾಳು ಹಾಳಾಯಿತು. ತನ್ನ ಜೀವನವು ಮಣ್ಣುಪಾಲಾಯಿತೆಂದು ಕಣ್ಣೀರಿಟ್ಟು ನರಳುವ ಆಕೆಯ ಮನಸು ಹೇಗಿರುವದೆಂಬುದು ಅವನಿಗೀಗ ತಿಳಿಯಬಂತು; ಮತ್ತು ಹೋದ ಸಾರೆ ಅವನು ಆಕೆಯನ್ನು ಕಾಣಲಿಕ್ಕೆಂದು ಸೆರೆಮನೆಗೆ ಬಂದಾಗ ಆಕೆಯ ಮೊಂಡತನವು ಡಿಮಿಟ್ರಿಗೆ ಚೂರು ಚಾರು ಅನುಭವಕ್ಕೆ ಬಂದಂತಾಗಿತ್ತು. ಅದೆಲ್ಲ ಬಿಚ್ಚಿಟ್ಟಹಾಗೆ ಇಂದು ಅವನ ಕಣ್ಮುಂದೆ ಬಂದುಬಂದು ಮಾಯವಾಗುವ ಗೊಂದಲದಲ್ಲಿಯೇ ಅವನು ಆಸ್ಪತ್ರಿಯ ಹೊರಗೆ ನಡೆದನು.

'ಇನ್ನೇನು ಮುಂದೆ? ಇನ್ನೂ, ನಾನವಳಿಗೆ ಕರ್ತವ್ಯಬದ್ಧನಾಗಿರುವೆನೋ ಹೇಗೆ? ಇದೀಗ ನಾನು ಕೇಳಿರುವ ಸುದ್ದಿಯಿಂದ ನನಗೂ ಆಕೆಗೂ ಇನ್ನು ಮುಂದೆ ಯಾವ ಬಗೆಯ ಸಂಬಂಧವಿಲ್ಲೆಂದು ಸಿದ್ಧವಾಗುವದಿಲ್ಲವೇ? ಎಂದು ಮುಂತಾಗಿ ತನ್ನಷ್ಟಕ್ಕೆ ತಾನು ಯೋಚಿಸುತ್ತ ಅಳೆಯುತ್ತ ಕುಳಿತನು; ಆದರೆ ಮರುಕ್ಷಣವೇ, 'ನಾನಾಗಿಯೇ ಹೀಗೆ ನನ್ನ ಕರ್ತವ್ಯವನ್ನು ಹಾರಿಸಿಕೊಂಡರೆ, ಅದು ನನ್ನನ್ನೇ ತಿನ್ನುವದು. ನನ್ನದೇ ತಪ್ಪಾಗುವದು; ಆದುದರಿಂದ ಕಡೆತನಕ ನನ್ನ ಕರ್ತವ್ಯವೆಂದು ನಾನಿದನ್ನು ಸಾಧಿಸಿಯೇ ಬಿಡಲಿಕ್ಕೆಬೇಕು. ತನಗೆ ಹೊಳೆದಂತೆ ಆಕೆ ನಡೆಯಲಿ. ನನಗೆ ಹೊಳೆದಂತೆ ನಾನು ನಡೆದೇ ತೀರಬೇಕು. ಪಾಪ-ತಾಪ ಆಕೆಯ ಸುತ್ತ. ನನ್ನದೇನು? ನಾನು ಮಾತ್ರ ದಾರಿಬಿಟ್ಟು ನಡೆಯಲಾಗದು. ಕೈ ಹಿಡಿದವರನ್ನು ನಡು ನೀರಿನಲ್ಲಿ ಬಿಡಲಾಗದು' ಹೀಗೆಂದುಕೊಳ್ಳುತ, ಮುಂದಿನ ಕೆಲಸಕ್ಕೆ ಹತ್ತುವ ನಿಚ್ಚಟದ ಹೆಜ್ಜೆಗಳಿಂದ ಸೆರೆಮನೆಯ ಒಳಗೆ ಹೊಕ್ಕನು. ಅಲ್ಲಿಯೊಬ್ಬ ವಾರ್ಡರ ಕುಳಿತಿದ್ದ. ಅವನನ್ನು ಕುರಿತು 'ನಾನು ಮಾಸ್ಲೋವಳನ್ನು ಕಾಣಬೇಕಾಗಿದೆ' ಎಂದ. ವಾರ್ಡರನು ಡಿಮಿಟ್ರಿಯನ್ನು ಗುರುತಿಸಿ, ಹೊಸದಾಗಿ ಬಂದ ಸೆರೆಮನೆಯ ಅಧಿಕಾರಿ, ಅವನ ಕಟ್ಟುನಿಟ್ಟಿನ ಆಳಿಕೆ ಮುಂತಾದ ವಿಷಯಗಳನ್ನು ಹೇಳಿದ. ಇದಿಷ್ಟು ಮಾತು ಅವರಿವರಲ್ಲಿ ನಡೆಯುವ ಹೊತ್ತಿಗೆ ಜೇಲರನು ತನ್ನ ಆಫೀಸಿನಿಂದ ಹೊರಗೆ ಬಂದ; ಡಿಮಿಟ್ರಿಯು ಅವನಿದ್ದಲ್ಲಿಗೆ ಹೋಗಿ, ತಾನು ಮಾಸ್ಲೋವಳನ್ನು ಕಾಣುವ ಉದ್ದೇಶದಿಂದ ಬಂದುದನ್ನು ತಿಳಿಸಿದನು. ಜೇಲರನು ಗುಮ್ಮನ-ಗುಸುಕ. ಡಿಮಿಟ್ರಿಯ ಮುಖವನ್ನುಸಹ

ನೋಡದೆ, ' ನಿಯಮಿಸಿದ ದಿನವೇ ಭೆಟ್ಟಿ; ಕಂಡಾಗ ಆಗಲಿಕ್ಕೆ ಸಾಧ್ಯವಿಲ್ಲ. ' ಎಂದು ಮುಖದ ಮೇಲೆ ಹೊಡೆದಂತೆ ನಿಷ್ಠುರವಾಗಿ ನುಡಿದನು. ' ಇನ್ಸಪೆಕ್ಟರಿಂದ ನಾನು ಅಪ್ಪಣೆ-ಚೀಟಿ ತಂದಿರುವೆ; ಇದು ನೋಡಿ ' ಎಂದು ತಾನು ತಂದ ಚೀಟಿಯನ್ನು ಅವನ ಕೈಯಲ್ಲಿಟ್ಟ, ಆಗ ಅವನು ' ಆಗಬಹುದು. ಹಾಗಾದರೆ ' ಅಂದು, ' ಒಳಗೆ ಬನ್ನಿರಿ ' ಎಂದು ಕುಳ್ಳಿರಹೇಳಿ ಮಾಸ್ಲೋವಳನ್ನು ಕರೆತರಲಿಕ್ಕೆ ವಾರ್ಡರನಿಗೆ ಸೂಚಿಸಿದನು.

ಮಾಸ್ಲೋವಳು ಹೊರಗಿಂದ ಬಂದಳು. ಒಂದೆಡೆಯಲ್ಲಿ ನಿಂತಳು. ಜೇಲರನು ತನ್ನ ಖುರ್ಚಿಯ ಮೇಲೆ ಕಾಗದ-ಪತ್ರಗಳನ್ನು ಒಳ್ಳೇ ವಿಚಾರಪರನಾಗಿ ನೋಡುತ್ತ ಕುಳಿತಿದ್ದರೂ, ಕಟೂಷಳನ್ನಾಗಲಿ, ಡಿಮಿಟ್ರಿಯನ್ನಾಗಲಿ ನೋಡದೆಯೇ ' ನೀವು ಮಾತಾಡಿಕೊಳ್ಳಿ ನಿಮ್ಮದೇನಾದರೂ ಇದ್ದರೆ ? ' ಎಂದು ತನ್ನ ಕಾಗದ ಓದುವ ಕೆಲಸದಲ್ಲಿ ತೊಡಗಿದ.

ಕಟೂಷಳು ಡಿಮಿಟ್ರಿಯು ಕುಳಿತಲ್ಲಿಗೆ ಹೋದಳು. ಸಂಶಯದಿಂದ ತುಂಬಿದ ಅವನ ಕಣ್ಣುಗಳನ್ನು ನೋಡಿದೊಡನೆ, ಕಟೂಷಳ ಮುಖ ಕೆಂಪೇರಿ ಮೈಯೆಲ್ಲ ನಡುಗಿತು. ತನ್ನ ಜಾಕೇಟಿನ ಅಂಚಿಗೆ ನೀರಿಗೆ ಹಾಕುತ್ತ ತಲೆ ತಗ್ಗಿಸಿಕೊಂಡು ನಿಂತಳು.

ಆಕೆಯ ಮುಖ ನೋಡಿದೊಡನೆ, ಬಾಗಿಲ ಕಾಯ್ವನು ಹೇಳಿದ ಮಾತು ನಿಜವೆಂದು ಡಿಮಿಟ್ರಿಯು ತಿಳಿದನು. ಆಕೆಯೊಡನೆ ಸೇಕಹ್ಯಾಂಡ ಮಾಡುವದೂ ಅವನಿಗೆ ಬಹು ಅಸಹ್ಯವೆನಿಸಿತು; ಆದರೂ, ಉಪಾಯವಿಲ್ಲವೆಂದು ಆಕೆಯ ಮುಖವನ್ನು ನೋಡದೆ, ' ನಿನ್ನ ಅಪೀಲು ರದ್ದಾಯಿತು. ಉಪಾಯವಿಲ್ಲ. ' ಎಂದನು. ಆಕೆಯೂ ಬಾಯಿಂದ ಉಸಿರು ಎಳೆಯುತ್ತ ' ನನಗದು ಗೊತ್ತೇ ಇತ್ತು ? ಎಂದು ನುಡಿದಳು. ಮೊದಲಿನಂತೆ, ಡಿಮಿಟ್ರಿಯ ಮನಸು ನಿರ್ಮಲವಿದ್ದರೆ, ಅದೇಕೆ, ಅದೆಂತು ಎಂದು ಮುಂತಾದ ಪ್ರಶ್ನೆಗಳನ್ನು ಆಕೆಗೆ ಕೇಳುತ್ತಿದ್ದ; ಆದರೆ, ಆಕೆಯ ದುರ್ವ್ಯಹಾರದ ಸುದ್ದಿ ಕೇಳಿ, ಆಕೆಯ ಮುಖ ನೋಡುವದೇ ಅವನಿಗೆ ಅಸಹ್ಯವಾದ್ದರಿಂದ ಸುಮ್ಮನಿದ್ದ. ಕಟೂಷಳ ಕಣ್ಣಗಳು ಅಂಚುಮಟ ನೀರಿನಿಂದ ತುಳುಕಿದವು; ಇದರಿಂದ ಅವನ ಮನಸಿಗೇನೂ

ದುಃಖವೆನಿಸಲಿಲ್ಲ; ಆದರೂ ' ನೀನೇನೂ ನಿರಾಸೆಗೊಳ್ಳದಿರು, ಬಾದಶಹರ ಕಡೆಗೆ ಅಪೀಲು ಮಾಡುವದಿದೆ. ಅದರಲ್ಲೇನಾದರೂ ಗೆಲವು ಸಿಗುವದೇನೋ ? ' ಅಂದನು. ಕಟೂಷಳು ' ನನಗೆ ಅದರ ಯೋಚನೆ ಎಳ್ಳಷ್ಟು ಇಲ್ಲ. ' ಎಂದು ಕಣ್ಣೀರು ಸುರಿಸುತ್ತ ಅವನನ್ನು ನೋಡಿದಳು. ' ಹಾಗಾದರೇ ಏನು ? ' ಎಂದು ಡಿಮಿಟ್ರಿಯು ಕೇಳಿದ. ' ನನ್ನ ಬಗ್ಗೆ ನಿಮ್ಮ ಮನಸಿನಲ್ಲಿ ವಿಪರೀತ ವಿಚಾರವು ಹುಟ್ಟಿದಂತೆ ಕಾಣುತ್ತದೆ. ನಾನಿದ್ದ ಆಸ್ಪತ್ರಿಗೆ ಹೋದಾಗ ನಿಮಗೆ ಈ ವಿಚಾರವನ್ನು ಯಾರೋ ಹೇಳಿರಲಿಕ್ಕೆ ಸಾಕು ' ಎಂದಳು. ' ಅದೇನೇ ಇರಲಿ. ನನಗೇಕೆ ಅದರ ವಿಚಾರ. ? ಅದು ನಿನ್ನ ವಿಚಾರ. ' ಎಂದು ಮುಖಕ್ಕೆ ಗುಂಟು ಹಾಕಿಕೊಂಡು ಶಾಂತವಾಗಿ ನುಡಿದು, ' ಹುಂ. ಅದಿರಲಿ. ಇದರ ಮೇಲೆ ನಿನ್ನ ಸಹಿಮಾಡು ' ಎಂದು ಕಾಗದವನ್ನು ಮೇಜಿನ ಮೇಲಿಟ್ಟನು. ತನ್ನ ಜೇಬಿನೊಳಗಿನ ಕರವಸ್ತ್ರವನ್ನು ತಕ್ಕೊಂಡು ಕಣ್ಣೊರಸಿಕೊಳ್ಳುತ್ತ ಕಟೂಷಳು ' ಎಲ್ಲಿ ? ಏನೆಂದು ಸಹಿ ಹಾಕಬೇಕೆಂದು ಕೇಳಿದಳು. ಡಿಮಿಟ್ರಿಯು ' ಇಲ್ಲಿ ' ಎಂದು ಬೊಟ್ಟನಿಂದ ತೋರಿಸಿ ಸುಮ್ಮನೆ ಉದಾಸೀನನಾಗಿ ವಿಚಾರತೆರೆಗಳಿಗೆ ವಶನಾಗಿ ಮನಸಿನಲ್ಲಿ ಏಳುತ್ತ ಬೀಳುತ್ತ ಆಕೆಯ ಮುಖವನ್ನೇ ಕದ್ದು ಕದ್ದು ನೋಡುತ್ತಲೂ ಆಕೆಯ ಸ್ಥಿತಿಯ ದೆಸೆಯಿಂದ ಒಮ್ಮೆ ಕನಿಕರ ಪಡುತ್ತಲೂ, ಇನ್ನೊಮ್ಮೆ ಇಂಥ ವ್ಯಭಿಚಾರಿಯ ಸಲುವಾಗಿ ಇಷ್ಟು ದಿವಸ ಸುಮ್ಮನೆ ಕಷ್ಟಪಟ್ಟು ಭಂಗಪಟ್ಟೆನಲ್ಲಾ ಎಂದೂ ಮನಸಿನಲ್ಲಿಯೇ ನೊಂದುಕೊಳ್ಳುತ ಕುಳಿತನು. ಒಂದು ಕ್ಷಣ, ' ಆಕೆಯನ್ನು ಇಂಥ ಕೆಟ್ಟ ಚಾಳಿಗೆ ಎಳೆದವನು ನಾನೇ ಎಂದು ತನ್ನನೇ ತಾನು ಬೈದುಕೊಳ್ಳುವನು; ಮತ್ತೊಂದು ಕ್ಷಣ, ಆಕೆಯ ಸ್ಥಿತಿಯನ್ನು ನೋಡಿ ಮನಕರಗಿ ಮರಗುವನು.

ಕಟೂಷಳು ತನ್ನ ಅಂಕಿತ ಹಾಕಿ, ಕೈಯಲ್ಲಿಯ ಟಾಕನ್ನು ಕೆಳಗಿಟ್ಟಳು. ಮಸಿಹತ್ತಿದ ಬಟ್ಟನ್ನು ಮೇಜಿಗೆ ಒರಸುತ್ತ ಏಳುವಾಗ ಡಿಮಿಟ್ರಿಯು ಕಡೆ ಕಣ್ಣು ಹೊರಳಿಸಿದಳು. ಅವನು ' ಒಳ್ಳೇದು. ಆದದ್ದಾಗಲಿ. ಬಂದಷ್ಟು ಬರಲಿ. ನನ್ನ ಸಖ್ಯದಿಂದ ಅಲ್ಪ ದೂರಿಯು. ನಿನ್ನ ಕೈಬಿಡೆನು ' ಎಂದು ನಿಟ್ಟುಸಿರು ಬಿಟ್ಟು ನುಡಿದನು. ಅವನಾಡಿದ ಮಾತು ಕೇಳಿ ಆಕೆಯ ಮುಖ ಸಂತಸದಿಂದ

ಬೆಳಗಿದರೂ, ‘ ನೀವು ನನ್ನ ಜೊತೆ ಬಂದು ಪ್ರಯೋಜನವೇನು? ’ ಎಂದಳು. ಇಷ್ಟು ಮಾತು ನಡೆದಿರುವಾಗ ಇನ್ಸಪೆಕ್ಟರನು ಬಂದನು. ಇಬ್ಬರೂ ಅಗಲ ಬೇಕಾಯಿತು. ಕಳೆದ ಹಲವು ವರ್ಷಗಳಲ್ಲಿ ತನ್ನ ಮನವನ್ನು ಸೆರೆಹಾಕಿ ತನ್ನನ್ನು ಹಲವು ಬಗೆಯ ಪರಿತಾಪಗಳಿಗೆ ಗುರಿಮಾಡಿದ ಕಟೂಷಳು ಇಂದು ಬೇರೆಯವರಿಗೆ ಮನಸೋತಳು ಎಂಬೀ ಕಲ್ಪನೆಯಿಂದ ಡಿಮಿಟ್ರಿಗೆ ಎಳ್ಳಷ್ಟೂ ಮನೋಭಂಗವಾಗಲಿಲ್ಲ; ತಿರುಗಿ, ಆಕೆಯಲ್ಲಿ ತನ್ನ ಪ್ರೀತಿಯಿನ್ನೂ ದೃಢವಾಗಿರುವದಕ್ಕಾಗಿ ಅವನಿಗೆ ಒಂದು ಬಗೆಯ ಆನಂದ; ತನ್ನ ಮನಸ್ಸು ಕೀಳು ಆಗದೆ ಇಷ್ಟು ಉನ್ನತವಾಗಿರುವದಕ್ಕೆ ಅವನಿಗೆ ಉತ್ಸಾಹ; ‘ ನಾನಾಕೆಯನ್ನು ಪ್ರೀತಿಸುವದು ನನಗೋಸ್ಕರವಲ್ಲ; ಆಕೆಯ ಹಿತಕ್ಕಾಗಿ; ದೇವರ ದೆಸೆಯಿಂದ ಎಂದುಕೊಂಡು ಮನಸ್ಸನ್ನು ಕೀಳು–ಮೇಲುಗಳ ಆಚೆ ಇರಿಸಿ, ತಾನು ಕೈಕೊಂಡ ಪವಿತ್ರ ಕಾರ್ಯಕ್ಕಾಗಿ ತನ್ನೊಳು ತಾನೇ ಆನಂದಪಟ್ಟುಕೊಂಡ.

ಅಸಿಸ್ಟಂಟ ಡಾಕ್ಟರನಿಗೆ ಮನಸೋತ ತಪ್ಪಿನ ದೆಸೆಯಿಂದ ಕಟೂಷಳು ಅಪರಾಧಿ ಎಂದು ಡಿಮಿಟ್ರಿಯು ಅಂದುಕೊಂಡಿದ್ದ; ಆದರೆ, ಆಕೆಯ ಅಪರಾಧದ ನಿಜಸ್ಥಿತಿಯು ಬೇರೆ ಇತ್ತು. ಅದೇನಂದರೆ, ಒಂದು ದಿನ ಮುಖ್ಯ ಸೂಲಗಿತ್ತಿಯು ತನ್ನ ಕೈಯ್ಯೊಳಗೆ ಕೆಲಸಕ್ಕೆ ಇದ್ದ ಪಾಪ ಕಟೂಷಳನ್ನು ಯಾವದೋ ಒಂದು ಸಾಮಾನು ತರಲಿಕ್ಕೆಂದು ಆಸ್ಪತ್ರಿಗೆ ಕಳಿಸಿದಳು. ಆ ಸಮಯದಲ್ಲಿ ಆಸ್ಪತ್ರಿಯಲ್ಲಿ ಅಸಿಸ್ಟಂಟ ಡಾಕ್ಟರನ ಹೊರ್ತಾಗಿ ಇನ್ನಾರೂ ಇರಲಿಲ್ಲ. ಅವನು ಘಟಿಂಗನಿದ್ದು, ಕಟೂಷಳ ಮೇಲೆ ಕಣ್ಣಿಟ್ಟಿದ್ದ; ಮತ್ತು ಸಮಯ ಸಾಧಿಸಿದಾಗೆಲ್ಲ ತನ್ನ ವಶವಾಗಲಿಕ್ಕೆಂದು ಆಕೆಯನ್ನು ಪೀಡಿಸುತಿದ್ದ. ಈ ರೀತಿ ನಡೆದೇ ಇತ್ತು; ಒಂದಿನ ಆಕೆ ಒಬ್ಬಳೇ ಕೈಗೆ ಸಿಕ್ಕಿದ್ದರಿಂದ ಅವನು ಆಕೆಯ ಮೈಮೇಲೇರಿ ಹೋದನು. ಆಕೆ ಚೀರಿ, ಅವನಿಗೊಂದು ಏಟುಕೊಟ್ಟು ನೂಕಿ ಹೋದಳು. ಇದರಿಂದ ಅವನ ಮೈ ಔಷಧಗಳನ್ನಿಟ್ಟ ಕಪಾಟಿಗೆ ತಾಕಿ, ತಾನೂ ಬಿದ್ದು, ಕೆಲ ಸೀಸೆಗಳು ಒಡೆದವು; ಬಾಟ್ಲಿಗಳು ಒಡೆದ ಸಪ್ಪಳವು ಅಲ್ಲಿ ಹಾಯ್ದು ಹೋಗುತ್ತಿದ್ದ ಡಾಕ್ಟರನಿಗೆ ಕೇಳಿಸಿತು; ಮತ್ತು ಕಟೂಷಳು

ಓಡುವದನ್ನೂ ಕಂಡನು. ಇದನ್ನು ನೋಡಿ ಅವನು ಇಬ್ಬರಿಗೂ ಸಿಟ್ಟುಮಾಡಿ ಆಕೆಯನ್ನು ಆಸ್ಪತ್ರಿಯಿಂದ ಸೆರೆಮನೆಗೆ ಕಳಿಸಿದ್ದನು. ಇದಿಷ್ಟೇ ಆಕೆಯಿಂದಾದ ತಪ್ಪು.

ಇದನ್ನೆಲ್ಲ ಮೊದಲಿನಿಂದ ತುದಿಯವರೆಗೆ ಡಿಮಿಟ್ರಿಗೆ ಅರುಹಬೇಕೆಂದು ಅವಳಾಸೆ; ಆದರೆ, ತನ್ನ ನಿಜಸ್ಥಿತಿಯನ್ನು ಅವನ ಮುಂದೆ ತಾನೇ ತಿಳಿಸಿಕೊಂಡರೆ, ಅದರಿಂದ ಅವನ ಸಂಶಯವು ಹೆಚ್ಚಾದೀತೆಂದು ಮುಚ್ಚಿದ ತುಟಿ ಎರಡು ಮಾಡಲಿಲ್ಲ; ಆದರೂ ಹಿಂದಿನಕಿಂತ ಇಂದು ಕಟೂಷಳಿಗೆ ಡಿಮಿಟ್ರಿಯಲ್ಲಿ ತುಂಬಾ ಪ್ರೇಮ; ಅವನ ಮನ ಒಲಿಸಲಿಕ್ಕೆಂದೇ ಆಕೆ ಇತ್ತೀಚೆ ಕುಡಿತ, ಸೇದುವದು ಮುಂತಾದವುಗಳನ್ನು ಬಿಟ್ಟಿದ್ದಳು; ಮತ್ತು ತನ್ನನ್ನು ಮದುವೆಯಾಗಬೇಕೆಂಬ ಹವ್ಯಾಸವು ಅವನಿಗಿದ್ದರೂ, ತಾನು ಆತನ ಕೈ ಹಿಡಿದು, ಅವನ ಆಯುಷ್ಯವನ್ನು ಕೆಡಿಸಬಾರದೆಂದು ಆಕೆಯ ಅಂತರಂಗ; ಹೀಗೆಲ್ಲಾ ತನ್ನಲ್ಲಾದ ಬದಲಾವಣೆಯನ್ನು ಲಕ್ಷಿಸದೆ, ತಾನೂ ಮೊದಲಿನಂತೆಯೇ ಇದ್ದ ಸಂದೇಹದಿಂದ ತನ್ನನ್ನು ಅವನು ಜರಿಯುವದು ಆಕೆಗೆ ಬಲು ನೋವನ್ನುಂಟುಮಾಡಿತು.



# ೧೩ ಸೆರೆಯಾಳುಗಳ ಪಯಣ.







ಮನುಷ್ಯನಿಗೆ ಸ್ವಾರ್ಥವೆಂಬದು ಅಖಂಡವಾಗಿ ಬೆನ್ನಟ್ಟಿರುವದರಿಂದ, ಅವನಿಗೆ ಸುಖದುಃಖಗಳೆರಡೂ ಒಂದರ ಹಿಂದೊಂದು ಅಂಟಿಕೊಂಡು ಪ್ರಾಪ್ತವಾಗುವವು; ಆದರೆ, ಯಾವಾಗಲೂ ಹಿಂದು ಮುಂದೆ ಜಗ್ಗಾಡಿ ಮನುಷ್ಯನನ್ನು ನೂಕು-ನುಗ್ಗಲು ಮಾಡುವ ಈ ದಂದುಗದೊಳಗಿಂದ ಮನುಷ್ಯನು ಪಾರಾಗಿ ಸ್ವಾರ್ಥದ ಪರದೆಯನ್ನು ಹರಿದು ಒಗೆದು, ಸ್ವಲ್ಪ ಕಷ್ಟಪಟ್ಟು ಮೇಲಿನ ಮೆಟ್ಟಲಿಗೆ ಏರಿದರೆ, ಆ ಮನೋಭೂಮಿಕೆಯಲ್ಲಿ ಅವನಿಗಾಗುವ ಆನಂದಕ್ಕೆ ಎಣೆಯಿಲ್ಲ. ಕಷ್ಟದಿಂದ ಕಡಿದಾದ ಬಂಡೆಯನ್ನೇರಿ ಮೇಲೆ ಹೋಗಿ ನಿಂತು ಕೆಳಕ್ಕೆ ನೋಡಿದರೆ, ಆ ಎತ್ತರ, ಅಲ್ಲಿಯ ಮೀಸಲುಗಾಳಿ, ಮನಸಿಗಾಗುವ ಆನಂದವೇ ಇಲ್ಲಿ ಬಂದು ತಲ್ಪಿದವನಿಗೆ ಆಗುತ್ತದೆ; ಇಷ್ಟು ದಿವಸ ತನ್ನ ದೆಸೆಯಿಂದ ತನ್ನ ಉದ್ದಿಶ್ಯವಾಗಿಯೇ ಎಂದಿಟ್ಟುಕೊಂಡು ಡಿಮಿಟ್ರಿಯು ಕಟೂಷಳ ಸಲುವಾಗಿ ದುಡಿಯುತ್ತಿದ್ದುದರಿಂದ, ಅವನಿಗೆ ಒಮ್ಮೊಮ್ಮೆ ಬೇಸರವೆನಿಸುತ್ತಿದ್ದಿತು; ಆದರೆ, ಇಂದು ತಾನು-ತನ್ನದೆಸೆಯಿಂದ ಕಟೂಷಳನ್ನು ಉಳಿಸಲು ಪ್ರಯತ್ನಪಡುವ ಭಾವನೆಯು ಮಾಯವಾಗಿ, ಒಬ್ಬ ಬಡಪ್ರಾಣಿಯನ್ನು ಉದ್ಧಾರಮಾಡುವ ಕರ್ತವ್ಯದ ಹೊಸದಾರಿಯು ಅವನಿಗೆ ಗೊತ್ತಾಗಿದ್ದರಿಂದ, ಅವನ ಮನಸು ಒಂದು ನಿಟ್ಟಿಗೆ ತಲ್ಪಿ ಮನದ ಧಗೆಯುಡಗಿತು. ಸುಖದುಃಖಗಳಿಂದ ಹಿಗ್ಗದೆ ತಗ್ಗದೆ, ಯಾವಾಗಲೂ ಕರ್ತವ್ಯಾನಂದವೆಂಬ ಸಾಮ್ಯಾವಸ್ಥೆಯಲ್ಲಿ ಓಲಾಡತೊಡಗಿತ್ತು.

ಡಿಮಿಟ್ರಿಯ ಮುಂದೆ ಈಗ ಮೂರು ಮಹತ್ವದ ಕೆಲಸಗಳು ಸುಳಿದಾಡುತ್ತಿದ್ದವು; ಒಂದು ಬಾದಶಹರ ಕಡೆಗೆ ಮಾಸ್ಲೋವಳ ಬಗ್ಗೆ ಅಪೀಲು ಮಾಡಿಕೊಳ್ಳುವದು. ಒಂದುವೇಳೆ, ಆಕೆಯನ್ನೆ ಸೈಬೀರಿಯಕ್ಕೆ ಅಟ್ಟಿ ಹಾಕಿದರೆ, ತಾನೂ

ಆಕೆಯ ಹಿಂದೆ ಹೋಗಲು ಸಿದ್ಧತೆ ಮಾಡಿಕೊಳ್ಳುವದು, ತನ್ನ ಆಸ್ತಿಪಾಸ್ತಿಯ ವ್ಯವಸ್ಥೆ ಮಾಡುವದು; ಇವೆಲ್ಲ ಇದ್ದರೂ ಇವುಗಳಿಗಿಂತ ಹೆಚ್ಚಿನದೊಂದು ಕೆಲಸ ಮಾಡುವ ಹುಚ್ಚು ಬಲುದಿನಗಳಿಂದ ಅವನ ತಲೆಯಲ್ಲಿ ಸುಳಿಯುತ್ತಿತ್ತು; ಅದಾವುದೆಂದರೆ, ಒಳ್ಳೆಯವರು ಕೆಟ್ಟವರು ಎಂಬ ಪರೀಕ್ಷೆ ಮಾಡದೆ, ಎಲ್ಲರನ್ನು ಸೆರೆಮನೆಗೀಡು ಮಾಡುತ್ತಿರುವ 'ಅಪರಾಧಿಗಳ ಕಟ್ಟಳೆ.' ಈ ಕಟ್ಟಳೆಗೆ ಸುಮ್ಮಸುಮ್ಮನೆ ಬಲಿಬಿದ್ದು ಬಹುಮಂದಿ ಒಳ್ಳೇ ಜನರು ಗೋಳಾಡುತ್ತಿದ್ದುದನ್ನು ಡಿಮಿಟ್ರಿಯು ಕಂಡಿದ್ದ; ಅನೇಕರು ಅವನಿಗೆ ಈ ಬಗ್ಗೆ ಹಲವು ಬಾರಿ ಹೇಳಿಯೂ ಇದ್ದರೂ; ಮೇಲಾಗಿ ಸೆರೆಯಾಳುಗಳೊಡನೆ ಬಂದಿರುವ ಪ್ರತ್ಯಕ್ಷ ಸಂಬಂಧ, ಅವರು ಪಡುವ ಭವಣೆಗಳೂ ಅವನ ಮನಸ್ಸನ್ನು ಕರಗಿಸಿದ್ದವು; ಆದುದರಿಂದ ಅಪರಾಧಿಗಳನ್ನು ಐದು ತೆರನಾಗಿ ವಿಂಗಡಿಸದೆ, ಅಪರಾಧಿಗಳಿಗೆ ಯೋಗ್ಯ ಶಿಕ್ಷೆ ಮಾಡಿದಂತಾಗುವದಿಲ್ಲೆಂದು ಬಗೆದು, ಬೇರೆ ಬೇರೆ ಗ್ರಂಥಗಳ ಅಭ್ಯಾಸ ನಡಿಸಿದನು. ಆಗ ಅವನಿಗೆ ನಿರಾಶೆ ಎನಿಸಿತು. ಮನುಷ್ಯನು ತನ್ನನ್ನು ನೋಡಿಕೊಂಡು ಕಟ್ಟಳೆ ಮಾಡಿರದೆ, ಪರರನ್ನು ನೋಡಿ, ಪರದುಃಖಶೀತಲನಾಗಿ ಈ ಕಟ್ಟಳೆ ಮಾಡಿರುವನೆಂದು ಕಂಡುಬಂತು. ಯಾವ ವಿಚಾರಗಳೂ ಬಗೆಹರಿಯದೆ ತೆಪ್ಪಗಿದ್ದನು.

ಜುಲೈ ಐದನೇ ತಾರೀಖು. ಅಂದು ಎಲ್ಲ ಸೆರೆಯಾಳುಗಳೊಡನೆ ಮಾಸ್ಲೋವಳನ್ನೂ ಗಡಿಪಾರಿಗೆ ಕಳಿಸುವ ದಿನ. ಸೆರೆಯಾಳುಗಳ ಗುಂಪು ರೈಲಿನಿಂದ ಮಧ್ಯಾನ್ಹ ೩ ಘಂಟೆಗೆ ಹೊರಡುವದು ಗೊತ್ತಾಗಿತ್ತು. ಅದರಂತೆ, ಡಿಮಿಟ್ರಿಯೂ ಸ್ಟೇಶನ್ನಿಗೆ ಹೋಗಬೇಕೆಂದಿದ್ದನು. ಹೊರಗೆ ಇಣಿಕಿ ಹಾಕಿ ನೋಡಿದರೆ, ಕಣ್ಣು ಕುಕ್ಕಿಸಿ ತಲೆಯೊಡೆಯುವಂಥ ರಣರಣ ಉರಿಬಿಸಿಲು; ಅದರಿಂದ ಕಲ್ಲುಗೋಡೆ, ಕಬ್ಬಿಣದ ಚಪ್ಪರಗಳು ಕೂಡ ಕಾಯ್ದು ಕಾಯ್ದು, ಒಮ್ಮೆ ಗಾಳಿಯು ಸುಯ್ಯೆಂದು ಸುಳಿದರೆ ಸಾಕು, ವಾತಾವರಣವೆಲ್ಲ ಉರಿ ಉರಿಯಾಗುತ್ತಿತ್ತು; ಇಂಥ ದಣದಣ ಉರಿಬಿಸಿಲೊಳಗೆ ಡಿಮಿಟ್ರಿಯೂ ಮನೆ ಬಿಟ್ಟು ಸೆರೆಮನೆಗೆಂದು ಗಾಡಿಯೊಳಗೆ ಕೂತು ಹೊರಟನು. ಸೆರೆಯಾಳುಗಳ ಗುಂಪಿನವರು ಇನ್ನೂ ಸ್ಥಳ ಬಿಟ್ಟಿರಲಿಲ್ಲ. ಗುಂಪು ಗುಂಪುಗಟ್ಟಿಕೊಂಡು, ತಮ್ಮ

ತಮ್ಮ ಸಾಮಾನುಗಳನ್ನು ಹೆಗಲಿಗೆ ಕಟ್ಟಿಕೊಂಡು ಅವರು ಸೆರೆಮನೆಯ ಅಂಗಳದಲ್ಲಿ ನಿಂತಿದ್ದರು; ಡಿಮಿಟ್ರಿಯೂ ಅವರ ಗುಂಪಿನೊಳಗೆ ಸೇರಿದನು. ಅತ್ತಿತ್ತ ತಿರುಗಾಡುತ್ತಿರುವ ಜನರ ಗಡಿಬಿಡಿ; ಸೆರೆಯಾಳುಗಳ ಕಾಲೊಳಗಿನ ಸಂಕೋಲೆಗಳ ಖಳ ಖಳ ಸಪ್ಪಳ, ಜನರು ಖೋಖೋ ಕೆಮ್ಮುವದು, ಗುಣು ಗುಣು ಮಾತನಾಡುವದು ನಡೆದಿತ್ತು. ಒಬ್ಬ ಸೀಪಾಯಿಯು ಬಂದು ಹೆಬ್ಬಾಗಿಲ ತೆರೆದನು. ಸಂಕೋಲೆಗಳ ಸಪ್ಪಳ ಹೆಚ್ಚಾಯಿತು; ಎಲ್ಲ ಸೆರೆಯಾಳುಗಳು ಎದ್ದು ನಿಂತರು. ಮೊದಲು, ಕಠಿಣ ಶಿಕ್ಷೆಗೆ ಗುರಿಯಾಗಿರುವ ಸೆರೆಯಾಳುಗಳು ಮುಂದಾದರು; ಅವರಲ್ಲಿ ಕೆಲವರು ಗಡ್ಡವಿಟ್ಟವರು, ಗಡ್ಡವಿಲ್ಲದವರು ಕಾಲೊಳಗೆ ಕಣಿ ಕಣಿಸುವ ಸಂಕೋಲೆಗಳಿದ್ದರೂ, ಅವುಗಳ ಪರವೆ ಇಲ್ಲದವರಂತೆ ಕೈಯಲ್ಲಾಡಿಸುತ್ತ ದಿಟ್ಟ ಹೆಜ್ಜೆಗಳನ್ನಿಕ್ಕುತ್ತ ಬಂದರು. ಅವರ ಹಿಂದಿಂದೆ, ಗಡ್ಡ ಬೋಳಿಸಿದವರ ಹಿಂಡು ಒಂದು ಬಂದಿತು. ಅವರ ಕಾಲೊಳಗೆ ಸಂಕೋಲೆಗಳಿರದೆ, ಒಬ್ಬರ ಕೈಗಳನ್ನು ಇನ್ನೊಬ್ಬರ ಕೈಗೆ ಹಗ್ಗಗಳಿಂದ ಕಟ್ಟಿದ್ದರು. ತರುವಾಯ ಬಂದರು ಹೆಂಗಸರು. ಕೆಲವರ ಬಗಲಲ್ಲಿ ಕೂಸುಗಳು; ಕೆಲವರು ತಮ್ಮ ತಮ್ಮ ಗಂಡಂದಿರೊಡನೆ ಇದ್ದರು. ಈ ಹೆಂಗಸರ ದಟ್ಟಣೆಯಲ್ಲಿಯೇ ಡಿಮಿಟ್ರಿಗೆ ಮಾಸ್ಲೋವಳನ್ನು ಕಂಡಂತಾಯಿತು; ಆದರೆ, ಮುಂದೆ ಆಕೆ ಕಾಣದಂತಾದಳು. ಹೊರಗೆ ಬಂದ ಬಳಿಕ, ಮಕ್ಕಳಿದ್ದ, ಬಸಿರಿದ್ದ, ಅಶಕ್ತ ಹೆಂಗಸರು ಗಂಡಸರು ಬಂಡಿಗಳಲ್ಲಿ ಕುಳಿತರು. ಎಲ್ಲರು ಕೂತ ಬಳಿಕ ಈ ಗುಂಪುಗಳ ಅಧಿಕಾರಿಯು ತನ್ನ ತಲೆಯ ಮೇಲಿನ ಟೊಪ್ಪಿಗೆಯನ್ನು ತೆಗೆದು, ಬೆವರು ಬಸಿಯುತಿದ್ದ ತನ್ನ ಬೋಳ ತಲೆಯನ್ನು, ಕೆಂದ ಮತ್ತು ಕೊಬ್ಬಿದ ಗೋಣನ್ನು, ಮಿಂಚುವ ಮುಂದಲೆಯನ್ನು ಕೈವಸ್ತ್ರದಿಂದ ಒರಸಿಕೊಂಡು, ‘ ಹುಂ. ಬಂಡಿ ಹೊಡೆಯರಿನ್ನು ? ಎಂದು ಆಜ್ಞಾಪಿಸಿದನು. ಮುಂದೆ ಮುಂದೆ ಸೀಪಾಯಿಗಳು, ಅವರ ಹಿಂದಿಂದೆ, ಬೇರೆ ಬೇರೆ ವರ್ಗದ ಸೆರೆಯಾಳುಗಳ ಬಂಡಿಗಳು, ಅವರ ಬೆನ್ನಿಂದೆ ಸಾಮಾನುಸಟ್ಟು ಹೇರಿದ ಬಂಡಿಗಳು; ಹೀಗೆ ಈ ದಂಡು ನಡೆಯಿತು.

ಈ ಬಂಡಿಗಳ ಸಾಲು ಸುಮಾರು ವೈಲು ಒಂದುವರೆ ವೈಲಿನವರೆಗೆ ಹೀಗೇ ರೇಜಿಟ್ಟಿತ್ತು. ಹಿಂದಿನ ಬಂಡಿಗಳು ಹೊರಡುವ ಹೊತ್ತಿಗೆ ಮುಂದಿನ ಬಂಡಿಗಳು ಕಣ್ಣಿಗೆ ಕಾಣಿಸದಂತಾದವು. ಡಿಮಿಟ್ರಿಯು ತನ್ನ ಬಂಡಿಯಲ್ಲಿ ಕುಳಿತು, ಮುಂದಿರುವ ಬಂಡಿಗಳಲ್ಲಿ–ಎಲ್ಲಿಯಾದರೂ–ಮಾಸ್ಲೋವಳು ಕಣ್ಣಿಗೆ ಬೀಳುವಳೇನೆಂದು ನೋಡುತ್ತ ಹೊರಟನು. ಬಿಸಿಲಂತೂ ಅಳತೆಗೆಟ್ಟಿತು. ಇಂಥದರೊಳಗೆ ನಡೆಯುವದೆಂದರೆ, ಬೆಂಕಿಯಲ್ಲಿ ನಡೆಯುವಂತೆಯೇ ಸೈ; ಮೇಲಾಗಿ ಔಷಧಕ್ಕೆ ಕೂಡ ಗಾಳಿ ಇರದ್ದರಿಂದ, ಸಾವಿರಾರು ಸೆರೆಯಾಳುಗಳ ನಡಿಗೆಯಿಂದೇಳುವ ಧೂಳು ನಡುಮುಗಿಲಿಗೆ ತುಡುಕುತ್ತಿತ್ತು. ಹಾಗೆ ಅಲ್ಲಲ್ಲಿ ಕಣ್ಣಿಟ್ಟು ಕಣ್ಣಿಟ್ಟು ಬಂಡಿಯೊಳಗಿಂದ ನಡೆದಿರುವಾಗ, ಹೆಂಗಸರ ಗುಂಪಿನ ಎರಡನೇ ಸಾಲಿನಲ್ಲಿ ಮಾಸ್ಲೋವಳಿದ್ದುದು ಡಿಮಿಟ್ರಿಗೆ ಕಾಣಿಸಿತು. ಆಕೆಯ ಹೆಗಲಮೇಲೊಂದು ಚೀಲ; ಮುಂದೆಯೇ ನೆಟ್ಟದಿಟ್ಟಿಯಿಂದ ಅತ್ತಿತ್ತ ನೋಡದೆ ಹೊರಟ್ಟಿದ್ದಳು; ಬದಿಯಲ್ಲಿಯೇ ಹಿಂದಕ್ಕೆ ಸೆರೆಮನೆಯಲ್ಲಿ ಗೆಳತಿಯಾದ ಥಿಯೋಡೋಸಿಯಳು ಇದ್ದಳು. ಆಕೆಯನ್ನು ಕಂಡೊಡನೆ ತಟ್ಟನೆ ಬಂಡಿಯಿಂದಿಳಿದು, ಹೇಗಿರುವೆ ಏನೆಂಬುವ ಸಮಾಚಾರ ಕೇಳಬೇಕೆಂದು ಡಿಮಿಟ್ರಿಯು ಓಡತೊಡಗಿದ; ಇದನ್ನು ಕಂಡು, ಒಬ್ಬ ಸಾರ್ಜಂಟನು 'ಈಗ ಮಾತಾಡಕೂಡದು. ಸ್ವಾಮಿ, ಸ್ಟೇಶನ್ನಿಗೆ ಹೋಗುವ ತನಕ ತಾಳಿರಿ' ಎಂದು ಕೂಗಿದನು. ಡಿಮಿಟ್ರಿಯ ಮನಸ್ಸು ಕಚ್ಚಿಂದಿತು. ಮಾಸ್ಲೋವಳಿರುವ ಗುಂಪು ದೂರಾಗದಂತೆ ಗಡಗಡ ತನ್ನ ಬಂಡಿ ಹೊಡೆಯಲಿಕ್ಕೆ ಹೇಳಿ ತಾನೂ ಕುಳಿತು ಸಾಗಿದನು. ದೊಡ್ಡ ಸೈನ್ಯದಂತೆ ನಡೆದಿರುವ ಈ ಸೆರೆಯಾಳುಗಳ ದಂಡನ್ನು ನೋಡಿದರೆ, ಯಾರದಾದರೂ ಮನಸು ಮೊದಲು ಬೆದರಿ ಬೆಚ್ಚಿ, ಕರುಣೆಯಿಂದ ಕರಗುವದು; ಹಳ್ಳಿಪಳ್ಳಿಗಳ ಮೇಲಿಂದ ಹಾಯ್ದು ಹೋಗುವಾಗ ಹಳ್ಳಿಯ ಜನರು ತಮ್ಮ ತಮ್ಮ ಜನರನ್ನು ಕೂಗಿ ಕರೆದು, ತಮ್ಮ ಕೈಯಲ್ಲಿಯ ಕೆಲಸಗಳನ್ನು ಅಲ್ಲಿಯೇ ಬಿಟ್ಟು, ತಮ್ಮ ತಮ್ಮ ಮಕ್ಕಳುಗಳನ್ನು ಬಗಲಲ್ಲಿಟ್ಟುಕೊಂಡು ಓಡುತ್ತ ಬಂದು ಬೆಪ್ಪಾಗಿ ನಿಂತು ನೋಡುವರು. ಬಾಯಿಂದ ಪಿಟ್ಟೆನ್ನದೆ ಸಾವಿರಾರು ಜನರು ತಮ್ಮ ತಮ್ಮ ಹೆಗಲುಗಳಿಗೆ ತಮ್ಮ ತಮ್ಮ ಚೀಲಗಳನ್ನು ಹೊತ್ತುಕೊಂಡು ಔದಾಸೀನ್ಯಪೂರ್ಣ ಗಾಂಭೀ

ರ್ಯದಿಂದ ಒಂದೇ ಸವನೇ ಅಂಥ ಉರಿಯುವ ಬಿಸಿಲಲ್ಲಿ ನಡೆದಿರುವದನ್ನು ನೋಡಿದರೆ, ಯಾವ ಸಹೃದಯನ ಕಣ್ಣೊಳಗಿಂದಲೂ ತಮ್ಮಷ್ಟಕ್ಕೆ ತಾವೇ ನೀರು ಹರಿಯದಿರವು!

ಡಿಮಿಟ್ರಿಯ ಮೈಯಲ್ಲಿ ತೆಳ್ಳಗಿನ ಅಂಗಿ ಅರಿವೆಗಳಿದ್ದರೂ, ಅವನ್ನು ಕೂಡ ಇಟ್ಟುಕೊಳ್ಳಲಿಕ್ಕಾಗದಷ್ಟು ಉರಿ ಉಬ್ಬೆಯಿಂದ ಮೈ ಕುದಿಯುತ್ತಿತ್ತು; ಗಿಡ-ಮರಗಳು ಸಹ ಗಾಳಿಯಿಲ್ಲದ್ದರಿಂದ ಮುಖ ಜೋಲುಬಿಟ್ಟುಕೊಂಡು ಗಾಬರಿಯಾಗಿ ತೆಪ್ಪಗೆ ಅಲ್ಲಾಡದೆ ನಿಂತುಬಿಟ್ಟಿದ್ದವು; ಇಂಥದರೊಳಗೆ ಇಷ್ಟು ಜನರ ನಡಿಗೆಯಿಂದೇಳುವ ಧೂಳು ಅಖಂಡವಾಗಿ ತುಂಬಿಕೊಂಡಿದ್ದ ರಿಂದ ಉಸಿರಾಡಿಸುವದೂ ಕಷ್ಟವಾಗಿತ್ತು. ಒಟ್ಟಾರೆ, ಈ ಪಯಣದೊಳಗೆ ಡಿಮಿಟ್ರಿಯು ಎಂದೂ ಅನುಭವಿಸದ ಕಷ್ಟಗಳನ್ನು ಉಂಡನು. ಅಲ್ಲಲ್ಲಿ ಕೂಡ್ರುತ್ತ ನಿಲ್ಲುತ್ತ ಆ ಗುಂಪಿನವರ ಬೆನ್ನಟ್ಟುವ ಹೊತ್ತಿಗೆ ಅವನಿಗೆ ಸಾಕುಬೇಕಾಯಿತು. ಆ ಬಿಸಿಲಿನ ಉರಿಯಿಂದ ಒಬ್ಬಿಬ್ಬರು ಸತ್ತುಬಿದ್ದು ದನ್ನೂ ಡಿಮಿಟ್ರಿಯು ಕಂಡನು. ಅಂತೂ ಒಮ್ಮೆ ಸ್ಟೇಶನ್ನ ಮುಟ್ಟಿದನು.

ಡಿಮಿಟ್ರಿಯು ಸ್ಟೇಶನ್ನಿಗೆ ಹೋಗುವಷ್ಟೊತ್ತಿಗೆ ಸೆರೆಯಾಳುಗಳೆಲ್ಲ ಕಿಟಕಿಯೊಳಗಿಂದ ಇಣಿಕಿನೋಡುತ್ತ ರೇಲ್ವೆ ಬಂಡಿಗಳಲ್ಲಿ ಕುಳಿತಿದ್ದರು. ತಮ್ಮ ತಮ್ಮ ಆಪ್ತ-ಇಷ್ಟರನ್ನು ಕಾಣಲಿಕ್ಕೆಂದು ಬಂದ ಜನರನ್ನು ನೀರುಗಣ್ಣಿ ನಿಂದ ನೋಡುತ್ತಿದ್ದರು. ಯಾರನ್ನೂ ಮಾತಾಡಿಸಲಿಕ್ಕೆ ಅಪ್ಪಣೆ ಇಲ್ಲದ್ದರಿಂದ ಅವರವರ ಮುಖಗಳೇ ಮಾತಾಡುತ್ತಿದ್ದವು. ಇಂಥದರಲ್ಲಿಯೇ ಯಾವನೋ ಒಬ್ಬ ಸೀಪಾಯಿಯ ಕೈಬಿಸಿಮಾಡಿ ಹೇಗೋ ಡಿಮಿಟ್ರಿಯು ಪ್ಲ್ಯಾಟಫಾರ್ಮಿನ ಮೇಲೆ ಹೋಗಿ, ಕಟೂಷಳನ್ನು ಮಾತಾಡಿಸಬೇಕೆಂದ್ದು ಒಳಗೆ ಹೋದನು. ರೇಲ್ವೆಬಂಡಿಗಳಲ್ಲೆಲ್ಲ ಸೆರೆಯಾಳುಗಳನ್ನು ಕಿಕ್ಕಿರಿದು ತುಂಬಿದ್ದರು. ಒಳಗೆಲ್ಲ ಸಂಕೋಲೆಗಳ ಕಳಕಳ ಸಪ್ಪಳ. ಅವರು ಮಾತಾಡುವ ಗುಲ್ಲು ಇವುಗಳ ಸದ್ದೇ ಹೊರ್ತು ಮತ್ತೇನೂ ಕೇಳಿಸಲಿಲ್ಲ. ಗಂಡಸರ ಬಂಡಿಯನ್ನು ದಾಟಿ ಹೆಂಗಸರ ಬಂಡಿಗೆ ಲಗುಬಗೆಯಿಂದ ಬಂದ. ಅಲ್ಲಿ ಯಾವಳೋ ಒಬ್ಬಳು 'ಅಯ್ಯೋ, ಅಪ್ಪಾ, ಅವ್ವಾ, ಅಂ, ಅಂ, ದೇವರೇ' ಎಂದು ನರಳುತ್ತಿದ್ದುದು

ಕೇಳಿಸಿತು. ಯಾರು ಎಂದು ಕಿಟಕಿಯೊಳಗಿಂದ ಒಳಗೆ ಹಣಿಕಿ ಹಾಕಿದನು. ಒಳಗೆ ಕುಳಿತ ಜನರ ಬೆವರಿನ ಹುಳಿ ವಾಸನೆಯು ಅವನ ಮೂಗಿಗೆ ಬಂದ ಡರಿತು. ಈ ಗದ್ದಲದಲ್ಲಿಯೇ ಕಟೂಷಳು ತಲೆಬಿಟ್ಟುಕೊಂಡು ಕುಳಿತಿದ್ದಳು. ಡಿಮಿಟ್ರಿಯನ್ನು ಕಂಡೊಡನೆ, ತಲೆಯ ಮೇಲೆ ಕರವಸ್ತ್ರವನ್ನು ಹಾಕಿಕೊಂಡು ನಸುನಗುತ್ತ ಕಿಟಕಿಯ ಹತ್ತಿರ ಬಂದು ನಿಂತುಕೊಂಡು 'ಎಷ್ಟು ಸೆಕೆ ಇದು? ನೋಡಿದಿರಾ?' ಎಂದಳು.

ಡಿಮಿಟ್ರಿಯು 'ಅಹುದು. ನಾನು ಕಳಿಸಿದ ಸಾಮಾನುಗಳು ನಿನಗೆ ಮುಟ್ಟಿದವೋ? ನಿನಗೆ ಇನ್ನೇನಾದರೂ ಬೇಕೋ ಹೇಗೆ! ಎಂದು ಕೇಳುವಾಗ ಬಂಡಿಯಿಂದ ಸುಡು ಸುಡು ಹವೆಯು ಬರುತ್ತಿತ್ತು. ಕಟೂಷಳು 'ನನಗೇನೂ ಬೇಡ. ನೀವು ನನ್ನ ಜತೆಯಲ್ಲಿ ಬರಬೇಕೇನು?' ಎಂದು ತನಗೇನೂ ಗೊತ್ತಿಲ್ಲದಂತೆ ಕೇಳಿದಳು. ಡಿಮಿಟ್ರಿಯು 'ಕೇಳುವದೇನು? ನಾನು ಮುಂದಿನ ಬಂಡಿಗೆ ಬರುವೆ.' ಎಂದೆನುವಾಗ ಮಾಸ್ಲೋವಳು ಅವನ ಮುಖವನ್ನು ನೋಡಿ ದೀರ್ಘ ನಿಃಶ್ವಾಸ ಬಿಟ್ಟಳು. ಇದಾಗುವ ಹೊತ್ತಿಗೆ ಗಾರ್ಡನು ಸಿಳ್ಳುಹಾಕಿದನು. ಬಂಡಿಯು ಮೆಲ್ಲಗೆ ಗಡಗಡ ಎಂದು ಸಪ್ಪಳ ಮಾಡುತ ಹೊರಟಿತು. ಕಟೂಷಳು ಹೃದಯಸ್ಪರ್ಶಿಯಾದ ನಗೆಯಿಂದ ಡಿಮಿಟ್ರಿಯನ್ನು ನೋಡುತ್ತಿರುವ ಹಾಗೆ ಬಂಡಿಯು ಮುಂದೆಸಾಗಿತು. ಕೆಲ ಹೊತ್ತಿನ ಮೇಲೆ ಮರುಬಂಡಿಯಿಂದ ಡಿಮಿಟ್ರಿಯೂ ಹೊರಟನು.



# ೧೪ ಸೆರೆಯಾಳುಗಳ ಪರಿಚಯ.





ಸೆರೆಯಾಳುಗಳ ಬಂಡಿಯು ಸುಮಾರು ಮುನ್ನೂರು ಮೈಲು ದೂರಕ್ಕೆ ಹೋಗಿ ಪರ್ಮಸ್ಟೇಶನ್ನಿಗೆ ತಲ್ಪಿತು. ಇಲ್ಲಿಯ ವರೆಗೆ ಕಟೂಷಳು ನಿಜವಾಗಿಯೂ ದೋಷಿಗಳಾದ ಅಪರಾಧಿಗಳ ಗುಂಪಿನಲ್ಲಿಯೇ ಇದ್ದಳು. ಆಕೆಯನ್ನು ಹೇಗಾದರೂ ಮಾಡಿ ಅಪರಾಧಿಗಳ ಸಹವಾಸದಿಂದ ತಪ್ಪಿಸಿ ರಾಜಕೀಯ ಸೆರೆಯಾಳ-ಜತೆಯಲ್ಲಿರಿಸಬೇಕೆಂದು ಡಿಮಿಟ್ರಿಯು ಮೊದಲಿನಿಂದಲೂ ಪ್ರಯತ್ನಿಸುತಲಿದ್ದ. ಅದು ಈ ಸ್ಟೇಶನಿನಲ್ಲಿ ಸಾಧಿಸಿತು. ಆಕೆಯನ್ನು ಮೊದಲಿನ ಗುಂಪಿನೊಳಗಿಂದ ಬಿಡಿಸಿ ರಾಜಕೀಯ ಸೆರೆಯಾಳುಗಳ ಗುಂಪಿನವರು ಕುಳಿತ ಬಂಡಿಯಲ್ಲಿ ಕುಳ್ಳಿರಿಸಿದನು.

ಅಪರಾಧಿಗಳ ಗುಂಪಿನವರ ಬಂಡಿಯಲ್ಲಿ ಅಷ್ಟೊತ್ತು ಕುಳಿತುದೊಂದು ಕಟೂಷಳಿಗೆ ಹೆಚ್ಚಿನ ದಂಡನೆಯೇ ಆಗಿತ್ತು; ಯಾಕಂದರೆ, ಅವರು ಶಾರೀರಿಕ ಮತ್ತು ನೈತಿಕ ಹೀಗೆರಡೂ ದೃಷ್ಟಿಯಿಂದ ಶುದ್ಧ ಶ್ವಪಚರು. ಮನುಷ್ಯರ ದೇಹಶುದ್ಧಿ ಹೇಗೋ ಹಾಗೆ ಮನಶುದ್ಧಿ. ಅವೆರಡೂ ಅವರಲ್ಲಿಲ್ಲದ್ದರಿಂದ, ಕಟೂಷಳಿಗೆ ಬಲು ತೊಂದರೆ ಆಯಿತು. ಅವರ ಮೈ ಹೊಲಸು, ಅಂಗಿ ಅರಿವೆಗಳಲ್ಲಿಯಂತೂ ಕೂರಿಗಳು ಮನೆಮಾಡಿದ್ದವು; ತಲೆಗಳಲ್ಲಿ ಹೇನುಗಳು, ಅವರ ಮೈಯಿಂದ ಪ್ರತಿಕ್ಷಣಕ್ಕೆ ಹೊರಡುವ ವಾಸನೆಯಂತೂ ಮೂಗನ್ನು ಕಿತ್ತು ಹಾಕುವಂತಿತ್ತು; ಇಷ್ಟಲ್ಲದೆ, ಅವರ ಮನಸ್ಸೂ ಕೆಟ್ಟದು. ಮಾಸ್ಲೋವಳು ಸ್ವಾಭಾವಿಕವಾಗಿ ನೋಟಕ್ಕೆ ಬಲು ಅಂದವಿರುವದರಿಂದ, ಅಲ್ಲಿ ಕುಳಿತ ಗಂಡಸು ಸೆರೆಯಾಳುಗಳು ತಮ್ಮ ಹೊಲೆಗಣ್ಣುಗಳಿಂದ ಆಕೆಯ ಸೌಂದರ್ಯವನ್ನು ಕಿತ್ತುಕೊಂಡು ತಿನ್ನುವಂತೆ ನಿರ್ಲಜ್ಜರಾಗಿ ನೋಡತ್ತಿದ್ದರು; ಅಲ್ಲದೆ, ಕೆಲವರಂತೂ ನಾಚಿಕೆ ತೊರೆದು, ಆಕೆಯ ಮೈಗೆ ಮೈ ಹತ್ತಿಕೊಂಡು ಕುಳಿತು ಹಲವು ಬಗೆಯಿಂದ ಆಕೆಯನ್ನು ಹಿಂಸಿಸಲಿಕ್ಕೂ ಹಿಂಜರಿಯುತ್ತಿರ

ಲಿಲ್ಲ. ಕೆಲವರಿಗಂತೂ ಕಟೂಷಳ ಹಿಂದಿನ ಜೀವನ-ಕ್ರಮವು ಗೊತ್ತಾದ್ದ ರಿಂದ ಸೂಳೆಯೊಡನೆ ಚೇಷ್ಟೆ ನಡಿಸುವಂತೆ ಆಕೆಯನ್ನು ಬಲು ಬಗೆಯಿಂದ ಕಾಡಿದರೆನ್ನಲು ಅಡ್ಡಿ ಇಲ್ಲ; ಆದರೆ, ಆಕೆಯ ಬಳಿಯಲ್ಲಿ ಥಿಯೋಡೋಸಿಯ ಳಂಥ ಕುಲೀನ ಹೆಂಗಸು ಇರುವದರಿಂದ ಗಂಡಾಂತರದ ಪ್ರಸಂಗ ಬರಲಿಲ್ಲ.

ರಾಜಕೀಯ ಸೆರೆಯಾಳುಗಳ ಬಂಡಿಯಲ್ಲಿ ಕುಳ್ಳಿರಲು ಡಿಮಿಟ್ರಿಯು ಏರ್ಪಾಟು ಮಾಡಿದ್ದರಿಂದ ಕಟೂಷಳಿಗೆ ಎಲ್ಲ ಬಗೆಯಿಂದ ಸ್ವಲ ಹಾಯವೆನಿಸಿತು; ಮೇಲಾಗಿ ರಾಜಕೀಯ ಸೆರೆಯಾಳುಗಳು ಸುಶಿಕ್ಷಿತರು, ಸಂಸ್ಕಾರವಂತರು ಇರುವದರಿಂದ ಅವರನ್ನು ಮಿಕ್ಕ ಸರೆಯಾಳುಗಳಂತೆ ಹೇಯವಾಗಿ ನಡಿಸಿಕೊಳ್ಳುವಷ್ಟು ಯಾರಿಗೂ ಎದೆ ಇರಲಿಲ್ಲ. ಅವರ ಬಂಡಿಯಲ್ಲಿ ಅಷ್ಟು ದಟ್ಟಣೆಯೂ ಇರಲಿಲ್ಲ. ಎಲ್ಲ ಬಗೆಯ ಅನುಕೂಲ್ಯಗಳಿದ್ದವು, ಆಹಾರವೂ ಚನ್ನಾಗಿತ್ತು; ಇದರಿಂದ ಆಕೆಯು ತನ್ನ ಹಿಂದಿನ ದುಃಖವನ್ನೆಲ್ಲ ಮರೆತಳು. ಅಲ್ಲಿ ಕುಳಿತಂತೆಲ್ಲ ಒಳ್ಳೇ ಜನರ ಗುರುತು-ಪರಿಚಯವಾಯಿತು. ಅವರಾಡುವ ಒಳ್ಳೇ ಮಾತುಕತೆಗಳಿಂದ ಆಕೆಯ ಮನಸ್ಸು ಶುದ್ಧವಾಗಿ ಒಳಿತಿನ ಕಡೆಗೆ ಮನಸು ಎಳೆಯಹತ್ತಿತು.

ರೇಲ್ವೆಬಂಡಿಯ ಪ್ರವಾಸ ಮುಗಿದಬಳಿಕ, ಸೆರೆಯಾಳುಗಳಿಗೆ ಮತ್ತೆ ಕಾಲುನಡಿಗೆಯ ಸರತಿ ಬಂದಿತು. ದಿನಾಲು ೧೫-೨೦ ಮೈಲು ನಡೆಯುವದು, ಎರಡು ದಿನಕ್ಕೊಮ್ಮೆ ದಾರಿಯಲ್ಲಿ ಪೂರಾ ವಿರಾಮ, ಒಳ್ಳೇ ಆಹಾರ, ರಾಜಕೀಯ ಸೆರೆಯಾಳುಗಳ ಜತೆ, ಇವಿಷ್ಟರಿಂದ ಕಟೂಷಳ ಪ್ರಕೃತಿಯು ಸುಧಾರಿಸಿದ್ದಲ್ಲದೆ, ಆಕೆ ಎಂದೂ ಕೇಳದಂಥ ನೋಡದಂಥ ಹೊಸ ಸೃಷ್ಟಿಯನ್ನೇ ಕಂಡಂತಾಯಿತು. ದೇವರು ನನ್ನನ್ನಿಷ್ಟು ಕಷ್ಟಪಡಿಸಿದರೂ, ಕೊನೆಗೆ ಒಳ್ಳೇ ತಂಪಾದ ಸ್ಥಳ ತೋರಿಸಿದನೆಂದು ಸಂತೋಷಪಟ್ಟಳು. ರಾಜಕೀಯ ಸೆರೆಯಾಳುಗಳೆಂದರೆ, ತಮ್ಮ ದೇಶದ ಜನರ ದುಃಖ ಪರಿಹರಿಸಲಿಕ್ಕೆಂದು ಅಧಿಕಾರಿಗಳ ಕೂಡ ಬಡಿದಾಡಿ ಸೆರೆಮನೆ ಕಂಡವರು. ಜನಹಿತಕ್ಕಾಗಿ ತಮ್ಮ ಜೀವಿತವನ್ನೇ ಕಷ್ಟಕ್ಕೆ ಆಣಿಮಾಡಿದ ತ್ಯಾಗಿಗಳೆಂದು ಸೆರೆಯಾಳುಗಳ ವಿಷಯದಲ್ಲಿ ಆಕೆಗೆ ತುಂಬಾ ಸಹಾನುಭೂತಿ ಉಂಟಾಯಿತು. ಅವರನ್ನು ಅಂತಃಕರಣಪೂರ್ವಕ

ವಾಗಿ ಆದರಿಸುತ್ತಿದ್ದಳು. ದೊಡ್ಡ ಕುಲದಲ್ಲಿ ಹುಟ್ಟಿದವರು, ಸಿರಿವಂತರು, ಕಲಿತವರು, ಬೇಕಾದಂಥ ಕೆಲಸ ತೂಗಿಸಿಕೊಂಡು ಹೋಗುವ ಕೂವತ್ತಿನವರಾದ ಈ ಜನರು, ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮ ದೇಶದ ಜನರನ್ನು ದಾಸ್ಯದಿಂದ ಬಿಡಿಸುವದಕ್ಕಾಗಿ ತಮ್ಮ ಆಯುಷ್ಯವನ್ನೇ ಸೂರೆಗೊಂಡಿರುವದನ್ನು ನೆನೆನೆನಿಸಿಕೊಂಡು, ಅವರಿಗೆ ಧನ್ಯವಾದಗಳನ್ನರ್ಪಿಸುವಳು. ಅವರ ಬಾಳು ಬೆಲೆಯುಳ್ಳದೆಂದು ಬಾಗುವಳು.

ಈ ಸೆರೆಯಾಳುಗಳಲ್ಲಿ ಮೇರಿ ಎಂಬುವಳೊಬ್ಬ ಹೆಂಗಸು ಇದ್ದಳು; ದೊಡ್ಡ ದಣ್ಣಾಯಕನ ಮಗಳಾಕೆ; ಚಲ್ವಿಕೆಯಲ್ಲಿಯೂ ಮೇಲು; ಮೂರು ನಾಲ್ಕು ಭಾಷೆ ಓದು-ಬರೆಯಲು ಮಾತಾಡಲು ಕಲಿತವಳು. ಇಂಥವಳು ಕೂಡ ತನ್ನ ಸಿರಿವಂತಿಕೆಯನ್ನೆಲ್ಲ ಮರೆತು ಬಡವರಂತೆ ಇದ್ದು, ಇಲ್ಲದ ಒನಪು-ಒಯ್ಯಾರಗಳ ಸೆಳವಿಗೆ ಬೀಳದೆ, ಗಂಭೀರವಾಗಿದ್ದುದನ್ನು ನೋಡಿ ಕಟೂಷಳಿಗೆ ಆನಂದವಾಯಿತು. ಮೇರಿಯು ತನ್ನ ರೂಪ-ಲಾವಣ್ಯಗಳಿಂದ ಗಂಡಸರ ಮನಸನ್ನು ಎಳೆದುಕೊಳ್ಳದೆ, ತನ್ನ ವಿಲಕ್ಷಣ ಗಾಂಭೀರ್ಯದಿಂದ. ಅವರಲ್ಲಿ ಬರುವ ಕುವಿಚಾರಗಳನ್ನು ತನ್ನ ನಡೆಯಿಂದ ತಡೆದುಬಿಡುತ್ತಿದ್ದಳು, ಒಂದುವೇಳೆ ಯಾವನಾದರೂ ಹುಂಬನು ಮೈಮೇಲೆ ಬಂದರೂ, ಅವನನ್ನು ಹಣ್ಣು ಮಾಡುವಷ್ಟು ಗಟ್ಟಿಗಳಿದ್ದಳು. ಈಕೆಯ ಸ್ವಭಾವ ಕಂಡು ಕಟೂಷಳು ಬಹು ಬೆರಗಾದಳು; ಆಕೆಗೆ ಮೆಚ್ಚಿದಳು.

ಒಂದು ದಿನ ಕಟೂಷಳು ಮೇರಿಯು ಇಬ್ಬರೇ ಇರುವಾಗ ಮೇರಿಯು ತನ್ನ ಜೀವನಕತೆಯನ್ನು ಹೀಗೆ ಹೇಳಿದಳು—ಚಿಕ್ಕವಳಿರುವಾಗ ನನ್ನ ತಾಯಿ ಮಡಿದಳು. ಚಿಕ್ಕಂದಿನಿಂದ ಆದೇಕೋ ಸಿರಿವಂತಿಕೆ ಎಂದರೆ ನನ್ನ ತಲೆ ಕಾಯುತ್ತಿತ್ತು. ಕೂಲಿಕಾರರೊಡನೆ ಕೆಲಸ ಮಾಡುತ್ತಿರುವದೇ ನನಗೆ ಸುಖ. ಇದರಿಂದ ನಾನು ನನ್ನ ತಂದೆಯನ್ನು ಬಿಟ್ಟು, ನನ್ನೊಬ್ಬ ಗೆಳತಿಯ ಜತೆಯಲ್ಲಿ ಒಂದು ಕಾರಖಾನೆಯೊಳಗೆ ಕೂಲಿಗೆ ನಿಂತೆ; ಮುಂದೆ ಸಿರಿವಂತರ ವಿರುದ್ಧ ಎದ್ದ ಬಂಡಾಯದೊಳಗೆ ಹೊಕ್ಕೆನು; ಹೀಗೆ ನಡೆಯುತ್ತಿರುವಾಗ, ಕ್ರಾಂತಿಕಾರಕರಲ್ಲಿ ನಾನೂ ಒಬ್ಬಳಿರುವೆನೆಂಬ ಸಂದೇಹದಿಂದ ಪೋಲೀಸರು ನನ್ನನ್ನು ಸೆರೆಹಿಡಿದು, ಸೆರೆಮನೆಯಲ್ಲಿಟ್ಟರು. ”—

ಮೇರಿಯ ಹೃದಯ ಬಹು ಮಿದುವು. ಪರೋಪಕಾರ ಮಾಡುವ ಸಮಯವೆಂದರೆ, ಆಕೆ ಎಂದೂ ಕೈಮುಚ್ಚಿಕೊಂಡು ಇರುತ್ತಿರಲಿಲ್ಲ; ಅಷ್ಟೇಕೆ! ಅದರ ದಾರಿಯನ್ನೆ ಕಾಯುತ್ತಿದ್ದಳು. ಅದೊಂದು ಆಕೆಯ ಜೀವದ ಹೆಗ್ಗುರಿ. ಅದರಲ್ಲಿಯೇ ಆಕೆಗೆ ನಿಜಾನಂದ. ಮೇರಿಯೊಡನೆ ಗೆಳೆತನವಾದಂತೆ, ಕಟೂಷಳಿಗೆ ಆಕೆಯೆಂದರೆ, ಜೀವದ ಜೀವ. ಆಕೆಯನ್ನು ತನ್ನ ಜೀವನದ ಆದರ್ಶವನ್ನಾಗಿಟ್ಟುಕೊಂಡಳು. ಇಬ್ಬರಿಗೂ ಈಗ ಒಂದೊಂದು ಬಗೆಯಿಂದ ವಿರಕ್ತಿಯ ಸುಖದ ಸವಿಹತ್ತಿತ್ತು. ಕಟೂಷಳು ವಿಷಯದಲ್ಲಿ ಹೊರಳಾಡಿ, ಕಷ್ಟಪಟ್ಟಿದ್ದರಿಂದ, ಆಕೆಗೆ ವಿಷಯವೆಂದರೆ, ತಲೆಚಿಟ್ಟು; ಆದರೆ, ಮೇರಿಗೆ ಹಾಗಲ್ಲ. ಆಕೆ ಅದರ ಗೊಡವೆಗೆ ಎಂದೂ ಹೋದವಳಲ್ಲ. ಆಜನ್ಮ ಬ್ರಹ್ಮಚಾರಿಣಿ ಆಕೆ. ಹೀಗಿದ್ದುದರಿಂದ, ವಿಷಯದ ಹೆಸರೆತ್ತಿದರೆ, ಆಕೆಗೆ ಹೇಸಿಕೆ ಕಂಡಷ್ಟು ಅಸಡ್ಡೆ. ಮನುಷ್ಯತ್ವದ ಘನತೆ ಎಂದರೇನು? ಮನುಷ್ಯನು ಅದನ್ನೆಲ್ಲ ಕಣ್ಮರೆಮಾಡಿ ವಿಷಯಕ್ಕೆ ಸೋತು 'ಅಮೃತ ಬೆಲೆಗೆ ಹಾಕಿ ಪಲ್ಯವ ಕೊಂಬುವದೆಲ್ಲಿಯ ನ್ಯಾಯ' ಎಂದು ಮೇರಿಯು ಅನ್ನುವಳು; ಅನ್ನುವದಲ್ಲದೆ ಮನಸಾ ಹಾಗೇ ನಡೆಯುವಳು; ಅದೇ ಆಕೆಯಲ್ಲಿರುವ ಮಾಟ.

ಮೇರಿಯ ನಿರ್ದುಷ್ಟ ನಡೆಯು ಕಟೂಷಳ ಮನಸಿನ ಮೇಲೆ ಮಾಟ ಮಂತ್ರದಂತೆ ವಿಲಕ್ಷಣವಾಗಿ ಪರಿಣಮಿಸಿತು; ಆಕೆಯನ್ನು ಜೀವಕ್ಕಿಂತ ಹೆಚ್ಚು ಪ್ರೀತಿಸತೊಡಗಿದಳು. ಇವರಲ್ಲಿ ಸಿಮನ್ಸನ್ನ ಎಂಬುವನೊಬ್ಬ ರಾಜಕೀಯ ಸೆರೆಯಾಳು ಇದ್ದ. ಅವನ ಸ್ವಭಾವ-ವಿಚಾರಗಳು ಕಟೂಷಳನ್ನು ಹುಚ್ಚು ಮಾಡಿದವು. ಅವನೂ ಕಟೂಷಳನ್ನು ಪ್ರೀತಿಸುತ್ತಿದ್ದ. ಜನಸಾಮಾನ್ಯರು ಅರ್ಧ ಪಾಲು ತಮ್ಮ ಮನಸಿನಂತೆಯೂ, ಇನ್ನರ್ಧ ಪಾಲು ತಮ್ಮ ಸುತ್ತಲಿನ ಜನರಂತೆಯೂ ನಡೆಯುವರು. ಅದರಲ್ಲಿಯೂ ಕೆಲವರು ಪೂರಾ ಪರರಂತೆ ನಡೆಯುವರು; ಕೆಲವರು ಸ್ವಂತ ಬುದ್ಧಿಯನ್ನೇ ಮುಖ್ಯವಾಗಿಟ್ಟುಕೊಂಡು ನಡೆಯುವರು. ಕೆಲವರಿಗೆ ವಿಚಾರವೆಂಬುದು ಮೆದುಳಿನ ಆಟ; ಇನ್ನೊಬ್ಬರು ಅನ್ನುವದನ್ನು ಒಂದಲ್ಲ ಎರಡು ಸಾರೆ ಕೇಳಿಕೊಂಡು, ತಮ್ಮ ಬುದ್ಧಿಯಿಂದ ತಾವೂ ತೂಗಿ ಆ ಮೇಲೆ ಏನೆಂಬುದನ್ನು ನಿಶ್ಚಯಿಸುವರು. ಸಿಮನ್ಸನ್ನನು

ಈ ಜಾತಿಯವ. ತನ್ನ ಬುದ್ಧಿ ತಿಳಿದಮಟ್ಟಿಗೆ ಯಾವುದೊಂದು ಮಾತನ್ನು ತೂಗಿ ಅಳೆದು ನೋಡಿ ನಿಷ್ಕರ್ಷೆಗೆ ಬರುವನು. ಚಿಕ್ಕವನಿದ್ದಾಗಲೇ ಇವನದು ಇಷ್ಟು ಸ್ವತಂತ್ರ ಮತ್ತು ನಿರ್ಣಾಯಕ ಬುದ್ಧಿ. ಈತನ ತಂದೆ ಸರಕಾರದಲ್ಲಿ ಕೆಲಸಕ್ಕಿದ್ದ. ಸಂಬಳವೂ ಕೈತುಂಬ ಬರುತ್ತಿತ್ತು; ಮೇಲಾಗಿ ಸಂಬಳವಲ್ಲದೆ ಮೇಲು ವೆಚ್ಚಕ್ಕೆಂದು ಲಂಚ-ಸಂಚವೂ ದೊರೆಯುತ್ತಿತ್ತು; ಆತೇನೋ ಹೇಗೋ ಜೀವನ ಸಾಗಿಸಿಕೊಂಡಿದ್ದ. ತನ್ನ ತಂದೆಯು ಲಂಚ-ಸಂಚಗಳಿಂದ ಒಂದು ಕಾಸನ್ನೂ ಗಳಿಸಬಾರದೆಂದು ಇವನ ಮತ; ವಯಸ್ಸಿಗೆ ಬಂದಾಗ, ಒಮ್ಮೆ ತಂದೆ-ಮಗನಿಗೆ ಆಸ್ತಿಯ ವಿಷಯವಾಗಿ ಮಾತು-ಕತೆಗಳು ನಡೆದವು. ಸಿಮನ್ನಸನ್ನನು 'ನನಗೆ ನಿಮ್ಮ ಅನ್ಯಾಯಾರ್ಜಿತ ಹಣ-ಕಾಸು ಬೇಡ; ಅದನ್ನು ಜನರಿಗೆ ಹಂಚಿಬಿಡಿರಿ' ಎಂದು ನಿರ್ದಾಕ್ಷಿಣ್ಯವಾಗಿ ನುಡಿದನು. ತಲೆಯ ಮೇಲಿನ ಮಾಸ ಹಾರದ ಚೋಟಿ ಹುಡುಗನ ಮೇಲುಪ್ಪರಿಗೆಯ ಮೇಲಿನ ಮಾತುಗಳನ್ನು ಸಂಸಾರದಲ್ಲಿ ಈಸಿ ಈಸಿ ಅನುಭವಗಂಡ ತಂದೆಯು ಲೆಕ್ಕಿಸುವನೇ? "ನೀ ನಿನ್ನ ವಿಚಾರಸಾಮ್ರಾಜ್ಯದಲ್ಲಿ ಓಲಾಡುತ್ತಿರುವಿ; ಜಗತ್ತಿನ ಪೆಟ್ಟುಗಳು ತಲೆಗೆ ಬಡಿಯಹತ್ತಿದರೆ, ನಿನ್ನ ನಿನಗೇ ಬುದ್ಧಿ ಬೆಳಗುವದು. ನಾನೇಕೆ ಈಗ ಅದನ್ನೆಲ್ಲ ನಿನಗೆ ಹೇಳಲಿ!" ಎಂದು ಬೈದು ಸುಮ್ಮನಾದನು. ಅಂದಿನಿಂದ ಸಿಮನ್ನಸನ್ನನು ತಂದೆಯ ಮನೆಯಿಂದ ಹೊರ ಹೊರಟನು. ಮನುಷ್ಯನ ಅಜ್ಞಾನದಿಂದಲೇ ಇಂಥವೆಲ್ಲ ಘೋರಕೃತ್ಯಗಳು ಪ್ರಪಂಚದೊಳಗೆ ಸಾರೋದ್ಧಾರವಾಗಿ ನಡೆದಿರುವವು; ಅವನ್ನೆಲ್ಲ ಕೈಲಾದ ಮಟ್ಟಿಗೆ ಕಡಿಮೆ ಮಾಡದಿದ್ದರೆ, ನಮ್ಮ ಶಿಕ್ಷಣದಿಂದೇನು? ದೊಡ್ಡ ದೊಡ್ಡ ಮಾತಿನಿಂದೇನು? ಹೀಗೆಂದು ಸಿಮನ್ನಸನ್ನನು ವಿಶ್ವವಿದ್ಯಾಲಯದ ತನ್ನ ಶಿಕ್ಷಣವನ್ನು ನಿಲ್ಲಿಸಿ, ಜನಹಿತಸಾಧಕವಾದ ರಾಜಕೀಯ ಪಂಗಡಕ್ಕೆ ಸೇರಿ, ಅವರು ನಡಿಸಿದ್ದ ಗ್ರಾಮೋದ್ಧಾರ. ಕಾರ್ಯದಲ್ಲಿ ತನಗೆ ರುಚಿಸುವ ಹಳ್ಳಿಯ ಶಾಲೆಯ ಶಿಕ್ಷಕನಾಗಿ ಕೆಲಸ ನಡಿಸಿದನು. ಅಲ್ಲಿದ್ದು ತನ್ನ ಕೈಯಲ್ಲಿ ಓದುವ ವಿದ್ಯಾರ್ಥಿಗಳಿಗೂ ಹಳ್ಳಿಯ ಜನರಿಗೂ ಜಗದೊಳಗೆ ನಡೆಯುವ ನ್ಯಾಯ್ಯಾನ್ಯಾಯ್ಯಗಳನ್ನು ಒಡೆದು ಹೇಳಿ, ಧೈರ್ಯವಾಗಿ ಅಧಿಕಾರಿಗಳ ನಡೆಯನ್ನವನು ಖಂಡಿಸು

ವಸು. ಅವನ ನಡೆಯು ಅಧಿಕಾರಿಗಳಿಗೆ ಸರಿ ಎನಿಸದೆ, ಅವರು ಅವನ ಮೇಲೆ ಆರೋಪವಿಟ್ಟು ವ್ಯಾಜ್ಯ ನಡಿಸಿದರು.

ಆ ವ್ಯಾಜ್ಯದೊಳಗೆ ತನ್ನ ವ್ಯಾಜ್ಯ ವಿಚಾರಿಸುವ ನ್ಯಾಯಾಧೀಶನನ್ನು ಸಿಮುನ್ನಸನ್ನನು ಲಕ್ಷಿಸದೆ, ತನ್ನ ವಿಷಯವು ನ್ಯಾಯಾಧೀಶರಿಗೆ ತಿಳಿಯಲಿಕ್ಕೆ ಸಾಧ್ಯವಿಲ್ಲೆಂದು ಸುಮ್ಮನಿದ್ದನು; ಆದರೆ ಯಾವುದನ್ನೂ ಹೇಳದಕ್ಕಾಗಿಯೇ ಅವನಿಗೆ ಶಿಕ್ಷೆ ಆಯಿತು. ಶಿಕ್ಷೆಯಾದರೂ, ಅವನು ತನ್ನ ಮತದಿಂದ ಎಳ್ಳಷ್ಟಾದರೂ ಅಲುಗಲಿಲ್ಲ. ತನ್ನ ವಿಚಾರಕ್ಕೆ ಅನುಕೂಲವಾಗುವಂತೆ, ಧಾರ್ಮಿಕ ತತ್ವ ಒಂದನ್ನು ಕಟ್ಟಿದನು. ಅವನ ಸಿದ್ಧಾಂತದ ತಾತ್ಪರ್ಯವು ಹೀಗಿತ್ತು. ನಮ್ಮ ಕಣ್ಣಿಗೆ ಕಾಣಿಸುವ ಸೃಷ್ಟಿಯೊಳಗಿನ ಯಾವ ವಸ್ತುವಿಗೂ ಸಾವಿಲ್ಲ, ಯಾವುದೂ ಕೆಡುವದಿಲ್ಲ; ಮತ್ತು ನಾವು ನಿರ್ಜೀವವೆಂದು ತಿಳಿಯುವ ವಸ್ತುಗಳು ಕೂಡ ಯಾವುದೋ ಒಂದು ಚೈತನ್ಯಮಯ ವಸ್ತುವಿನ ಅಂಶ ಗಳಿರುವವು. ಮನುಷ್ಯನು ಸಹ ಈ ಮಹತ್ತಾದ ಚೈತನ್ಯಮಯ ವಸ್ತುವಿನ ಒಂದು ಅಂಶನಿರುವ ಮೂಲಕ ಆ ಚೈತನ್ಯವನ್ನು ಯಾವತ್ತೂ ಜಾಗೃತವಾಡು ವದು ಅವನ ಕರ್ತವ್ಯ; ಆದುದರಿಂದಲೇ, ಯಾವುದೊಂದು ಕಾರ್ಯ ಕೆಡಿಸುವದಾಗಲಿ, ಯಾವುದೊಂದನ್ನು ಹಿಂಸಿಸುವದಾಗಲಿ, ದೊಡ್ಡ ಅಪರಾಧ ವೆಂದು, ಸಂಪೂರ್ಣ ಅಹಿಂಸಾಪರನಾಗಿದ್ದನು. ಯುದ್ಧ ಮುಂತಾದವುಗಳ ಮಾತಂತೂ ಒತ್ತಟ್ಟಿಗಿರಲಿ, ಮೂಕಪ್ರಾಣಿಗಳನ್ನು ಹಿಂಸಿಸುವದು ಕೂಡ ಅವನ ದೃಷ್ಟಿಯಿಂದ ಹೆಚ್ಚಿನ ಅಪರಾಧ. ಮದುವೆಯ ವಿಷಯದಲ್ಲಿಯೂ ಅವನದೊಂದು ಸಿದ್ಧಾಂತವೇ ಬೇರೆ. ಮನುಷ್ಯನು ಸಂತಾನಕ್ಕಾಗಿ ಮದುವೆ ಯಾಗುವದೆಂದರೆ ತನ್ನ ಯೋಗ್ಯತೆಯನ್ನು ತಾನೇ ಕೀಳುಗೊಳಿಸಿದಂತೆ ಇದೆ; ಇದ್ದವರನ್ನು ರಕ್ಷಿಸುವದೇ ಮನುಷ್ಯನ ಮುಖ್ಯ ಕಾರ್ಯವೆಂದು ಅವನ ಮತ.

ಕಟೋಷಳನ್ನು ಅವನು ಪ್ರೀತಿಸುತ್ತಿದ್ದರೂ, ಅದು ವೈಷಯಿಕ ದೃಷ್ಟಿ ಯಿಂದಲ್ಲ; ತನ್ನ ಧ್ಯೇಯಕ್ಕೆ ವಿರುದ್ಧವಾಗದಂತೆ, ಮತ್ತು ತನ್ನ ಕಾರ್ಯಕ್ಕೆ ಆಕೆಯಿಂದ ಸ್ಫೂರ್ತಿಯುಂಟಾಗಲೆಂದು. ತನ್ನ ದೃಷ್ಟಿಯಿಂದ ಅವನು ಹಲವು ನೈತಿಕ ವಿಷಯಗಳನ್ನು ಹೀಗೀಗೇ ಎಂದು ನಿರ್ಣಯಿಸಿ ಇಟ್ಟುಕೊಂಡಿದ್ದ.

ವ್ಯಾವಹಾರಿಕ ವಿಷಯಗಳನ್ನು ಅವನು ಅಲಕ್ಷಿಸಿರಲಿಲ್ಲ. ಎಲ್ಲವನ್ನು ಅಚ್ಚು ಕಟ್ಟಾಗಿ ತಿಳಿದುಕೊಂಡಿದ್ದ. ತಾನು ಯಾವಾಗ ಏಳಬೇಕು ಯಾವಾಗ ಮಲಗ ತಕ್ಕದ್ದು, ಎಷ್ಟುತಾಸು ಕೆಲಸ ಮಾಡತಕ್ಕದ್ದು, ಯಾವ ಬಗೆಯ ಆಹಾರ ಸೇವಿಸತಕ್ಕದ್ದು, ತನ್ನ ಉಡುಪು ತೊಡಪು ಹೇಗಿರತಕ್ಕದ್ದು, ಮನೆಯಲ್ಲಿ ವ್ಯವಸ್ಥೆ ಹೇಗಿರಬೇಕು. ಇವೆಲ್ಲ ವಿಚಾರಗಳನ್ನು ತನಗೆ ತಿಳಿದಮಟ್ಟಿಗೆ ವಿಚಾರಿಸಿಕೊಂಡು ಆ ದಾರಿಯಿಂದ ನಡೆಯುತ್ತಿದ್ದ. ಇಷ್ಟೆಲ್ಲ ಓರಣವಂತನಿದ್ದರೂ, ಸಿಮನ್ನಸನ್ನನ ಸ್ವಭಾವ ಸ್ವಲ್ಪ ನಾಚಿಕೆಯದು, ಸೌಮ್ಯ; ಆದರೂ ಒಮ್ಮೆ ಮನಸು ಕಲ್ಲು ಮಾಡಿದರೆ, ಯಾವುದಕ್ಕೂ ಹಿಂಜರಿಯನು.

ಕಟೂಷಳು ಚದುರೆಯಷ್ಟೇ! ಸಿಮನ್ನಸನ್ನನು ತನ್ನನ್ನು ಪ್ರೀತಿಸುವದನ್ನು ಆಕೆ ಮನಸಾ ಕಂಡುಹಿಡಿದಿದ್ದಳು; ಮತ್ತು ಅವನಂಥ ಮನುಷ್ಯನು ತನ್ನನ್ನು ಪ್ರೀತಿಸುವದೆಂದರೆ, ಅದೊಂದು ತನಗೆ ಭೂಷಣವೆಂದೂ ತಾನು ದೊಡ್ಡ ಯೋಗ್ಯತೆಯವಳೆಂದೂ ತಾನೆಂದರೆ, ನೀತಿಯ ಪುತ್ತಳಿ ಎಂದೂ ಸಿಮನ್ನಸನ್ನನು ತಿಳಿದುಕೊಂಡಿರುವನೆಂದು ಭಾವಿಸಿದ್ದಳು; ಮತ್ತು ಅವನೀ ಭಾವನೆಯು ಸುಳ್ಳಾಗಬಾರದೆಂದು, ತನ್ನಲ್ಲಿಲ್ಲದ ಸದ್ಗುಣಗಳನ್ನು ಕೂಡ ಪ್ರಯತ್ನಪೂರ್ವಕವಾಗಿ ಮೈಗೂಡಿಸಿಕೊಂಡು ಕೈಲಾದಮಟ್ಟಿಗೆ ಅವನ ಪ್ರೀತಿಗೆ ಪಾತ್ರಳಾಗಬೇಕೆಂದು ಆಕೆಯ ಎಣಿಕೆ.

ಸಿಮನ್‌ಸನ್ನ ಮತ್ತು ಕಟೂಷಳ ಭೆಟ್ಟಿ ಎಲ್ಲಕ್ಕೂ ಮೊದಲು ಆದದ್ದು ಸೆರೆಮನೆಯಲ್ಲಿ. ಅವನ ಉನ್ನತವಾದ ಹುಬ್ಬುಗಳ ಕೆಳಗುಡಿನಲ್ಲಿದ್ದ ಆ ನೀಲಿಯ ವರ್ಣದ ಗುಡ್ಡೆಗಳು, ಅವುಗಳಲ್ಲಿ ಹೊಳೆಯುವ ಆ ತಿಳಿತಿಳಿಯಾದ ದಯೆಯ ಮಿಂಚು, ಇವೀಗ ಆದೇಕೋ ಅವನನ್ನು ನೋಡಿದ ಒಂದೇ ಏಟಿಗೆ ಆಕೆಯನ್ನು ಹುಚ್ಚುಗೊಳಿಸಿದ್ದವು. ಅವನು ಆಗ ಆಕೆಯನ್ನು ನೋಡಿದ ನೋಟದಲ್ಲಿಯೂ ಒಂದು ಬಗೆಯ ಮೋಹನವಿದ್ದಿತು; ಎರಡನೇ ಸಲ ಆಕೆಯು ಅವನನ್ನು ಕಂಡದ್ದು ರಾಜಕೀಯ ಸೆರೆಯಾಳುಗಳ ಗುಂಪಿನೊಳಗೆ. ಆಗ ಕೂಡ, ಅವರಲ್ಲಿ ಮಾತುಗಳು ನಡೆಯದಿದ್ದರೂ, ಪರಸ್ಪರರ ಬಗ್ಗೆ ಅವರ ಆಳವಾದ ಎದೆಯಲ್ಲಿ ಪ್ರೇಮಪ್ರವಾಹವು ಹರಿಯುತ್ತಿದ್ದುದು ಮುಖಲಕ್ಷಣದಿಂದಲೇ ಸ್ಫುಟ.

ವಾಗುತ್ತಿತ್ತು. ಆದರೆ, ಅವರಿಬ್ಬರೂ ರಾಜಕೀಯ ಸೆರೆಯಾಳುಗಳಾಗಿ ಕಾಲು ನಡಿಗೆಯಿಂದ ತಮ್ಮ ಪಯಣ ನಡಿಸಿದಾಗ, ಅವರ ಒಡನಾಟವು ಹೆಚ್ಚು ಬೆಳೆಯಿತು; ಮಾತನಾಡುವ ಪ್ರಸಂಗ ಬಂದು ಪರಸ್ಪರರು ಬಲುಮಟ್ಟಿಗೆ ಹತ್ತಿಗರಾದರು.

ಈ ಪಯಣದೊಳಗೆ ಡಿಮಿಟ್ರಿಗೆ ಕಟೂಷಳ ಭೆಟ್ಟಿ ಆಗಾಗ್ಗೆ ಆಗುವದು ಸಾಧ್ಯವಿರಲಿಲ್ಲ; ಅಂತೆಯೇ ಒಂದೆರಡು ಸಲ ಮಾತ್ರ ಆಯಿತು; ಮತ್ತು ಆವೆರಡು ಭೆಟ್ಟಿಗಳಲ್ಲಿ ಆಕೆಯಲ್ಲಿ ಅವನ ಬಗ್ಗೆ ಮೊದಲಿನ ಪ್ರೇಮ-ದಯೆ ಗಳು ಕಂಡುಬರಲಿಲ್ಲ. 'ಸುಖದಿಂದಿರುವಿಯಷ್ಟೇ? ಏನಾದರೂ ಬೇಕೋ ಹೇಗೆ?' ಎಂದು ಡಿಮಿಟ್ರಿಯು ಕೇಳಿದ ಪ್ರಶ್ನಗಳಿಗೆ ಆಕೆಯ ಉತ್ತರ ವೆಂದರೆ, ಔದಾಸೀನ್ಯ. ಬೇಕಿಲ್ಲ ಬೇಡಿಲ್ಲ. ಪ್ರವಾಸದ ಕಷ್ಟ, ಅಲ್ಲಿ ಜನರಿಂದಾ ಗುವ ಹಲವು ಬಗೆಯ ಅವಮಾನ ಇವೆಲ್ಲವುಗಳಿಂದ ಆಕೆಯ ಜೀವವು ಇಷ್ಟು ಬೇಸತ್ತಿರಬಹುದೆಂದು ಡಿಮಿಟ್ರಿಯ ಯೋಚನೆ; ಆದರೆ ಉಪಾಯವಿರಲಿಲ್ಲ. ಇತ್ತೀಚೆ ರಾಜಕೀಯ ಸೆರೆಯಾಳುಗಳ ಗುಂಪಿನಲ್ಲಿ ಆಕೆಯನ್ನು ಸೇರಿಸಿ ದಾಗಿನಿಂದ ಒಂದೆರಡು ಸಲ ಭೆಟ್ಟಿಯಾಗಿತ್ತು; ಇಲ್ಲದಿದ್ದರೆ, ಅದೂ ಇರಲಿಲ್ಲ; ಮತ್ತು ಈ ಗುಂಪಿನೊಳಗೆ ಬಂದಾಗಿನಿಂದ ಆಕೆಯ ಮನಃಸ್ಥಿತಿಯಲ್ಲಿಯೂ ಬದಲಾವಣೆಯಾಗುತ್ತಿರುವದು ಅವನ ಗಮನಕ್ಕೆ ಬಂದಾಗ ಅವನು ಮನ ಸಿನೊಳಗೇ ಆನಂದಪಡುವನು.

ಇತ್ತೀಚೆ, ಆಕೆಯ ವಿಷಯದಲ್ಲಿ ಡಿಮಿಟ್ರಿಗೆ ಅನನುಭೂತವಾದ ಒಂದು ಬಗೆಯ ಸಂತೋಷ. ನಿಜವಾಗಿ, ಈಗಿನ ಸಂತೋಷಕ್ಕೂ ಹಿಂದಿನ ಕಾವ್ಯಮಯ ಪ್ರೇಮಕ್ಕೂ, ಅದರ ಮುಂದಿನ ವೈಷಯಿಕ ಸುಖಕ್ಕೂ ಎಳ್ಳಷ್ಟೂ ಸಂಬಂಧವಿರಲಿಲ್ಲ. ಇಂದು ಅವನು ಆಕೆಯೊಡನೆ ನಡಕೊಳ್ಳುವ ರೀತಿಯಲ್ಲಿ ಕರುಣಾರಸವು ತುಂಬಿದ್ದಿತು; ಮತ್ತು ಈ ರಸವನ್ನೇ ಅವನು ತನ್ನ ಮತ್ತು ಕಟೂಷಳ ಸಂಬಂಧವಾಗಿ ಮುಖ್ಯ ಸೂತ್ರಧಾರವನ್ನಾಗಿಸಿದ್ದರಿಂದ, ಆಕೆಯ ವಿಷಯದಲ್ಲಿದ್ದ ವೈಷಯಿಕ ಪ್ರೇಮವು ಪೂರಾ ಅಳಿದುಹೋಗಿತ್ತು. ಅವನೀಗ ಕಾರುಣ್ಯದ ಮೂರ್ತಿ; ಮತ್ತು ಆ ಕಾರುಣ್ಯವು ಕಟೂಷಳ ವಿಷಯದ

ಲ್ಲಷ್ಟೇ ಅಲ್ಲ ಸರ್ವರ ವಿಷಯದಲ್ಲಿ. ಇಷ್ಟರ ಮಟ್ಟಿಗೆ ಆ ರಸವನ್ನವನು ಮೈಗೂಡಿಸಿಕೊಂಡಿದ್ದ; ಅದೊಂದು ತನ್ನ ಆನಂದದ ಸಾಧನವನ್ನಾಗಿ ಮಾಡಿಕೊಂಡು ತನ್ನೊಳು ತಾನು ಸುಖ ಸವಿಯುವನು. ಈ ಬಗೆಯ ಅಂತಃಸುಖದ ಸಾಧನೆವನ್ನು ಅವನು ನಡಿಸಿದಾಗಿನಿಂದ ಇದುವರೆಗೂ ಅರಿಯದ ಪ್ರೇಮದ ಕೋಡಿಯು ಅವನ ಮನಸಿನೊಳಗೆ ಧುಮಿಕ್ಕುತಿರುವಂತೆ ಅವನಿಗೆ ಆನಂದೋನ್ಮಾದ ಎನಿಸುವದು; ಅದರೊಳಗೆ ಅವನು ಓಲಾಡುವನು. ಹಿಂದೆ ಕಟೂಷ ಳನ್ನು ಹುಚ್ಚನಂತೆ ವಿಷಯ ಸುಖದಾಸೆಗೆ ಪ್ರೀತಿಸುತ್ತಿದ್ದ. ಈಗ ಡಿಮಿಟ್ರಿಯ ಒಳಗಣ್ಣು ತೆರೆದದ್ದರಿಂದ, ಅವನಲ್ಲಿ ದಯೆಯ ಬುಗ್ಗೆಯೊಡೆದು ಸರ್ವ ಪ್ರಾಣಿಗಳ ವಿಷಯದಲ್ಲಿ ದಯಾಮಯನಾದನು. ಈಗ ಅವನಿಗೆ ಕಟೂಷಳು ಅಷ್ಟೇ! ಒಬ್ಬ ಬಡಕುರುಪಿಯಾದ ಹೆಂಗಸೂ ಅಷ್ಟೇ! ಅವನ ದೃಷ್ಟಿಯ ಈಗ ಮೇಲ್ಕಾಣಿಸುವ ದೇಹದ ಮೇಲಿರಲಿಲ್ಲ; ಅಖಂಡವಾಗಿ ಅನಸ್ಯೂತವಾಗಿ ಎಲ್ಲ ಪ್ರಾಣಿಮಾತ್ರರಲ್ಲಿ ಬೀಡುಬಿಟ್ಟುಕೊಂಡು, ಎಲ್ಲರನ್ನು ಸಮನಾಗಿ ಆಳುತ್ತಿರುವ ಭಗವಂತನಲ್ಲಿ.

ಕಟೂಷಳ ದೆಸೆಯಿಂದ ಡಿಮಿಟ್ರಿಗೆ ಹಲವು ರಾಜಕೀಯ ಸೆರೆಯಾಳುಗಳ ಪರಿಚಯವಾಯಿತು. ರಸಿಯದೊಳಗೆ ರಾಜ್ಯಕ್ರಾಂತಿಕಾರಕರ ಗಲಭೆಯು ವಿಶೇಷ ಪ್ರಬಲವಾದುದು ಎರಡನೆಯ ಅಲೆಕ್ಸಾಂಡರನ ಕೊಲೆಯಿಂದ. ಕ್ರಾಂತಿಕಾರಕರು ಸರಕಾರದ ವಿರುದ್ಧವಾಗಿ ಬಂಡಾಯ ಎಬ್ಬಿಸಿ, ಕ್ರೂರತನದಿಂದಲೂ, ಗುಪ್ತ ಉಪಾಯಗಳಿಂದಲೂ ಅವನಾಳಿಕೆಯನ್ನೇ ಅಡಗಿಸಲು ನಡಿಸುವ ಘೋರ ಕೃತ್ಯಗಳು ಡಿಮಿಟ್ರಿಗೆ ಒಪ್ಪಿತವಿರಲಿಲ್ಲ. ಮೇಲಾದ, ಕ್ರಾಂತಿಕಾರಕರಲ್ಲಿ ಎದ್ದು ಕಾಣಿಸುವ ಅಹಂಕಾರದ ವೃತ್ತಿಯು ಅವನಿಗೆ ರವಿಯಷ್ಟೂ ಸೇರಿಕೆ ಇರಲಿಲ್ಲ; ಈ ಕಾರಣಗಳಿಂದ ಅವನು ಅವರನ್ನು ಬಲು ಬೀಳುಗಳೆಯುವನು; ಆದರೆ, ಇತ್ತೀಚೆ ರಾಜಕೀಯ ಸೆರೆಯಾಳುಗಳ ಪರಿಚಯವಾಗಿ, ಅವರ ಒಳಗುಟ್ಟುಗಳೆಲ್ಲ ತಿಳಿದ ಮೇಲೆ, ಅವರು ನಿರಪರಾಧಿಗಳೆಂದೇ ಅವನ ಭಾವನೆಯಾಯಿತು. ಮೀನಗಾರನು ತನ್ನ ಬಲೆಯಲ್ಲಿ ಸಿಕ್ಕ ಮೀನುಗಳನ್ನು ಕಾಡಿ-ಕುಕ್ಕಿ-ಮುಕ್ಕುವಂತೆ, ಸರಕಾರದವರು ರಾಜಕೀಯ ಸೆರೆ

ಯಾಳುಗಳನ್ನು ನಿರ್ಮೂಲಗೊಳಿಸಲು ಅವಲಂಬಿಸಿದ ಭಯಂಕರ ಉಪಾಯ ಗಳನ್ನು ಕೇಳಿ ಡಿಮಿಟ್ರಿಯ ಮನಸು ಗಾಬರಿಗೊಂಡಿತು. ಸಾಮಾನ್ಯ ತಪ್ಪು ಮಾಡಿದವರನ್ನೂ, ಅವರು ಪಡಿಸುವ ಕಷ್ಟ ಹಿಂಸೆಗಳನ್ನೂ ಕೇಳಿ ಮೈ ಜುಮ್ಮೆನ್ನಬೇಕು. ಸಾವಿರಾರು ನಿರ್ದೋಷಿಗಳನ್ನವರು ಬರಿಯ ಸಂಶಯ ದಿಂದಲೇ ಸೆರೆಮನೆಗೀಡುಮಾಡಿದ್ದರು; ಮತ್ತು ಸೆರೆಮನೆಯಂಥ ಹೊಲಸು ಸ್ಥಳದಲ್ಲಿ ಕಾಲುಕಳೆಯುವದರಿಂದ ಅನೇಕರು ಕ್ಷಯರೋಗ ಪೀಡಿತರಾ ಗಿಯೋ, ಬುದ್ಧಿ ಕೆಟ್ಟೋ ಆತ್ಮಹತ್ಯಮಾಡಿಕೊಳ್ಳಲು ಈನುವಾಗುವರು. ಸೆರೆ ಮನೆಯೊಳಗೆ ಎಷ್ಟು ದಿನವೆಂತು ಕಳೆಯುತ್ತ ಬೀಳುವದು !

ರಾಜಕೀಯ ಸೆರೆಯಾಳುಗಳ ಸಂಬಂಧ ಬೆಳೆದಂತೆ, ಅನೇಕರು ಬಗೆಯು ವಂತೆ, ಅವರು ಮೀರಿದ ವೀರಾಳುಗಳಲ್ಲ; ಅಥವಾ ಮೀರಿದ ದುಷ್ಟರೂ ಅಲ್ಲ; ಆದರೆ ಎಲ್ಲರಂತೆ ಸಾಮಾನ್ಯ ತರಗತಿಯ ಜನರು. ಅವರಲ್ಲಿ ಕೆಲವರು ಒಳ್ಳೆಯವರು, ಮತ್ತೆ ಕೆಲವರು, ನಡುವಿನ ತರಗತಿಯವರು, ಇನ್ನು ಕೆಲ ವರು ಅವರಿಗಿಂತ ಕೀಳ ತರಗತಿಯವರು. ಹೀಗೆ ಎಲ್ಲಾ್ಯದರೂ ಇದ್ದದ್ದೇ ಎಂದು ತಿಳಿದುಕೊಂಡು ಡಿಮಿಟ್ರಿಯು ಸುಮ್ಮನಿದ್ದನು; ಆದರೆ ಈ ಜನರೊಳಗೆ ಕೆಲವರು ಉದ್ದೇಶಪೂರ್ವಕವಾಗಿಯೇ ರಾಜ್ಯಪದ್ಧತಿಯಲ್ಲಿರುವ ದುಷ್ಟ ನಡೆ ವಳಿಕೆಗಳನ್ನು ನಿವಾರಿಸಬೇಕೆಂಬ ಸದ್ಬುದ್ಧಿಯಿಂದಲೂ ಪ್ರಾಮಾಣಿಕ ವಿಚಾರ ದಿಂದಲೂ ಅದು ತಮ್ಮ ಧರ್ಮವೆಂದೂ, ಆ ಕಾರ್ಯ ಕೈಕೊಂಡವರಿದ್ದರು; ಕೆಲವರು ತಮ್ಮ ಸ್ವಾರ್ಥಹೇತುವನ್ನು ದೃಷ್ಟಿಯಲ್ಲಿಟ್ಟುಕೊಂಡು ಮಹತ್ವಾ ಕಾಂಕ್ಷೆಯಿಂದ ಅದರೊಳಗೆ ಸೇರಿದ್ದರು; ಕೆಲವರಿಗೆ ಜನಸಾಮಾನ್ಯರ ಹಿತ ಕ್ಕಾಗಿ ತಮ್ಮ ಜೀವನವನ್ನು ಮೀಸಲಾಗಿರಿಸುವದೇ ನೀತಿಯ ಅತ್ಯುಚ್ಚ ಧ್ಯೇಯ ವಾಗಿದ್ದಿತು; ಹೀಗೆ ಎಲ್ಲ ಬಗೆಯ ಜನರನ್ನು ಈ ರಾಜಕೀಯ ಸೆರೆಯಾಳು ಗಳ ಗುಂಪಿನಲ್ಲಿ ಕಾಣಬಹುದಾಗಿತ್ತು. ಡಿಮಿಟ್ರಿಗೆ ಎಲ್ಲರ ಗುರುತು ಆಗುವ ಸಮಯ ಬಂದರೂ, ಎಲ್ಲರೊಡನೆ ಅವರವರ ತೆರದಿ ನಡೆಯುವನು; ಒಳಗೆ ಮಾತ್ರ ಅವರ ಪರೀಕ್ಷೆಯನ್ನು ಚನ್ನಾಗಿ ಮಾಡಿಟ್ಟುಕೊಂಡಿದ್ದನು.

---

# ೧೫ ಕಟೊಷಳ ಹಂಗು ಹರಿಯಿತು.



ಸೆರೆಯಾಳುಗಳೆಲ್ಲರು ಅಧಿಕಾರಿಗಳ ಸಂಗಡ ಗಡಿಪಾರಿನ ಮುಖ್ಯ ಠಾಣ್ಯಕ್ಕೆ ತಲ್ಪಿದರು. ರಾಜಕೀಯ ಸೆರೆಯಾಳುಗಳನ್ನು ಎರಡು ಪಂಗಡ ಮಾಡಿ, ಬೇರೆ ಬೇರೆ ಕೋಣೆಗಳಲ್ಲಿರಿಸಿದ್ದರು. ಡಿಮಿಟ್ರಿಯು ಇತ್ತೀಚೆ ಹತ್ತೆಂಟು ದಿನಗಳಲ್ಲಿ ಕಟೊಷಳನ್ನು ಕಂಡು ಯೋಗಕ್ಷೇಮ ಕೇಳಿರಲಿಲ್ಲ; ಆದುದರಿಂದ ಆಕೆಯನ್ನು ಕಾಣುವ ಅಪ್ಪಣೆಪಡೆದು ಸೆರೆಮನೆ ಹೊಕ್ಕನು.

ಅಲ್ಲಲ್ಲಿ ಹುಡುಕುತ್ತ ತಡಕುತ್ತ ಓಡ್ಯಾಡುವದರಲ್ಲಿ ಇಷ್ಟನೇ ನಂಬರಿನ ಬ್ಲಾಕಿನಲ್ಲಿ ಆಕೆಯನ್ನಿಟ್ಟಿರುವರೆಂದು ತಿಳಿಯಿತು. ಅದೇ ಬ್ಲಾಕಿಗೆ ಬಂದ. ದಾರಿಯಲ್ಲಿಯೇ ಅವರ ಕೋಣೆ. ಸಿಮನ್ಸನನು ಡಿಮಿಟ್ರಿಯನ್ನು ನಿಟ್ಟಿಸಿ ನೋಡಿ, ಕುಳಿತಿರುವ ಹಾಗೆಯೇ 'ಬನ್ನಿ ಬನ್ನಿ. ಚನ್ನಾಯಿತು ಸಂತೋಷ' ಹೀಗೆಂದು ಮನಸಿನಲ್ಲೇನೋ ವಿಚಾರಗಳನ್ನು ತಂದುಕೊಂಡು, ಡಿಮಿಟ್ರಿಯನ್ನು ನೋಡುತ್ತ 'ನಿಮಗೆ ಕೆಲವು ಮಾತುಗಳನ್ನು ಕುರಿತು ಪ್ರಸ್ತಾಪಿಸಬೇಕಾಗಿದೆ' ಎಂದ. 'ಅದೇನದು, ಕೇಳಬಹುದು' ಎಂದು ಡಿಮಿಟ್ರಿಯು ತಟ್ಟನೆ ಉತ್ತರ ಕೊಟ್ಟ. ಆದರೆ ಸಿಮನ್ಸನನು ಆಗ ಏನೋ ಒಂದು ಕೆಲಸದಲ್ಲಿ ತೊಡಗಿದ್ದರಿಂದ 'ಈಗ ಬೇಡ. ಇನ್ನೊಮ್ಮೆ ಯಾವಾಗಾದರೂ, ಅಂದನು. ಇಷ್ಟರಲ್ಲಿ ಡಿಮಿಟ್ರಿಗೆ ಹತ್ತರಿನ ಎರಡನೇ ಕೋಣೆಯ ಕಡೆಗೆ ಲಕ್ಷಹೋಯಿತು. ಅಲ್ಲಿ ಕಟೊಷಳು ಕಸಗುಡಿಸುತ್ತಿದ್ದಳು. ಡಿಮಿಟ್ರಿಯನ್ನು ಕಂಡೊಡನೆ, ಆಕೆ ಕಸಬರಗಿಯನ್ನು ಅಲ್ಲಿಯೇ ಬಿಸಾಕಿ ಕೈಝಾಡಿಸಿಕೊಂಡು ಅವನಿದ್ದಲ್ಲಿಯೇ ಒಂದು ಬದಿಗೆ ನಾಚಿಕೊಂಡಂತೆ ಬಂದು ನಿಂತಳು. 'ಕಸಗುಡಿಸುತ್ತಿದ್ದಿ ಏನು ? ಎಂದು ಡಿಮಿಟ್ರಿಯು ಮೆಲ್ಲಗೆ ಮಾತಿಗೆ ಮೊದಲು ಮಾಡಿದನು. 'ಹೌದು. ನನ್ನ ಕೆಲಸವೇ ಅಷ್ಟಲ್ಲವೇ ಎಂದಿನಿಂದ. ಅದನ್ನೇ ಮಾಡುತ್ತಿದ್ದೆ' ಎಂದಳು, ಮತ್ತು ಸಿಮನ್ಸನನನ್ನು ವಿಲಕ್ಷಣವಾದ ನೋಟದಿಂದ ನೋಡಿ ನಿಮ್ಮ ಕೆಲಸವಾಯಿತೇನು ? ಎಂದು ವಿಚಾರಿಸಿದಳು.

ಸಿಮನ್ನ ಸನ್ನನು ಆಕೆಯನ್ನು ಓರೆಗಣ್ಣಿನಿಂದ ನೋಡಿ 'ಆದಂತಾಗಿದೆ' ಎಂದನು. ಅವರಿಬ್ಬರ ನೋಟವನ್ನೇ ಡಿಮಿಟ್ರಿಯು ಸೂಕ್ಷ್ಮವಾಗಿ ನಿರಕಿಸು ತ್ತಿದ್ದ. ಅವರ ನೋಟದಲ್ಲಿ ಆವನಿಗೆ ಏನೋ ವಿಶೇಷ ಎನಿಸಿತು. ಕಟೋಷಳು 'ಇದೋ ನಮ್ಮ ಜನರೆಲ್ಲಾ ಇಲ್ಲಿರುವರು. ಒಳಗೆ ಬನ್ನಿ' ಎಂದು ಡಿಮಿಟ್ರಿ ಯನ್ನು ಕರೆದಂತೆ ಮಾಡಿದಳು. ಡಿಮಿಟ್ರಿಯು ಆ ಕೋಣೆಗೆ ಹೋದನು. ಅಲ್ಲಿ ಒಂದು ಮಿಣಿ ಮಿಣಿ ದೀಪ. ಅದೂ ಚಿಮಣಿಯ ಬುಡ್ಡಿ. ಕೋಣೆ ಯಲ್ಲಿ ಚಳಿ ಇಡಗಿತ್ತು; ಅಲ್ಲದೆ ತಂಬಾಕಿನ ವಾಸನೆ; ಮೇಲಾಗಿ ಆದೇ ಆಗ ತಾನೇ ಕಸಗೂಡಿಸಿದ್ದರಿಂದ ಇನ್ನೂ ಕಸದ ಧೂಳು ಅಡಗಿರಲಿಲ್ಲ.

ಡಿಮಿಟ್ರಿಯು ಹೋದೊಡನೆ ಅವನ ಗುರುತಿನ ಜನರೆಲ್ಲ ಅಲ್ಲಿ ಗುಂಪು ಗುಂಪಾಗಿ ನೆರೆದರು. ಬೆಳಕು ಬಹು ಮಸಕಾಗಿದ್ದುದರಿಂದ, ಹತ್ತಿರ ಹತ್ತಿರ ಕುಳಿತ ಹೊರ್ತು ಪ್ರಿಕ್ಕವರ ಮುಖಗಳು ಸರಿಯಾಗಿ ಕಾಣುತ್ತಿರಲಿಲ್ಲ. ಎಲ್ಲರೂ ಕ್ಷೇಮಸಮಾಚಾರದ ಮಾತುಗಳನ್ನು ಆಡಿದ ಮೇಲೆ ಮೇರಿಯು 'ಕಟೋಷಳನ್ನು ಕಂಡಿದ್ದಿರೇನು? ಆಕೆ ದಿನವೆಲ್ಲ ಕಸಗೂಡಿಸುವದರಲ್ಲಿಯೇ ಇರುವಳು.' ಅಲ್ಲಲ್ಲಿಯ ಕಸಗುಡಿಸಿ ಈಗ ಇನ್ನೊಂದು ಕಡೆ ಹೋಗಿರುವಳು. ಆದರೆ ಆಕೆ ಎಷ್ಟು ಚೊಕ್ಕಟವಿಟ್ಟರೂ, ಇಲ್ಲಿ ಮೈ ಮೈ ಆಡರುವ ಛಿಕ್ಕಾಡು ಗಳನ್ನು ನಿರ್ನಾಮ ಮಾಡಲಿಕ್ಕೆ ಸಾಧ್ಯವಿಲ್ಲ ನೋಡಿ. ಅವು ಜೀವಂತ ಮನು ಷ್ಯರನ್ನೇ ತಿನ್ನುವಂತಿವೆ' ಹೀಗೆ ಇನ್ನೇನೋ ಮಾತಾಡಿದಳು. ಅದನ್ನೆಲ್ಲ ಕೇಳುತ್ತ ಕುಳಿತನು.

ಇಷ್ಟರೊಳಗೆ, ಒಬ್ಬಿಬ್ಬರು ಅಧಿಕಾರಿಗಳು ನೆರೆಯ ಕೋಣೆಯಲ್ಲಿಯೇ ಬಂದಿರುವ ಧ್ವನಿ ಕೇಳಿಸಿತು. ಒಳ್ಳೆ ದರ್ಪಿನ ಶಿಕ್ಷಕನು ವರ್ಗದಲ್ಲಿ ಬಂದರೆ ಒಂದು ಕ್ಷಣಕ್ಕೆ ಕಲಕಲ ಗುಲ್ಲುಮಾಡುತ್ತಿರುವ ವಿದ್ಯಾರ್ಥಿಗಳು ಒಮ್ಮೆಲೆ ಬಾಯ್ಮುಚ್ಚಿ, ವರ್ಗವೆಲ್ಲ ನೀರವವಾಗುವಂತೆ ಇದ್ದಕ್ಕಿದ್ದಂತೆ ಎಲ್ಲ ಸೆರೆಯಾಳು ಗಳು ತಣ್ಣಗಾದರು. ಅವರು ಕುಳಿತಲ್ಲಿಯೇ ಸಾರ್ಜಂಟನು ಬಂದನು. ಅವನೊ ಡನೆ ಇಬ್ಬರು ಬೇರೆ ಸೀಪಾಯಿಗಳಿದ್ದರು. ಸಾರ್ಜಂಟನು ಡಿಮಿಟ್ರಿಗೆ 'ನೀವಿಲ್ಲಿ ಹೆಚ್ಚು ಹೊತ್ತು ನಿಲ್ಲಲಿಕ್ಕಾಗದು.' ಎಂದು ತನ್ನ ಅಧಿಕಾರಯುಕ್ತ ವಾಣಿಯಿಂದ ನುಡಿದನು. ಈ ಅಧಿಕಾರದ ಮಾತಿನ ಬೆಲೆ ಎಷ್ಟೆಂಬುದನ್ನು

ಡಿಮಿಟ್ರಿಯು ಬಲ್ಲ. ಅವನು ಇದರ ಗುಟ್ಟನ್ನು ತಿಳಿದುಕೊಂಡೇ ಸಾರ್ಜಂಟನ ಬಳಿ ಹೋಗಿ, ಅವನ ಕೈಯಲ್ಲಿ ಹತ್ತು ರೂಪಾಯಿಯ ನೋಟು ಇಟ್ಟನು. ತತ್‌ಕ್ಷಣವೇ ಅದನ್ನವನು ತನ್ನ ಜೇಬಿನಲ್ಲಿಟ್ಟು 'ಹೆಚ್ಚು ಹೊತ್ತು ನಿಲ್ಲ ಲಿಕ್ಕಾಗದೆಂದರೆ, ಈಗಿಂದೀಗ ಹೋಗಬೇಕೆಂದಲ್ಲ; ನಿಮ್ಮ ಕೆಲಸ ತೀರಿಸಿ ಕೊಂಡು ಹೋಗಬಹುದು.' ಎಂದು ಮಾತನ್ನು ಪಲ್ಲಟಿಸಿದನು.

ಕಟೂಷಳನ್ನು ಕಂಡು ನಾಲ್ಕು ಮಾತು ಆಡಬೇಕೆಂಬ ಆಸೆ ಡಿಮಿಟ್ರಿಗೆ; ಅದು ಕೂಡ ಆಕೆಯ ಹಿತದ ದೃಷ್ಟಿಯಿಂದ; ಆದರೆ, ಆಕೆ ಕೆಲಸದಲ್ಲಿದ್ದಳು. ಮೇರಿಯು ಚಹವನ್ನು ಮಾಡಿದಳು. ಎಲ್ಲರೂ ನಗುತ್ತ ಕೆಲೆಯುತ್ತ ಕುಳಿತು ಕೊಂಡು ಕುಡಿದರು. ಸಿಮನ್ಸನ್ನನೂ ಅಲ್ಲಿಯೇ ಒತ್ತಟ್ಟಿಗೆ, ತನ್ನ ಎರಡೂ ಕೈಗಳನ್ನು ಕುತ್ತಿಗೆಗೆ ಆನಿಸಿಕೊಂಡು ಏನೂ ಮಾತಾಡದೆ ಸುಮ್ಮನೆ ಮಲಗಿ ದ್ದನು. ಎಲ್ಲರೂ ಹಲವು ಮಾತುಗಳನ್ನಾಡಿದರೂ ಅವನು ಪಿಟ್ಟೆಂದಿರಲಿಲ್ಲ. ಒಟ್ಟಾರೆ, ಅವನ ಮುಖಚರ್ಯೆಯ ಮೇಲಿಂದ ಅವನು ಏನೋ ಒಂದು ಧೇನಿಕೆಯಲ್ಲಿರುವಂತೆ ಕಾಣಿಸಿತು. ಸ್ವಭಾವದಿಂದ ಅವನು ಬಹು ಸರಳ; ಆದರೂ ಹೊಟ್ಟೆಯೊಳಗಿದ್ದುದನ್ನು ಒಮ್ಮೆ ಆದದ್ದಾಗಲಿ, ಆಡಿಯೇ ಬಿಡಬೇ ಕೆಂಬುವ ಎಣಿಕೆಯನ್ನೇ ನಡಿಸಿದ್ದನೇನೋ! ಇದ್ದರೂ ಇರಬಹುದು; ಯಾಕಂದರೆ, ಇವರೆಲ್ಲರೂ ಅಲ್ಲಲ್ಲಿಯ ಹಾಳು ಹರಟೆಯ ಮಾತುಗಳನ್ನಾಡು ತಿರುವಾಗ ಅವನು ತಟ್ಟನೆ ತನ್ನ ಸ್ಥಳಬಿಟ್ಟು, ಎಲ್ಲರನ್ನು ದಾಟಿ ಡಿಮಿಟ್ರಿಯು ಕುಳಿತಲ್ಲಿ ಬಂದು ತಾನು ಯಾವುದೋ ಒಂದು ಮಹತ್ವದ ಮಾತನ್ನು ಹೇಳ ತಕ್ಕದ್ದಿರುವದೆಂಬುವಂತೆಯೂ, ಅದರ ಬಗ್ಗೆ ತಾನು ಒಂದು ನಿರ್ಧಾರಕ್ಕೆ ಬಂದಿರುವ ಮುದ್ರೆಯಿಂದಲೂ ಡಿಮಿಟ್ರಿಯನ್ನು ನೋಡಿ 'ಇರಲಿ. ಅದೇನು ಹಾಳು ಹರಟೆ. ನನ್ನದೊಂದು ಮಾತು ಕೇಳುವದಿದ್ದರೆ ಹೇಳುವೆ! ಅದಕೇನು ನಿಮ್ಮ ಅಭಿಪ್ರಾಯ?' ಎಂದು ಡಿಮಿಟ್ರಿಗೆ ಪ್ರಶ್ನೆ ಮಾಡಿದನು. ಡಿಮಿಟ್ರಿಯ ಸ್ವಭಾವವಂತೂ ಸೀದಾ. 'ಹೇಳಿರಿ! ಅದಕೇನು?' ಎಂದನು.

ಈ ಮಾತು ನಡೆಯುವದಕ್ಕೆ ಸ್ವಲ್ಪ ಮುಂಚಿತವಾಗಿ ಕಟೂಷಳು ತನ್ನ ಕೆಲಸ-ಬೊಗಸೆ ಮುಗಿಸಿಕೊಂಡು ಮೇರಿಯ ಹತ್ತಿರ ಬಂದು ಕುಳಿತಿದ್ದಳು.

ಸಿಮನ್ನಸನ್ನನು ಒಮ್ಮೆಲೆ ಡಿಮಿಟ್ರಿಗೆ ಹೀಗಂದು, ಅವನನ್ನು ಒಕ್ಕಡೆಗೆ ಕರೆದೊಯ್ದುದನ್ನು ನೋಡಿ, ಆಕೆಗೆ ಆಶ್ಚರ್ಯವೆನಿಸಿತು. ಇತ್ತ, ಸಿಮನ್ನಸನ್ನನು ಡಿಮಿಟ್ರಿಯನ್ನು ಕುರಿತು "ಇದು ನೋಡಿ ನಿಮ್ಮ ಮತ್ತು ಕಟೂಷಳ ಸಂಬಂಧವು ಯಾವ ತೆರನಾಗಿದ್ದರೂ, ನಾನು ಮಾತ್ರ ಮನಸು ಬಿಚ್ಚಿ ನಿಮಗೊಂದು ಮಾತು ಹೇಳಬಯಸುವೆ. ಇದರಲ್ಲೇನೂ ಕಪಟ-ಮೋಸಗಳಿಲ್ಲ ನಾನಂತೂ ಆಕೆಯನ್ನು ಮದುವೆಯಾಗಬೇಕೆನ್ನುವೆ; ಮತ್ತು ಅದರಂತೆ. ನಾನು ಆಕೆಯ ಅಭಿಪ್ರಾಯವನ್ನೂ ಕೇಳಬೇಕೆಂದಿರುವೆ." ಎಂದು ಸ್ಪಷ್ಟವಾಗಿ ಮಾತಾಡಿದನು. ಈ ಮಾತಿನಿಂದ ಡಿಮಿಟ್ರಿಗೆ ನಿಜವಾಗಿಯೂ ಸಿಡಿಲು ಬಡಿದಂತಾಗಬೇಕು. ಆದೇನೂ ಆಗಲಿಲ್ಲ. ಅವನು ಒಳ್ಳೇ ಸಮಾಧಾನದಿಂದ 'ಇದರಲ್ಲಿ ನಾನೇನು ಮಾಡತಕ್ಕದ್ದಿದೆ! ನೀವು ಆಕೆಯನ್ನು ಕೇಳಬಹುದು. ಆಕೆಯ ಇಷ್ಟ!' ಎಂದು ನಿರ್ವಿಕಾರ ಮುಖಚರ್ಯೆಯಿಂದ ನುಡಿದನು. ಆದರೆ, ಸಿಮನ್ನಸನ್ನನು ಮತ್ತೆ 'ಆದರೆ, ನಿಮ್ಮ ಅಭಿಪ್ರಾಯ ಕೇಳದೆ, ಆಕೆ ಏನೂ ನಿರ್ಧರಿಸಲರಿಯಳು.' ಅಂದನು. 'ಆದೇಕೆ? ಅದರಲ್ಲಿ ಅಡ್ಡಿ ಏನು? ತನ್ನಷ್ಟಕ್ಕೆ ಆಕೆ ಸ್ವತಂತ್ರ ಇರುವಳು' ಎಂಬರ್ಥದ ಮಾತು ನುಡಿದನು. ಅಪಕ್ಕವನು 'ಹಾಗಲ್ಲ. ನಿಮ್ಮ-ಆವಳ ಸಂಬಂಧಗಳ ನಿಷ್ಕರ್ಷೆಯಾಗುವತನಕ ಆಕೆಗೆ ಇದನ್ನು ನಿಶ್ಚಯಿಸಲಿಕ್ಕೆ ಬರದು.' ಎಂದನು. ಡಿಮಿಟ್ರಿಯು ತನ್ನ ಉತ್ತರವನ್ನು ಮೊದಲೇ ಗೊತ್ತು ಮಾಡಿಟ್ಟುಕೊಂಡಿರುವಂತೆ. 'ನನ್ನ ವಿಚಾರವೇನೋ ಎಂದೋ ನಿಶ್ಚಿತವಾಗಿದೆ; ಆಕೆಯ ಸಂಬಂಧ ಬಂದುದುಕ್ಕಾಗಿ ಕೈಲಾದಷ್ಟು ಆಕೆಯ ಕಷ್ಟನಿವಾರಣೆ ಮಾಡಬೇಕೆನ್ನುವದೇ ನನ್ನ ಮನೀಷೆ; ಅಲ್ಲದೆ ಇನ್ನಾವ ವಿಧದಿಂದಲೂ ನಾನಾಕೆಯನ್ನು ನಿರ್ಬಂಧಿಸಲಾರೆ.' ಅಂದನು.

'ಆದರೆ ಆಕೆಯು ತನಗಾಗಿ ನಿಮ್ಮಿಂದಾಗುವ ಯಾವ ಬಗೆಯ ತ್ಯಾಗವನ್ನೂ ಸ್ವೀಕರಿಸಲಿಕ್ಕೆ ಸಿದ್ಧಳಿಲ್ಲ. ಆದಕೇನು ಮಾಡುವದು' ಎಂದು ಸಿಮನ್ನಸನ್ನನು ನುಡಿದನು.

ಡಿಮಿಟ್ರಿಯು 'ನಾನದನ್ನು ಸ್ವಾರ್ಥತ್ಯಾಗವೆಂದು ತಿಳಿದು ಮಾಡುವದೇ ಇಲ್ಲ; ಅಂದ ಮೇಲೇಕೆ ಈ ಮಾತು!

ಸಿಮನ್ನಸನ್ನ ‘ ನನಗೆ ತಿಳಿದಮಟ್ಟಿಗೆ ಆಕೆಯ ನಿಶ್ಚಯವು ಕೊನೆಯದೇ ಎಂದು ಹೇಳಬಹುದು. ’

ಡಿಮಿಟ್ರಿಯು ‘ ಹಾಗಿದ್ದರೆ ನಾನು ಅದರೊಳಗೆ ಬಾಯಿಹಾಕುವದಿಲ್ಲ. ಆಕೆಯು ತನ್ನ ಮಟ್ಟಿಗೆ ಬೇಕಾದ್ದನ್ನು ಮಾಡಲು ಸ್ವತಂತ್ರಳು. ಸಿಮನ್ನಸನ್ನ ‘ ಹಾಗಾದರೆ ಒಳಿತು. ನಾನಿದನ್ನೆಲ್ಲ ಆಕೆಗೆ ತಿಳಿಸುವೆ. ನಾನಾಕೆಯನ್ನು ಪ್ರೀತಿಸುತ್ತೇನೆಂದು ತಿಳಿದು ನೀವು ಅವಮಾನ ತಿಳಿದುಕೊಳ್ಳಲಾಗದು. ಬಹು ಕಷ್ಟಪಟ್ಟ ಪ್ರಾಣಿ ಎಂದು ನಾನಾಕೆಯನ್ನು ಪ್ರೀತಿಸುವೆ. ಆಕೆಯನ್ನು ಕೈಲಾದಮಟ್ಟಿಗೆ ಸುಖಪಡಿಸಬೇಕೆಂಬುದೇ ನನ್ನ ಮನಸಿನ ಹಂಬಲ. ’ ಎಂದು ನುಡಿಯುವಾಗ ಸಿಮನ್ನಸನ್ನನ ಕುತ್ತಿಗೆ ಸಿರಬಿಗಿದು ದುಃಖದಿಂದ ನಡುಗಿತು. ಅವನು ಹಾಗೇ ತನ್ನ ಮಾತನ್ನು ಮುಂದರಿಸಿ ‘ ನಿಮ್ಮ ಸಹಾಯವು ಆಕೆಗೆ ಬೇಡಾಗಿದ್ದರೆ ನನ್ನ ಸಹಾಯತೆಗೆದುಕೊಳ್ಳಲಿ ಆಕೆ! ಒಪ್ಪಿದರೆ, ಆಕೆಯನ್ನು ಯಾವ ಸೆರೆಮನೆಗೆ ಅಟ್ಟುವರೋ, ಅಲ್ಲಿಗೆನೇ ನನ್ನನ್ನು ಕಳಿಸಲು ಕೇಳಿ ಕೊಳ್ಳುವೆ. ಆಕೆಯಹತ್ತಿರ ಇದ್ದು ಆಕೆಯ ಜೀವನವನ್ನು ಹಗುರುಗೊಳಿಸಿದರೆ, ಅದೇ ನನಗೆ ಪ್ರತಿಫಲ. ’ ಎಂದನು. ಸಿಮನ್ನಸನ್ನನ ಮಾತು ಕೇಳಿ ಡಿಮಿಟ್ರಿಯ ಮನಸು ಕರಗಿತು. ‘ ನಿನ್ನಂಥ ಪಾಲುಗಾರನು ಆಕೆಗೆ ದೊರಿತರೆ, ನನಗಾದರೂ ಹೆಚ್ಚಿನದೇನು ಬೇಕು. ? ನನಗೆ ಬಹು ಸಂತೋಷ ! ಒಟ್ಟಾರೆ, ಆಕೆಯ ಕಷ್ಟದ ಕಾಲ ಮುಗಿಯಬೇಕೆಂಬುದೇ ನನ್ನ ಮಹತ್ವಾಕಾಂಕ್ಷೆ. ” ಅಂದನು.

ಡಿಮಿಟ್ರಿಯ ಈ ಮನಸು ಬಿಚ್ಚಿದ ಮಾತು ಕೇಳಿ ಸಿಮನಸನ್ನನಿಗೆ ತಡಿಸಲಾರದಷ್ಟು ಆನಂದವಾಗಿ, ಆ ಸ್ಥಳದಿಂದ ಚಟ್ಟನೆ ಎದ್ದು ಹೋಗಿ ಕಣ್ಣೀರು ತಂದು ಅವನನ್ನು ಅಪ್ಪಿಕೊಂಡು, ‘ ಹಾಗಾದರೆ, ನಾನಿನ್ನು ಬರುವೆ; ಮತ್ತು ಈಗ ನಡೆದುದನ್ನೆಲ್ಲ ಆಕೆಗೆ ತಿಳಿಸುವೆ ” ಎಂದು ಹೊರಟನು.

ಕಟೂಶಳ ಜೀವದ ಗೆಳತಿಯಾದ ಮೇರಿಗೂ ಈ ಪ್ರೇಮದ ವಿಷಯ ತಿಳಿದಿತ್ತು; ಈ ಬಗ್ಗೆ ಮೇರಿಗೂ ಡಿಮಿಟ್ರಿಗೂ ಮಾತು ನಡೆದು, ‘ ಆಕೆಯನ್ನು ನಿಮ್ಮ ಕಡೆಗೆ ಬರಮಾಡುವೆನು. ಆಕೆಯ ಮುಂದೆ ನೀವು ನಿಮ್ಮ ಮನಸಿನಲ್ಲಿ

ದ್ದುದನ್ನೆಲ್ಲ ಬಿಚ್ಚಿ ಹೇಳುವದು ಒಳಿತು" ಎಂದು ಆಕೆಯೂ ಅಭಿಪ್ರಾಯ ಪಟ್ಟಿದ್ದಳು. ಅದರಂತೆ ಆಕೆ ಸಮಯನೋಡಿ ಕಟೂಷಳನ್ನು ಡಿಮಿಟ್ರಿಯ ಹತ್ತಿರ ಕಳಿಸಿದಳು.

ಡಿಮಿಟ್ರಿಯು ತನ್ನ ಗೆಳೆಯನ ಕೋಣೆಯಲ್ಲಿ ಒಬ್ಬನೇ ಮುಂದಿನ ವಿಚಾರಗಳಲ್ಲಿ ಮುಳುಗಿ ಕುಳಿತಿದ್ದನು. 'ಸಿಮನ್ನಸನ್ನನನ್ನು ಕಟೂಷಳು ಮದುವೆಯಾಗುವದಾದರೆ ನಾನಿಲ್ಲಿದ್ದು ಪ್ರಯೋಜನವೇನು? ನನ್ನ ದಾರಿ ನಾನು ಕಂಡುಕೊಳ್ಳಲಿಕ್ಕೆ ಬೇಕು. ಮುಂದಿನ ಮಾತು ಮುಂದೆ.' ಇಷ್ಟ ರಲ್ಲಿ ಕಟೂಷಳು ಚುರುಕು ನಡಿಗೆಯಿಂದ ಬಂದು ಡಿಮಿಟ್ರಿಯ ಹತ್ತಿರ ನಿಂತು 'ಮೇರಿಯಿಂದ ಹೇಳಿ ಕಳಿಸಿದ್ದಿರಿ! ಏನಾದರೂ ಕೆಲಸವಿತ್ತೇನು?' ಎಂದು ನಗುಮುಖದಿಂದ ವಿಚಾರಿಸಿದಳು. ಡಿಮಿಟ್ರಿಯು 'ಹೌದು. ನಿನ್ನೊ ಡನೆ ಮಾತಾಡುವದಿತ್ತು. ಕೂತುಕೋ' ಎಂದು ಗಂಭೀರ ಮುದ್ರೆಯಿಂದ ನುಡಿದನು. ಆಕೆ ನಾಚಿಕೊಂಡು ಮೊಳಕಾಲಿನ ಮೇಲೆ ಕೈಯಿಟ್ಟುಕೊಂಡು ಬಾಗಿ ಕುಳಿತಳು. ಮುಖದಲ್ಲಿ ತುಂಬ ಶಾಂತಿ, ಆದರೆ ಡಿಮಿಟ್ರಿಯು ಸಿಮ ನ್ನಸನ್ನನ ಹೆಸರೆತ್ತಿದೊಡನೆ ಆಕೆಯ ಮುಖವು ನಾಚಿಕೆಯಿಂದ ಕೆಂಪೇರಿತು.

'ಸಿಮನ್ನಸನ್ನರು ನಿಮಗೆ ಹೇಳಿದ್ದೇನು?'

'ನಿನ್ನನ್ನು ಮದುವೆಯಾಗುವ ವಿಚಾರ.'

ಇದನ್ನು ಕೇಳಿದೊಡನೆ ಕಟೂಷಳ ಮುಖ ದುಃಖದಿಂದ ಸಪ್ಪಗಾ ಯಿತು. ಆದರೆ, ಆಕೆ ಬಾಯಿಂದೇನೂ ಮರುಮಾತಾಡದೆ, ಸುಮ್ಮನೆ ನೆಲ ವನ್ನೇ ನೋಡಹತ್ತಿದಳು.

ಡಿಮಿಟ್ರಿಯು 'ಅವರು ನನ್ನ ಒಪ್ಪಿಗೆ ಕೇಳುತ್ತಿರುವರು; ಆದರೆ, ನನ್ನ ದೇನೂ ಅದರಲ್ಲಿ ಸಂಬಂಧವಿಲ್ಲ; ಅದನ್ನು ನಿರ್ಧರಿಸುವವಳು ನೀನೇ ಎಂದು ಕೊನೆಯದಾಗಿ ಹೇಳಿಬಿಟ್ಟಿರುವೆನಲ್ಲ' ಅಂದನು.

'ಹೀಗೇಕೆ ಹೇಳಿದಿರಿ! ಅದೇನು ಹಾಗೆ ಹೇಳಿದರೆ!' ಹೀಗೆ ತನ್ನ ಬಾಯಲ್ಲಿಯೇ ತಾನು ಒಟಗುಟ್ಟಿ, ಡಿಮಿಟ್ರಿಯ ಮುಖವನ್ನೇ ಕೆಲ ಹೊತ್ತು ನೋಡಿದಳು; ಡಿಮಿಟ್ರಿಯೂ ಆಕೆಯನ್ನು ಅಭಿಪ್ರಾಯ ಪೂರ್ಣ

ದೃಷ್ಟಿಯಿಂದ ನಿಟ್ಟಿಸಿದನು. ಬಾಯಿಂದ ಮಾತನಾಡದ್ದನ್ನೆಲ್ಲ ಇಬ್ಬರ ಕಣ್ಣು ಗಳೇ ಮಾತಾಡಿದವು. ಡಿಮಿಟ್ರಿಯು 'ಒಳ್ಳೇದು. ಏನೆಂಬುದನ್ನು ನಿರ್ಣಯಿಸು.' ಅಂದನು. ಕಟೂಷಳು 'ನಾನೇನು ನಿರ್ಣಯಿಸುವದು? ಎಲ್ಲವೂ ಮೊದಲೇ ನಿರ್ಣಯವಾಗಿ ಹೋಗಿದೆ. ಆದರೂ ನನ್ನಂಥ ಸೆರೆಯಾಳು! ನಾನೆಂತು ಸೀಮನ್ನಸನ್ನರ ಕೈಹಿಡಿದು ಬಾಳ್ವೆ ಮಾಡುವೆನೋ ಏನೋ! ಅವರ ಬಾಳನ್ನಷ್ಟು ನಾನೇಕೆ ಮಣ್ಣುಗೂಡಿಸಲಿ?' ಎಂದು ಹುಬ್ಬುಗಂಟಿಕ್ಕಿ ಮಾತಾಡಿದಳು. 'ಒಳ್ಳೇದು, ಒಂದುವೇಳೆ ನೀನು ಶಿಕ್ಷೆಯಿಂದ ಬಿಡುಗಡೆ ಹೊಂದಿದರೆ ಹೇಗೆ?' ಎಂದು ಡಿಮಿಟ್ರಿಯು ಪ್ರಶ್ನೆ ಮಾಡಿದಾಗ ಕಟೂಷಳು 'ಆದರಲ್ಲೇನು? ನಾನೊಬ್ಬಳೇ ಹೇಗೋ ಕಾಲ ನೂಕುವೆ. ಇದಕ್ಕಿಂತ ಹೆಚ್ಚಿಗೆ ಹೇಳುವದೇನಿದೆ?' ಎಂದು ಹೊರಡಲನುವಾದಳು. ಆಗ ರಾತ್ರಿ ಹತ್ತು ಗಂಟೆ.

ಎಲ್ಲ ಅಪರಾಧಿಗಳೂ ಮಲಗಿದ್ದರು. ಕೆಲವರು ಮಾತ್ರ ಇನ್ನೂ ಎಚ್ಚರಿದ್ದರು. ಎಲ್ಲರಿಗೆ ಕೋಣೆಗಳು ಸಾಲುವಷ್ಟಿರದ್ದರಿಂದ ಹಲವರು ಅಡ್ಡಾಡುವ ದಾರಿಯಲ್ಲಿಯೇ ತಮ್ಮಲ್ಲಿರುವ ಅಂಗಿ-ಅರಿವೆಗಳನ್ನೇ ತಲೆಗಿಂಬಿಗಿಟ್ಟುಕೊಂಡು ಗೊರಕೆ ಹೊಡೆಯುತ್ತಿದ್ದರು. ಅಲ್ಲಲ್ಲಿ ಹೀಗೆ ನಿದ್ದೆಗೇಡಾಗಿ ಬಿದ್ದು ಸೆರೆಮನೆಯ ಉಡಿಗೆಯನ್ನು ಜನರು ಸುತ್ತಿ ಸುತ್ತಿ ಮುದುಡಿಕೊಂಡು ಮಲಗಿದ್ದನ್ನು ನೋಡಿದರೆ ಮಾನವರದೊಂದು ರಾಸಿಯೇ ಬಿದ್ದಿರುವದಾಗಿ ಅವನಿಗೆ ಅನಿಸಿತು ಈ ಜನರ ಮಲಗುವ ಸ್ಥಳವೆಲ್ಲ ಗಬ್ಬುವಾಸನೆಯಿಂದ ತುಂಬಿತ್ತು. ಕೆಲವರಿಗೆ ಮಲಗಲಿಕ್ಕೆ ಸ್ಥಳ ಸಿಗದ್ದರಿಂದ, ಒಂದು ಸೋರುವ ಪೀಪಾಯಿಯ ಕಡೆಗೆ ತಲೆ ಮಾಡಿ ಅತ್ತಿತ್ತ ಸರಿದಾಡಲಿಕ್ಕೆ ಕೂಡ ಸ್ಥಳ ಇರದ್ದನ್ನೂ, ಒಬ್ಬ ಹುಡುಗನು ಯಾವನೊಬ್ಬನ ಬೂಟಗಾಲಿನ ಮೇಲೆ ತಲೆಯಿಟ್ಟುಕೊಂಡು ಮಲಗಿರುವದನ್ನೂ ಕಂಡನು. ಇದೆಲ್ಲ ನೋಟವು ಡಿಮಿಟ್ರಿಗೆ ಬಹು ಹೇಯವನ್ನುಂಟು ಮಾಡಿತು. ಜಗದ ಸ್ಥಿತಿ ನೋಡಿ ಅವನ ಮನಸು ಮರಗುವದು, ಇನ್ನೊಂದು ಗಳಿಗ್ಗೆ ಬೆದರುವದು; ಇದೇ ಅಲೆದಾಟದೊಳಗೆ ಡಿಮಿಟ್ರಿಯು ತನ್ನ ಮಿತ್ರನ ಕೋಣೆಗೆ ಬಂದು, ವೈಯಲ್ಲಿದ್ದ ಕೋಟು, ಬೂಟುಗಳನ್ನು ಬಿಚ್ಚಿ, ಒಂದು ಸಾದಾ ಶರ್ಟನಿಂದಲೇ ತನ್ನ ರಗ್ಗನ್ನು ಹಾಸಿಕೊಂಡು ನೆಲಕ್ಕೆ ಮಗ್ಗಲು

ಹಚ್ಚಿದನು. ಅವನಿಗಿಂದು ಕಟೊಶಾಳ ವಿಚಾರವು ಅಷ್ಟೊಂದು ಮನಸಿಗೆ ಹತ್ತಿರಲಿಲ್ಲ; ಅಥವಾ ಆಕೆ ತನ್ನನ್ನು ಬಿಟ್ಟು ಸಿಮನ್ಸನ್ನನ ಕೈಹಿಡಿಯುವ ಳಲ್ಲ ಎಂದೂ ಕುಂದಿರಲಿಲ್ಲ; ಆದರೆ, ಆ ಸೆರೆಯಾಳುಗಳ ಜೀವನ, ಅವರ ಕಷ್ಟ, ಸೆರೆಮನೆಯಲ್ಲಿಯ ಹೊಲಸುವಾಸನೆ, ಅಂಥ ಕೆಟ್ಟ ಹೇಸಿ ಹವೆಯ ಇಡಕು ಮುಡುಕಿನ ಸ್ಥಳದಲ್ಲಿಯೇ ನೂರಾರು ಮಂದಿ ಮಲಗಿರುವ ಆ ಅಸಹ್ಯವಾದ ದೃಶ್ಯವೇ ತಿರುತಿರುಗಿ ಅವನನ್ನು ಬೆನ್ನಟ್ಟಿ ಬಾಧೆಪಡಿಸುತ್ತಿತ್ತು. ಅವನ ಮನವೆಂಬುದು ಆ ವಿಚಾರಗಳಲ್ಲಿ ಮುಳುಗಿದ್ದಿತು. ಜಗದೊಳಗಿನ ದುಃಖ-ಅನ್ಯಾಯಗಳು ಕಣ್ಣಿಗೆ ಕಟ್ಟಿ ಇವಕ್ಕೆ ಪರಿಹಾರವೇನೆಂಬುದು ತಿಳಿಯದೆ ಅವನ ಮನಸ್ಸು ದಿಕ್ಕುಗೆಟ್ಟಿದ್ದಿತು. ಇದೇ ಭರದೊಳಗೆ ಅವನು ವಿಚಾರಿಸಿದ್ದು ' ಆದರೆ ಇದೆಲ್ಲ ಏನೋ ಅಕಸ್ಮಾತ್ತಾಗಿ ಯಾರ ಪ್ರಯತ್ನವಿಲ್ಲದೆ ನಡೆದಿದೆ ಎನ್ನಬೇಕೇ ಹಾಗೂ ಇಲ್ಲ. ಸರಕಾರವೆಂಬುವ ಸಂಸ್ಥೆಯ ಮುಖಾಂತರವಾಗಿ ಹಲವು ಶತಮಾನಗಳಿಂದ ನಡೆಯುತ ಬಂದದ್ದು. ಇಂಥ ಅಪರಾಧಿಗಳನ್ನು ಇದೇ ಸರಕಾರವೆಂಬುವವರು ಒಂದಾನೊಂದು ಕಾಲಕ್ಕೆ ಕಂಬಕ್ಕೆ ಕಟ್ಟಿ ಹೊಡೆಯುತ್ತಿದ್ದರು. ಬರೆಹಾಕುತ್ತಿದ್ದರು. ಆ ಕಾಲ ಈಗಿಲ್ಲ; ಈಗಿನ ಮಾದರಿಯೇ ಬೇರೆ. ರಾಜ್ಯದಾಡಳಿತವನ್ನು ನಡಿಸುವ ಜನರು ತಿಂಗಳಾ ಜನರಿಂದ ಬುಟ್ಟಿಗಟ್ಟಲೆ ರೂಪಾಯಿ ಸಂಬಳ ತಿಂದು, ಅಧಿಕಾರಿಗಳೆನಿಸಿಕೊಂಡು ಇಂಥ ಅನ್ಯಾಯಗಳನ್ನು ಮಾಡುತ್ತಿರುವದಕ್ಕೆ ಏನನ್ನಬೇಕು? ಅಹಹ! ಜನರನ್ನು ಹಿಂಡಿ ಹಿಪ್ಪೆಮಾಡಿ ಕರ-ತೆರಿಗೆಗಳ ನೆವದಿಂದ ಹಣ ಎತ್ತಿ, ಅವರನ್ನೇ ಸಾವಿನ ಬಾಯಿಗೀಡು ಮಾಡುವಂಥ ಇಂತಹ ಸ್ಥಿತಿಯಲ್ಲಿ ಅಖಂಡವಾಗಿ ಕೊಳೆಯ ಹಾಕುವ ಈ ರಾಜಪದ್ಧತಿಗೆ ಯಾರಾದರೂ ಸೈ ಅನ್ನಬಹುದೇ? ' ಎಂದು ಕೊರಗಿದನು. ಆದರೊಳಗೆ ತಮ್ಮ ದೇಶದಲ್ಲಿಯ ಜನರ ಹಿತಕ್ಕಾಗಿ ಹೆಣಗುವ ಸುಶಿಕ್ಷಿತ ಸಜ್ಜನರು ಶೂಲದ ಮೇಲೆ ನಿಂತುಕೊಂಡು ಜಗದ ಬಾಳನ್ನು ನಡಿಸುವದೆಂದರೆ, ಎಂತಹ ಘೋರ ಪ್ರಸಂಗ! ಧಿಕ್ಕಾರವಿರಲಿ! ಇಂಥ ಅರಿವುಗೇಡಿ ರಾಜ್ಯದಾಡಳಿತಕ್ಕೆ ' ಎಂದನು.

ಡಿಮಿಟ್ರಿಗೆ ಸೆರೆಮನೆಗಳ ಒಳಹೊರಗಿನ ಗುಟ್ಟು-ಮಟ್ಟುಗಳೆಲ್ಲ ಚನ್ನಾಗಿ ತಿಳಿದದ್ದರಿಂದ, ಸೆರೆಮನೆಗಳೆಂದರೆ, ಕುಡುಕುತನ, ಜೂಜು, ಕ್ರೌರ್ಯ, ಅಷ್ಟ

ಲ್ಲದೆ ಮನುಷ್ಯ ಭಕ್ಷಣೆಯಂಥ ಘೋರ ಕರ್ಮಗಳನ್ನು ಸೆರೆಯಾಳುಗಳಿಂದ ಮಾಡಿಸುವ ಮತ್ತು ದುರ್ಗುಣಗಳನ್ನು ಬೆಳಿಸುವ ಬೀಡುಗಳು. ರಾಜಕೀಯ ಗದ್ದಲಗಳ ದೆಸೆಯಿಂದ ಒಬ್ಬ ಸುಶಿಕ್ಷಿತ ಮನುಷ್ಯನು ಸೆರೆಮನೆಗೆ ಸೇರಿದರೂ ಮೊದಲು ಚನ್ನಾಗಿದ್ದವನೇ ದುಷ್ಟನಾಗಿ ಹೊರಗೆ ಬರುವದನ್ನು ನೋಡಿ ದರೆ, ಸೆರೆಮನೆಯೆಂಬುದೊಂದು ಸಮಾಜವನ್ನೇ ಕೆಡಿಸಿ ಹಾಳಾಗಿಸುವ ಸಂಸ್ಥೆ ಇಂಥ ಸಂಸ್ಥೆಯು ಸಮಾಜದಲ್ಲಿರುವದೇ ದೊಡ್ಡ ತಪ್ಪು; ಮೇಲಾಗಿ, ರಾಜ್ಯ ಪದ್ಧತಿಯನ್ನು ಲಕ್ಷಿಸಿದರೆ, ಸರಕಾರದ ಸಂಬಳ ತಿಂದು ಕೆಲಸ ಮಾಡುವವ ನೊಬ್ಬನಿಗೂ ನ್ಯಾಯದ ಪರವೇ ಇಲ್ಲ; ಎಲ್ಲರೂ ತಮ್ಮ ತಿಂಗಳ ಸಂಬಳದ ಮೇಲೆ ಕಣ್ಣಿಟ್ಟುಕೊಂಡು ಕುಳಿತಿರುವವರೇ! ಅಂದರೆ, ರಾಜ್ಯಪದ್ಧತಿ ಯನ್ನು ಒಳ್ಳೆಯದನ್ನಾಗಿ ಮಾಡಲಿಕ್ಕೆಂದು ಸಂಬಳ ತಿನ್ನುವವರೇ ರಾಜ್ಯ ಪದ್ಧತಿಯನ್ನು ಕೆಡಿಸಲು ಕಂಕಣಬದ್ಧರು; ಅವರಿಂದಲೇ ಇಡೀಸಮಾಜ ವೆಂಬುದು ಕೆಟ್ಟು, ಅದು ಎಡೆಬಿಡದೆ, ಪಾತಾಳಕ್ಕಿಳಿಯುತ್ತಿರುವದು ಎಷ್ಟು ಖೇದಜನಕ ಮತ್ತು ಸಂತಾಪಜನಕವು! ಈ ಅಧಿಕಾರಿಗಳೆಂದರೆ, ಜನರನ್ನು ರಕ್ಷಿಸುವದಲ್ಲದೆ, ಅವರನ್ನು ಭಕ್ಷಿಸಲಿಕ್ಕೆ ಇದ್ದಂತಾಗಿದೆ! ತೋಳದ ಹಿಂದಿನ ಕೈಯಲ್ಲಿ ಕುರಿಗಳ ಮಂದೆಯನ್ನು ಕೊಟ್ಟಂತಾಗಿದೆಯಲ್ಲ! ಅಂದ ಮೇಲೆ, ಈಗ ನಡೆದಿರುವದೆಲ್ಲ ಕೇವಲ ತಪ್ಪುತಿಳಿವಳಿಕೆಯಿಂದಲೋ ಏನು ಉದ್ದೇಶ ಪೂರ್ವಕವಾಗಿಯೊ? ಹೀಗೆಂದು ಮನಸಿನೊಳಗೆ ಮಸೆದಾಟ ನಡೆದಿರುವಾಗಲೇ ಎರಡನೇ ಸಲ ಕೋಳಿಗಳು ಕುಕೂಕೂ ಎಂದು ಕೂಗಿದವು. ಚಿಕ್ಕಾಡಗಳು ಸುತ್ತೂ ಕಡೆಯಿಂದ ನೀರಿನ ಬುಗ್ಗೆಯಂತೆ ಪುಟೆ ಪುಟೆದು ಮುಸುಕಿನಲ್ಲಿ ಸೇರಿ ಮೈಗೆಲ್ಲ ಅಡರುತ್ತಿದ್ದರೂ, ಕಣ್ಣುಗಳು ನಿದ್ರೆಯಿಂದ ಭಾರೈಸಿ ತನ್ನಷ್ಟಕ್ಕೆ ತಾನೇ ಡಿಮಿಟ್ರಿಗೆ ಜಂಪುಹತ್ತಿತು.



# ೧೬ ದಾರಿಯಲ್ಲಿಯ ಅನುಭವ.



ಡಿಮಿಟ್ರಿಯು ತಡವಾಗಿಯೇ ಮಲಗಿದ್ದರಿಂದ ಕೊಂಚ ತಡವಾಗಿಯೇ ಎಚ್ಚತ್ತನು. ಸೆರೆಯಾಳುಗಳಿಗೆ ಇನ್ನೂ ದೂರದ ಸೆರೆಮನೆಗೆ ಹೋಗುವದಿತ್ತು. ಇದುವರೆಗೆ ಅವರು ಅಲ್ಲಲ್ಲಿಯ ಸೆರೆಮನೆಗಳಲ್ಲಿ ರಾತ್ರಿ ಒಪ್ಪತ್ತು ಇಳಿದುಕೊಂಡು ವಿಶ್ರಾಂತಿಗೊಳ್ಳುತ್ತ ಬಂದಿದ್ದರು. ಇನ್ನೊಂದು ನಾಲ್ಕಾರು ದಿನದ ದಾರಿ ಇತ್ತು. ಡಿಮಿಟ್ರಿಗೆ ಕಟೂಷಳ ಆಸೆ ಕಡಿದುಹೋಗಿದ್ದರೂ ಹಿಡಿದ ಕೆಲಸ ಕೊನೆಮುಟ್ಟಿಸಬೇಕೆಂದೂ, ಬಾದಶಹರ ಕಡೆಗೆ ಮಾಡಿದ ಕಟೂಷಳ ಅಪೀಲಿನ ಉತ್ತರವಿನ್ನೂ ಬರದ್ದರಿಂದಲೂ ಆವನು ಉಪಾಯವಿಲ್ಲದೆ ಆಕೆಯ ಬೆನ್ನು ಹತ್ತಿದ್ದನು.

ಎದ್ದು ಅವನು ಮುಖತೊಳೆದು ಒಂದು ಕಪ್ಪು ಚಹವನ್ನು ಕುಡಿದು, ತನ್ನ ಆಳುಮಗನನ್ನು ಕರೆದು ಕುದುರೆಬಂಡಿಯನ್ನು ಹೂಡಲಿಕ್ಕೆ ಹೇಳಿದನು. ಇವನು ಚಹ ತೆಗೆದುಕೊಂಡು ಸಜ್ಜಾಗುವ ಹೊತ್ತಿಗೆ ಬಂಡಿಯು ಇವನಿದ್ದಲ್ಲಿಗೆ ಗಡಗಡ ಎಂಬ ಸಪ್ಪಳ ಮಾಡುತ್ತ ಬಂದು ನಿಂತಿತು. ತನ್ನ ಸಾಮಾನುಗಳನ್ನು ಬಂಡಿಯಲ್ಲಿರಿಸಿ, ಲಗಲಗ ಹೊಡೆಯು ಹೇಳಿದ. ಈ ಬಂಡಿಯ ಮುಂದೆ ಜಡ್ಡಾದ ಸೆರೆಯಾಳುಗಳ ಬಂಡಿಗಳಿದ್ದವು. ಅವರೊಡನೆ ಯಾವ ಅಧಿಕಾರಿಯೂ ಇರಲಿಲ್ಲ. ತಮ್ಮನ್ನು ಕೇಳುವವರು ಯಾರೂ ಇಲ್ಲವೆಂದು ಸೀಪಾಯರು ತಿಳಿದು, ಮನದಣಿ ಸೆರೆ ಕುಡಿದು, ಸಂಗಡಿಗರೊಡನೆ ವಿನೋದ-ಹಾಸ್ಯ ಮಾಡುತ್ತ ನಡೆದಿದ್ದರು. ಒಂದೊಂದು ಬಂಡಿಯಲ್ಲಿ ಆರಾರು ಮಂದಿ ಸೆರೆಯಾಳುಗಳನ್ನು ಬಲು ದಟ್ಟಾಗಿ ಕುಳ್ಳಿರಿಸಿದ್ದರಿಂದ, ಅವರು ಮೈ ಮುದುಡಿಕೊಂಡು ಹೇಗೋ ಕುಳಿತಿದ್ದರು. ಒಂದೆರಡು ಬಂಡಿ ದಾಟಿದ ಮೇಲೆ ಮೂರನೇ ಬಂಡಿಯಲ್ಲಿ ಡಿಮಿಟ್ರಿಯ ಪ್ರೀತಿಯ ಗೆಳೆಯನೊಬ್ಬನಿದ್ದ. ಅವನೂ ರಾಜಕೀಯ ಸೆರೆಯಾಳು; ಆದರೆ, ಸೆರೆಮನೆಯಲ್ಲಿಯ ಹೊಲಸಿನಿಂದ

ಯಾವಾಗ ಏನೋ ಅವನಲ್ಲಿ ಕ್ಷಯರೋಗದ ಜಂತು ಸೇರಿ, ಅವನು ಕ್ಷಯ ರೋಗಿಯಾಗಿದ್ದ. ಈಗಂತೂ ಅವನನ್ನು ನೋಡುವಂತಿರಲಿಲ್ಲ. ಒಂದು ಬಂಡಿಯಲ್ಲಿ ಒಣ ಹುಲ್ಲನ್ನು ಹಾಕಿ, ಅದರ ಮೇಲೊಂದು ಸಾದಾ ಹಾಸಿಗೆ ಹಾಸಿ, ಅವನನ್ನು ಮಲಗಿಸಿದ್ದರು. ಹತ್ತಿರದಲ್ಲಿಯೇ ಪರೋಪಕಾರಿಯಾದ ಮೇರಿಯು ಅವನ ಸೇವೆಗಾಗಿ ಒಂದು ಗೇಣು ಸ್ಥಳದಲ್ಲಿಯೇ ಮುದ್ದೆಯಾಗಿ ಕುಳಿತಿದ್ದಳು. ಗೆಳೆಯನ ಬಂಡಿಯನ್ನು ನೋಡಿದಾಕ್ಷಣ ಡಿಮಿಟ್ರಿಯು ತನ್ನ ಬಂಡಿ ತರಬಲಿಕ್ಕ ಹೇಳಿ, ತಟ್ಟನೆ ಕೆಳಗೆ ಜಿಗಿದು ಅವನ ಬಂಡಿಯ ಕಡೆಗೆ ನಡೆದನು. ಇಷ್ಟರಲ್ಲಿ, ಒಬ್ಬ ಸೀಪಾಯಿಯು ' ಹುಂ. ಕೆಳಗಿಳಿಯಬೇಡಿರಿ! ಸುಮ್ಮನೆ ಕೂತುಕೊಳ್ಳಿ ' ಎಂದು ದರ್ಪದಿಂದ ಕೂಗಿದನು. ಇಂಥ ಪೊಳ್ಳು ಬೆದರಿಕೆಯ ಬೆಲೆಯು ಅವನಿಗೆ ಗೊತ್ತು. ಡಿಮಿಟ್ರಿಯು ಅದನ್ನು ಲಕ್ಷಿಸದೆ, ನೆಟ್ಟಗೆ ಬಂಡಿಯ ಹತ್ತಿರ ಹೋಗಿ, ಅದರ ಹಿಂಭಾಗದಮೇಲೆ ಕೈಯಿಟ್ಟು ಒಳಗೆ ಇಣಿಕಿಹಾಕಿದನು. ಮೈಯೊಳಗೆ ಕುರಿ-ಉಣ್ಣೆಯ ಕೋಟು, ತಲೆಗೆ ಉಣ್ಣೆಯ ಟೊಪ್ಪಿಗೆ, ತಲೆಯಿಂದ ಕುತ್ತಿಗೆಯ ಸುತ್ತ ಒಂದು ಕರವಸ್ತ್ರವನ್ನು ಕಟ್ಟಿಕೊಂಡು ನರಳುತ್ತ ಬಿದ್ದಿರುವ ತನ್ನ ಮಿತ್ರನನ್ನು ನೋಡಿದನು. ಮುಖದ ಮೇಲೆ ಚಿವುಟಿದರೂ ಹನಿ ರಕ್ತವಿಲ್ಲ. ಒಳಗೆ ಹೂತುಕೊಂಡು, ತೆರೆದರೆ ಭೀಕರವಾಗಿ ಕಾಣಿಸುವ ಕಣ್ಣುಗಳು, ಪಚ್ಚುಬಡಿದ ಗಲ್ಲುಗಳು, ಮುಖದಲ್ಲೆಲ್ಲ ಎದ್ದುಕಾಣಿಸುವ ಕೂದಲು ಮೂಗು. ಈ ಸ್ಥಿತಿಯಲ್ಲಿ ಅವನು ಕಣ್ಣೊಳಗೆ ಜೀವ ಹಿಡಿದಂತೆ ಮಲಗಿದ್ದ. ಡಿಮಿಟ್ರಿಯು ಬಹು ಕಳವಳದಿಂದ ' ಈಗ ಹೇಗಿದೆ ? ' ಎಂದು ಗಟ್ಟಿಸಿ ವಿಚಾರಿಸಿದಾಗ ಅವನು ಮಾತನಾಡಲಿಕ್ಕಾಗದೆ, ಮುಖದ ಮೇಲೆ ಕೂಡುವ ನೊಣಹುಳಗಳನ್ನು ಜಾಡಿಸಿಕೊಂಡು ಸಣ್ಣ ದನಿಯಿಂದ ಮುಖ ಕಿವುಚಿ ಏನೋ ಮಾತಾಡಿದಂತೆ ಮಾಡಿ ಕಣ್ಮುಚ್ಚಿದನು. ಬಂಡಿಯು ಅತ್ತಿತ್ತ ಅಲ್ಲಾಡುತ್ತಿರುವದರಿಂದ, ಅದರ ಪೆಟ್ಟುಗಳನ್ನು ಸಹಿಸುವದರಲ್ಲಿಯೇ ಅವನಿಗೆ ಸಾಕುಬೇಕಾದಂತೆ ಕಾಣಿಸಿತು. ಬದಿಯಲ್ಲಿಯೇ ಕುಳಿತ ಮೇರಿಯು ಡಿಮಿಟ್ರಿಯನ್ನು ಚಿಂತೆಗಣ್ಣಿನಿಂದ ನೋಡಿದಳು. ತನ್ನ ಗೆಳೆಯನು ಸಾವಿನ ಮಡಿಲಲ್ಲಿ ಬಿದ್ದಿರುವ ನೋಟವು ಡಿಮಿಟ್ರಿಗೆ ಬಹು ಕಸವಿಸಿಯನ್ನುಂಟು ಮಾಡಿತು. ಅವರಿವರ ಗೆಳೆತನವೆಂಬುದು ತೀರ ಹೊಸದಿದ್ದರೂ, ಅಂತಃಕರಣ

ಗಳ ಕೂಡುವಿಕೆಯಿಂದ ಬಾಲ್ಯದ ಗೆಳೆಯರಷ್ಟು ಅವರಲ್ಲಿ ಜೀವಾಳವು ಬೆಳೆ ದಿತ್ತು. ಹೋಗುವಾಗ ಡಿಮಿಟ್ರಿಯು ಮತ್ತೊಮ್ಮೆ ಅವನ ಕಿವಿಯಹತ್ತರ ತನ್ನ ಮುಖ ಒಯ್ದು ' ನಾನು ಹೋಗಿಬರುತ್ತೇನೆ. ಇನ್ನೊಮ್ಮೆ ಕಾಣುವೆ. ' ಎಂದು ಗಟ್ಟಿಯಾಗಿ ಕೂಗಿ ಮಾತನಾಡಿ, ತನ್ನ ಬಂಡಿಯಲ್ಲಿ ಕುಳಿತು ಹೊರ ಟನು. ಒಂದು ಕೂಗಳತೆ ಮುಂದೆ ಹೋಗುವದರೊಳಗಾಗಿ ತನ್ನ ಬಂಡಿಯು ನಡೆದಿರುವ ಎದುರಿನಲ್ಲಿಯೇ ಕಟೂಷಳು ಮೈಮೇಲೆ ನೀಲೀ ಶಾಲು ಹೊತ್ತು ಕೊಂಡು ಸಿಮನ್ಸನ್ನನೊಡನೆ ಮಾತಾಡುತ್ತ ಒಳ್ಳೇ ಭರದಿಂದ ನಡೆದು ದನ್ನು ಡಿಮಿಟ್ರಿಯು ಕಂಡನು. ಅವರೂ ಇವನನ್ನು ಕಂಡು ವಾಡಿಕೆಯಂತೆ ' ನಮಸ್ಕಾರ ' ಅಂದರು. ಅವರಿಗೆ ತಾನೂ ನಮಸ್ಕಾರ ಅಂದು, ತನ್ನ ಬಂಡಿಯನ್ನು ಮುನ್ನಡಿಸಿದನು.

ತನ್ನ ಸ್ನೇಹಿತನು ಕ್ಷಯದಿಂದ ನವೆಯುತ್ತಿರುವ ನೋಟ, ತನ್ನ ಮೊದಲಿನ ನಲ್ಲೆಯಾದ ಕಟೂಷಳು ತನ್ನ ಹೊಸ ನಲ್ಲನೊಡನೆ ಹೊಸ ಹುರುಪಿನಿಂದ ಕುಲು ಕುಲು ನಗುತ್ತ ಮಾತನಾಡುತ ನಡೆದಿರುವ ಗಡ ಗಡ ನಡಿಗೆ, ಇವೆರಡೂ ಅವನ ಮನಸಿನೊಳಗೆ ಉಳಿದು ಸುಳಿಸುಳಿದು, ಡಿಮಿಟ್ರಿಯ ಹೃದಯವನ್ನು ಒಂದೊಂದು ಬಗೆಯ ಭಾವನೆಗಳಿಂದ ತಟ್ಟಿ, ಅಲುಗಿಸಿ ಹೋಗುತ್ತಿದ್ದವು. ಇದರಿಂದ ಮನಸಿನಲ್ಲಿ ವಿಚಾರ-ತೆರೆಗಳೆದ್ದು ಮನವನ್ನು ಬಲುಪಟ್ಟಿಗೆ ಕದಡಿದ್ದವು. ಈ ಸ್ಥಿತಿಯಲ್ಲಿಯೇ ಅವನ ಬಂಡಿಯೂ ನಡೆಯು ತ್ತಿರಲು, ಮುಂದೆ ಒಂದು ಅಡವಿ ಹತ್ತಿತು. ದಾರಿಗುಂಟ ಇಮ್ಮಗ್ಗಲು ಹಸುರಾದ ಹೊಲಗದ್ದೆಗಳು; ಇವುಗಳನ್ನು ದಾಟಿ ಸ್ವಲ್ಪ ಮುಂದೆ ಹೋಗಲು, ಮುಂದೆಯೇ ನಿರಿಗೆಗಟ್ಟಿ, ಸಣ್ಣಾಗಿ ಶಾಂತವಾಗಿ ಹರಿಯುವ ನದಿಯು ಕಾಣಿ ಸಿತು. ಅತ್ತ ಕಡೆಯಿಂದ ನಾವೆಯೊಂದು ದಂಡೆಗೆ ಬರುವದರಲ್ಲಿತ್ತು. ನದಿಯ ದಂಡೆಯಲ್ಲಿ ೮-೧೦ ಬಂಡಿಗಳು ನಿಂತಿದ್ದವು. ಜನರು ನಾವೆ ಬರುವ ದಾರಿ ಯನ್ನೇ ಕಾಯುತ್ತಿದ್ದರು. ಒಂದು ಕ್ಷಣದಾಚೆ ಎಲ್ಲಿಯೋ ದೂರದಲ್ಲಿದ್ದಂತೆ ಕಾಣಿಸುತ್ತಿದ್ದ. ನಾವೆಯೂ ಸೆಳವಿಗುಂಟ ಸರ್‍ರನೆ ಬರುವಾಗ ಅಂಬಿಗನು ತನ್ನ ಕೈಯಲ್ಲಿಯ ಹುಟ್ಟನ್ನು ಅಲ್ಲಿಯೇ ಬಿಟ್ಟು, ಬದಿಯಲ್ಲಿದ್ದ ಉದ್ದವಾದ ಗಣೆಯನ್ನು ಜಗ್ಗನೆ ತೆಗೆದುಕೊಂಡು ತನ್ನ ನುರಿತ ಕೈಗಳಿಂದ ಬುಡಮುಟ ನೀರೊಳಗೆ

ಬಲವಾಗಿ ಸಿಕ್ಕಿಸಿ, ಮುನ್ನಡೆಯುವ ನಾವೆಯನ್ನು ದಂಡೆಗೆ ತಿರುಗಿಸಿದನು. ಕೆಳಗೆ ನಿಂತವರು ತ್ವರೆಮಾಡಿ ತಮ್ಮ ತಮ್ಮ ಸಾಮಾನುಗಳನ್ನು ಒಂದೊಂದಾಗಿ ನಾವೆಯಲ್ಲಿ ಹೇರಹತ್ತಿದರು. ಡಿಮಿಟ್ರಿಯೂ ಕೂತುಕೊಂಡ. ಜನರು, ಕುದುರೆ, ಸಾಮಾನುಗಳಿಂದ ನಾವೆಯು ತುಂಬಿತು. ಇನ್ನೂ ಕೆಲವರು ಕೆಳಗಿದ್ದರು. ತಮ್ಮನ್ನೂ ಕುಳ್ಳಿರಿಸಿಕೊಳಲಿಕ್ಕವರು ಅಂಬಿಗನಿಗೆ ಒಂದೇ ಸವನೇ ಚಾಲಿವರಿಯುತ್ತಿದ್ದರೂ, ಅದನ್ನವನು ಲೆಕ್ಕಿಸದೆ, ನಾವೆಯನ್ನು ಮತ್ತೆ ಹರಿಬಿಟ್ಟನು. ಈಗ ನಾವೆಯಲ್ಲಿ ಇಷ್ಟು ಜನರು ಕುಳಿತಿದ್ದರೂ, ಎಲ್ಲರೂ ಸ್ತಬ್ಧ. ಕುಳಿತವರಲ್ಲಿ ಕೆಲವರು ಆ ಅಂಬಿಗನ ಚಟುವಟಿಕೆಗಳನ್ನು, ಕೆಲವರು ಶಾಂತವಾಗಿ ತೆರೆತೆರೆಗೊಂಡು ಹರಿಯುತ್ತಿದ್ದ ಹೊಳೆಯನ್ನು, ಮತ್ತೆ ಕೆಲವರು ಸುತ್ತುಮುತ್ತಣ ನೋಟವನ್ನು ನೋಡುತ್ತ ಇದ್ದರು. ಅಲ್ಲಿ ಅಂಬಿಗನ ಬೂಟುಗಳ ಸಪ್ಪಳ, ಕಾಲು ಝಾಡಿಸುತ್ತ ನಿಂತ ಕುದುರೆಗಳ ಸಪ್ಪಳ ಇವೆರಡರ ಹೊರ್ತು ಇನ್ನಾವ ಸಪ್ಪಳವೂ ಕೇಳಿಸುತ್ತಿರಲಿಲ್ಲ.

ಜನರ ದಟ್ಟಣೆಯಾದ್ದರಿಂದ ಡಿಮಿಟ್ರಿಗೆ ನಾವೆಯ ಒಂದು ಬದಿಗೆ ಸ್ಥಳ ಸಿಕ್ಕಿತ್ತು. ಅವನ ನೋಟವೆಲ್ಲ ನದಿಯ ಕಡೆಗೇ ಇದ್ದರೂ, ಸಾಯಲಿಕ್ಕಾದ ತನ್ನ ಮಿತ್ರನು ತಲೆಯಲ್ಲಾಡಿಸುವದು, ಅವನು ಮಲಗಿರುವ ಬಗೆ, ನರಳುತ್ತ ಗುಣು ಗುಣು ಮಾತನಾಡುವದು ಮತ್ತು ಕಟೂಷಳು ಒಳ್ಳೇ ಒತ್ತರದಿಂದಲೂ ಹುರುಪಿನಿಂದಲೂ ಸಿಮನ್ನನೊಡನೆ ಮಾತನಾಡುತ ನಡೆದಿರುವದು, ಇವೆರಡು ದೃಶ್ಯಗಳು ಅವನ ಮನಸನ್ನು ಬಿಡಲಾರದೆ ಸೆರೆಹಿಡಿದಿದ್ದವು. ಅವನಿಗೂ ಅವುಗಳ ನೆನಪಿನಲ್ಲಿ ಒಮ್ಮೆ ಆನಂದ, ಇನ್ನೊಮ್ಮೆ ದುಃಖ ಇದೇ ಬಗೆಯ ಹೊಯ್ದಾಟದಲ್ಲಿ ನಡೆದಿರಲು, ಮುಂದಿರುವ ಹಳ್ಳಿಯ ಚರ್ಚ (ಕ್ರಿಶ್ಚನರ ಗುಡಿ) ದೊಳಗೆ ಗಣ ಗಣ ಎಂದು ಗಂಟೆಯ ಸಪ್ಪಳವಾಯಿತು. ಎಲ್ಲರೂ ತಮ್ಮ ತಮ್ಮ ತಲೆಯ ಮೇಲಿನ ಟೊಪ್ಪಿಗೆ ತೆಗೆದರು. ಮತ್ತು ಅಲ್ಲಿಯೇ ಪ್ರಾರ್ಥನೆ ನಡಿಸಿದರು. ಡಿಮಿಟ್ರಿಯ ಬಳಿಯಲ್ಲಿಯೇ ಒಬ್ಬ ಗಿಡ್ಡ ಮುದುಕ ಕುಳಿತಿದ್ದ. ಇವನನ್ನು ಇಲ್ಲಿಯ ತನಕ ಡಿಮಿಟ್ರಿಯು ನೋಡಿರಲಿಲ್ಲ. ಆದೇಕೋ ಈಗ ಅವನ ಕಡೆಗೆ ಡಿಮಿಟ್ರಿಯ ಕಣ್ಣು ಹೋಯಿತು. ಅವನೂ ಇವನನ್ನು

ನೋಡಿದ. ಕೆದರಿ ಗುಂಜು ಗುಂಜಾಗಿರುವ ಎಣ್ಣೆ ಕಾಣದ ಅವನ ತಲೆ, ನಿಶ್ಚ ಲವಾದ ಕಣ್ಣುಗಳು, ಆ ಕಣ್ಣುಗಳಲ್ಲೇನೋ ಒಂದು ನಿಚ್ಚಟದ ಭಾವ, ಬೆಳಕು, ಹಲವೆಡೆ ತೇಪೆಗಳನ್ನು ಹಚ್ಚಿರುವದೊಂದು ಕೋಟು ಮೈಯಲ್ಲಿ, ಅಂಥದೇ ಒಂದು ಚಲ್ಲಣ, ಕಾಲಲ್ಲಿ ಹರಕು ಬಣ್ಣಗೆಟ್ಟ ಜೋಡುಗಳು, ಹೆಗಲ ಮೇಲೊಂದು ಹಸಿಬೆ, ಹಲವು ದಿನ ಬಳಸಿ ಬೆವರಿನಿಂದ ನಾರುವದೊಂದು ಟೊಪ್ಪಿಗೆ, ಇಂತಿರುವ ಮುದುಕನನ್ನು ಡಿಮಿಟ್ರಿಯ ಆಳು ನೋಡಿ ' ಏನು? ಮುದುಕಾ! ನಿನಗೆ ಪ್ರಾರ್ಥನೆ-ಗೀರ್ತನೆ ಬೇಡೇನಪ್ಪಾ!' ಎಂದು ಹಾಸ್ಯ ದಿಂದ ವಿಚಾರಿಸಿದನು. ಮುದುಕನು ಕೊಂಚ ಗಡಸುದನಿಯಿಂದ ' ಯಾರಿಗೆ ಪ್ರಾರ್ಥಿಸುವದು? ಏನದು ಸಮಾಚಾರ?' ಎಂದು ಒಂದೊಂದೇ ಶಬ್ದ ಗಟ್ಟಿಸಿ ಗಟ್ಟಿಸಿ ನುಡಿದನು. ಅವನ ಮಾತುಗಳಲ್ಲಿಯ ನಿಶ್ಚಯವೇ ಕಣ್ಣು, ಮೂಗು, ತುಟಿ, ಹುಬ್ಬ ಮುಂತಾದವುಗಳಲ್ಲಿ ಎದ್ದು ಕಾಣುತ್ತಿತ್ತು.

' ಯಾರಿಗೆ ಪ್ರಾರ್ಥಿಸುವದೆಂದರೇನಪ್ಪಾ! ಎಲ್ಲರೂ ಯಾರಿಗೆ ಪ್ರಾರ್ಥಿಸು ವರು? ದೇವರಿಗೆ ಅಷ್ಟೇ!' ಎಂದು ಭೋಳೇತನದಿಂದ ಅವನು ನುಡಿದನು.

' ನೀವು ಪ್ರಾರ್ಥಿಸುವ ದೇವರನ್ನಷ್ಟು ನನಗೆ ತೋರಿಸಬಾರದೇ? ಎಲ್ಲಿ? ನೋಡೋಣ. ಅವನೆಲ್ಲಿರುವನು? ಎಂದು ಮುದುಕನು ಒಳ್ಳೆ ಬಿಗು ಮೊಗದಿಂದ ತುಡರಿದನು. ಅವನು ಇದನ್ನೆಲ್ಲ ಮಾತಾಡುತ್ತಿರುವಾಗ ' ಇವ ನೇನು ಸಾಮಾನ್ಯ ಮನುಷ್ಯನಲ್ಲ. ಇವನಲ್ಲೇನೋ ವಿಶೇಷ ಶಕ್ತಿ ಇದೆ ಎಂಬಂತೆ ಆ ಆಳಿಗೆ ಕಂಡುಬಂದು ' ಇವನನ್ನು ನಾನೇಕೆ ಕೆಣಕಿದೆನಪ್ಪಾ!' ಎಂಬುವ ಮಟ್ಟಿಗೆ ನಾಚಿಕೊಂಡು; ಆದಾಗ್ಯೂ, ಮನುಷ್ಯನ ಹೇವವೆಂಬುದು ಬಲು ಕೆಟ್ಟದು. ಕೂಡಿದ ಜನಗಳ ಮುಂದೆ ತನ್ನ ಅವಮಾನವಾಗುವದೆಂಬು ಬಗೆದು, ಮುಖವು ಹುಚ್ಚಿಟ್ಟಿದ್ದರೂ ಅವನಿವನಲ್ಲಿ ಹೀಗೆ ವಾದನಡೆಯಿತು.

' ಎಲ್ಲಿಂದರೆ ಏನು ಹೇಳಬೇಕು? ಆಕಾಶದಲ್ಲಿ.'

' ಮೇಲೆ ಹೋಗಿ ನೋಡಿ ಬಂದಂತೆಯೇ ಮಾತಾಡುತ್ತೀ ಅಲ್ಲಪ್ಪ!'

' ಹಂ ಹಾಗೆಂದರೆ! ನಾನು ನೋಡಿರಲಿ, ನೋಡದಿರಲಿ! ಅವನನ್ನು ಪ್ರಾರ್ಥಿಸಬೇಕೆಂದು ಎಲ್ಲರೂ ಹೇಳುವರಷ್ಟೇ!'

‘ ಎಲ್ಲರೂ ಹೇಳುವವರೇ ! ನೋಡಿದವರು ಯಾರು ? ಕೋಟಿಯೊಳಗೊಬ್ಬರೋ ಇಬ್ಬರೋ!’ ಹೀಗೆಂದು ನಿಚಟದ ಅಚ್ಚುಕಚ್ಚಿನ ಮಾತು ಆಡಿದನು.

‘ ಇದರ ಮೇಲಿಂದ ನೀನು ಕ್ರಿಶ್ಚನ್ನ ಅಲ್ಲದೆ ಗೊಡ್ಡುವೇದಾಂತಿ ಇರುವಂತೆ ಕಾಣುತ್ತದೆ; ಆದುದರಿಂದ. ನಿನ್ನೊಡನೆ ಮಾತಾಡುವದೇನು ? ’ ಎಂದು ಆಳುಮಗ ಸುಮ್ಮನಾದನು.

ಇವರಿಬ್ಬರ ಹರಟೆಯನ್ನು ಕೇಳಿ ಹತ್ತರ ಕುಳಿತವನೊಬ್ಬನು ನಕ್ಕನು.

ಮತ್ತೊಬ್ಬನು ಅದೇ ಮಾತನ್ನು ಮುಂದೆ ಸಾಗಿಸಿ ‘ ಏನು ತಾತಾ ! ಹಾಗಾದರೆ, ನಿನಗೇತರಲ್ಲಿ ವಿಶ್ವಾಸ ? ’ ಎಂದು ವಿಚಾರಿಸಿದ. ‘ ನನ್ನ ಬಿಟ್ಟು ಯಾರಲ್ಲಿಯೂ ವಿಶ್ವಾಸವಿಲ್ಲ. ನೋಡು ’ ಎಂದು ಎಳ್ಳಷ್ಟು ಅನುಮಾನಿಸದೆ ಮುದುಕ ನುಡಿದನು.

‘ ನಿನ್ನಲ್ಲಿ ನೀನು ನಂಬಿಗೆ ಇಡುವದೆಂತು ? ಅದು ಬಲು ಕಷ್ಟ? ಎಂದು ಇಷ್ಟೊತ್ತಿನವರೆಗೆ ನಡೆದ ವಾದವನ್ನು ತೆಪ್ಪಗೆ ಕೇಳುತಿದ್ದ ಡಿಮಿಟ್ರಿಯು ನಡುವೆ ಫಕ್ಕನೆ ಬಾಯಿಹಾಕಿದನು.

‘ ಏನೂ ಕಷ್ಟವಿಲ್ಲ. ನನ್ನ ಇಡಿಯ ಜೀವನವೇ ಹೀಗೆ ಕಳೆದು ಹೋಯಿತು ’ ಎಂದು ಖಂಡಿತ ನುಡಿಯಿಂದ ಕೈ ಎತ್ತಿ ಮುದುಕ ನುಡಿದನು.

‘ ಹಾಗಾದರೆ, ಬಗೆಬಗೆಯ ಮತಗಳು ಉಂಟಾದುದೆಂತು ? ’ ಡಿಮಿಟ್ರಿಯು ಮತ್ತೆ ಪ್ರಶ್ನಮಾಡಿದ.

ಮುದುಕನು ಸಮಾಧಾನದಿಂದಲೂ, ಮನಗಾಣಿಕೆಯಿಂದಲೂ, ‘ ಏಕೆಂದರೆ, ತಮ್ಮಲ್ಲಿಯೇ ಜನರಿಗೆ ನಂಬಿಗೆ ಇಲ್ಲವೆಂದು. ಪರರನ್ನು ನಂಬುತ್ತಿರುವರೆಂದು. ನಾನೂ ಈ ಜನಜಂಗುಳಿಯಂತೆ, ಹಲವು ದಿನ ಪರರನ್ನು ನಂಬಿದೆ. ಕೊಳಚಿಯಲ್ಲಿ ಸಿಕ್ಕು ದಾರಿಗಾಣದೆ ಬಲು ಪೇಚಾಡಿದೆ. ಭವಣಿಬಟ್ಟೆ. ಎಲ್ಲ ಮತದವರು ತಮ್ಮ ತಮ್ಮ ಮತವೇ ಹಿರಿದೆಂದು ಕಂಗುರುಡರಾಗಿ ದಾರಿ ಕಾಣದೆ ಗೋಳಾಡುವವರೇ ! ಮತಗಳು ಹಲವಿದ್ದರೂ, ಇವೆಲ್ಲವುಗಳ

ಜೀವಾಳ ಎಂಬುದು ಒಂದೇ. ಅದು ನಿನ್ನಲ್ಲಿದೆ, ನನ್ನಲ್ಲಿದೆ, ಎಲ್ಲರಲ್ಲಿದೆ; ಅದು ಕಾರಣವೇ ದೊಡ್ಡವರು 'ನಿನ್ನೊಳು ನೀನು ತಿಳಿದು ನೋಡು' ಎಂದು ಸಾರಿ ದೂರಿ ಕೈಯಲ್ಲಿ ಕಡ್ಡಿಕೊಟ್ಟು ಹೇಳುವದು.' ಎಂದು ಬಲ್ಲ ಬಲುಹಿನಿಂದಲೂ, ಎಲ್ಲರ ಕಿವಿಯಲ್ಲಿ ಈ ತ್ರಿಕಾಲಾಬಾಧಿತ ಸತ್ಯವು ಖಣಖಣಿಸಿ, ಅಂತರಂಗದ ಕದ ತೆರೆಯುವ ಛಲದಿಂದಲೂ ನುಡಿದನು. ಇದನ್ನು ನುಡಿವಾಗ ಅವನ ಕಣ್ಣುಗಳಲ್ಲಿ ಸತ್ಯದ ಕಿಡಿಯು ಮಿಂಚಿತು; ಮುಖದಲ್ಲಿ ಸತ್ಯದ ನೀರು ಚಿಮ್ಮಿತು; ದನಿಯಲ್ಲಿ ಸತ್ಯವು ಗುಡುಗಿತು; ತುಟಿಗಳಲ್ಲಿ ಸತ್ಯವು ಸುಳಿಯಿತು. ಕೇಳಿದವರಿಗೆ ಏನೋ ಕೇಳಬೇಕಾದ್ದನ್ನು ಕೇಳಿದಂತೆ, ನೋಡಬೇಕಾದ್ದನ್ನು ನೋಡಿದಂತೆ, ಮನಸಿಗೊಂದು ತೃಪ್ತಿ.

ಮತ್ತೆ ಡಿಮಿಟ್ರಿಯು 'ನೀವು ಈ ಮಾರ್ಗ ಹಿಡಿದು ಎಷ್ಟು ದಿನವಾಯಿತು?' ಅಂದನು.

"ನಾನೋ? ಓ-ಹೋ, ಎಷ್ಟೋ ದಿನ. ಅಂತೂ ಸಾಧಾರಣ ಇಪ್ಪತ್ತು ವರ್ಷ. ಅಂದಿನಿಂದಲೂ ಈ ತಲೆಹುಳಕ ಜನರು ನನ್ನನ್ನು ಒಂದಿಲ್ಲೊಂದು ಬಗೆಯಿಂದ ಹಿಂಸಿಸುತ್ತಿದ್ದಾರೆ. ಏಸೂಕ್ರಿಸ್ತನನ್ನ ಕಾಡಿದಂತೆ! ಒಮ್ಮೆಯಂತೂ ಈ ಘಟಿಂಗರು ನನ್ನನ್ನು ಹುಚ್ಚ ಎಂದು ಹುಚ್ಚಾಸ್ಪತ್ರೆ ಕಾಣಿಸಿದರು; ಆದರೆ ನಾನೋ ಇವರಿಗೆ ಈಡೇ! ಇವರೆಷ್ಟರವರು ನನ್ನ ಮಣಿಸಲಿಕ್ಕೆ! ನನ್ನ ಕೂದಲನ್ನೂ ಅಲುಗಿಸುವ ಯೋಗ್ಯತೆ ಇಲ್ಲ ಇವರಿಗೆ! ನನ್ನ ಹೆಸರನ್ನು ಸಹ ನಾನಿವರಿಗೆ ಗೊತ್ತು ಹತ್ತಗೊಟ್ಟಿಲ್ಲ. ಇನ್ನೇನು ಬೇಕು? 'ನಿನ್ನ ಹೆಸರೇ' ನೆಂದು ಕೇಳಿದರೆ, ಆದಕ್ಕೆ 'ಮನುಷ್ಯ' ಎಂದು ನನ್ನ ಮೊಂಡ ಉತ್ತರ. ವಯಸ್ಸೆಷ್ಟು? ಎಂದರೆ, ನಾನು ಹಿಂದೆ ಇದ್ದೆ, ಇಂದು ಇದ್ದೇನೆ, ಮುಂದೆ ಇರುವೆ, ಎಂದ ಮೇಲೆ ನನಗೇಕೆ ಆ ವಯಸ್ಸಿನ ಗಣನೆ!' ನಿನ್ನ ಹೆತ್ತವರು ಯಾರೆಂದರೆ, 'ಭೂಮಿಯೇ ತಾಯಿ, ದೇವರೇ ತಂದೆ; ಒಳ್ಳೇದು. ಝೂರನು ಯಾರೆಂಬದು ನಿನಗೆ ಗೊತ್ತೇ! ಎಂದರೆ, ನನ್ನ ಮಟ್ಟಿಗೆ ನಾನೂ ಝೂರನೇ!' ಎಂದು ಖಡಾಖಡಿಯಾಗಿ ಮಾತಿಗೆ ಮಾತು ಹೂಡಿದರೆ, ನನ್ನನ್ನು ಪೀಡಿಸುವರು." ಎಂದು ನುಡಿದನು.

'ಸರಿ. ಈಗ ನೀವು ಹೊರಟದ್ದು ಯಾವ ಕಡೆಗೆ?' ಎಂದು ಡಿಮಿಟ್ರಿ ಕೇಳಿದ.

'ದೇವರು ಒಯ್ದ ಕಡೆಗೆ!' ಎಂದು ನುಡಿದು, 'ಕೆಲಸ ಸಿಕ್ಕರೆ ನಾನು ದುಡಿಯುವೆ; ಇಲ್ಲವಾದರೆ ಬಿಕ್ಕೆ ಬೇಡುವೆ' ಎಂದು ಖಂಡತುಂಡಾಗಿ ನುಡಿದು ಹೆಮ್ಮೆಗಣ್ಣಿನಿಂದ ಜನರ ಕಡೆಗೆ ನೋಡಿದನು.

ಇಷ್ಟು ಮಾತು ನಡೆಯುವ ಹೊತ್ತಿಗೆ ನಾವೆಯು ಧಡಕ್ಕೆ ಮುಟ್ಟಿತು. ಕುಳಿತವರೆಲ್ಲರು ತಮ್ಮ ತಮ್ಮ ಸಾಮಾನುಗಳನ್ನು ಸಾವರಿಸಿಕೊಂಡು ಇಳಿಯುಲಿಕ್ಕೆ ಸಿದ್ಧರಾದರು. ಡಿಮಿಟ್ರಿಗೆ ಆ ಮುದುಕನ ಸ್ವಭಾವ, ನಡೆವಳಿಕೆಗಳನ್ನು ಕಂಡು ಆನಂದವೆನಿಸಿ, ತನ್ನ ಜೇಬಿನಲ್ಲಿ ಕೈಹಾಕಿ ತೆಗೆದು ಕೆಲ ಹಣ ಅವನಿಗೆ ಕೊಡಹೋದನು. ಅವನದು ಬಹು ಕಟ್ಟುನಿಟ್ಟಿನ ಸ್ವಭಾವ. ಡಿಮಿಟ್ರಿಯು ಕೈಮುಂದೆ ಮಾಡಿದ. 'ಅದೇನು?' ಎಂದು ಮುದುಕನು ಕೇಳಲು ಡಿಮಿಟ್ರಿಯು 'ಏನೋ ಕೈಲಾದ ಧರ್ಮ' ಎಂದನು. 'ಛೆ. ಛೆ. ಇದನ್ನೆಲ್ಲಾ ನಾನು ಮುಟ್ಟುವದಿಲ್ಲ. ಹೊಟ್ಟೆಗೆ ರೊಟ್ಟೆಕೊಟ್ಟರೆ ಮಾತ್ರ ಉಪಾಯವಿಲ್ಲೆಂದು ತೆಗೆದುಕೊಳ್ಳುವೆ.' ಎಂದು ಔದಾಸೀನ್ಯದಿಂದ ನುಡಿದನು. 'ಹಾಗಿದ್ದರೆ ಕ್ಷಮಿಸಿರಿ!' ಎಂದು ಡಿಮಿಟ್ರಿಯು ತನ್ನ ಚಾಚಿದ ಕೈಯನ್ನು ಹಿಂತೆಗೆದುಕೊಂಡನು.

'ಕ್ಷಮಾಪಣೆ ಕೇಳುವದೇಕೆ? ನೀವೇನು ನನಗೆ ಬೈದೀರಾ? ಹಾಗೇನೂ ತಿಳಿಯಬೇಡಿರಿ' ಹೀಗೆನುತ ಅವನು ತನ್ನ ಬೆನ್ನಮೇಲೆ ಹಸಿಬೆಯನ್ನಿಟ್ಟು ಕೊಂಡು ಕೆಳಗಿಳಿದನು.

ಆ ಮೇಲೆ ಡಿಮಿಟ್ರಿಯೂ ನಾವೆಯಿಂದ ಕೆಳಗಿಳಿದು ತನ್ನ ಆಳುಮಗನೊಡನೆ ಸಮೀಪವಿದ್ದ ಊರೊಳಗೆ ಹೋಗಿ, ಅಲ್ಲಿರುವ ಒಂದು ವಿಶ್ರಾಂತಿ ಗೃಹದಲ್ಲಿಳಿದುಕೊಂಡನು. ಕಳೆದ ಹಲವು ದಿನಗಳಿಂದ ಬರಿಯ ದಾರಿಯಲ್ಲಿಯೇ ಕಾಲ ಕಳೆದು, ಧರ್ಮಶಾಲೆಗಳಲ್ಲಿ ಇದ್ದುಕೊಂಡು ವೇಳೆಗಳೆದದ್ದರಿಂದ ಅವನು ಪಟ್ಟಣವಾಸದ ಸುಖವನ್ನು ಎಂದಾದರೂ ಕಂಡೇನೋ ಎಂದು ಬರಗೆಟ್ಟಿದ್ದ; ಆದುದರಿಂದ ಮೊದಲು ಅವನು ಸ್ನಾನದ ಮನೆಗೆ

ಸೀದಾ ನಡೆದು ಸ್ವಚ್ಛವಾಗಿ ಸ್ನಾನಮಾಡಿದನು. ಮೈ ಅರ್ಧಕರ್ಧ ಹಗು ರಾಯಿತು. ತರುವಾಯ್ತು ಬಟ್ಟೆಬರೆಗಳನ್ನು ಹಾಕಿಕೊಂಡು ಒಂದು ಕಪ್ಪು ಚಹ ವನ್ನು ತೆಗೆದುಕೊಂಡು ಅಧಿಕಾರಿಯ ಭೆಟ್ಟಿಗೆ ಹೊರಟನು. ವಿಶ್ರಾಂತಿಗೃಹದ ಒಡೆಯನಲ್ಲಿ ಅಂದವಾದ ಕುದುರೆಯ ಬಂಡಿಯು ಇತ್ತು. ಇದನ್ನು ಕಂಡು ಡಿಮಿಟ್ರಿಯು ಅಧಿಕಾರಿಯನ್ನು ಭೆಟ್ಟಿಯಾಗಿ ಬರುವ ಮಟ್ಟಿಗೆ ಅದನ್ನು ಕೊಡಕೇಳಿದನು. ಅವನೂ ಆಗಲಿ ಅಂದನು. ಸ್ವಲ್ಪ ಹೊತ್ತಿನಲ್ಲಿ ಮಿರಿಮಿರಿ ಮಿಂಚುವ ವ್ಹಿಕ್ಟೋರಿಯಕ್ಕೆ ಹೂಡಿದ ದೊಡ್ಡ ದೊಡ್ಡ ಕುದುರೆಗಳು ಖಟ್ ಖಟ್ ಎಂದು ಕಾಲು ಸಪ್ಪಳ ಮಾಡುತ್ತ ಬಂದವು. ಡಿಮಿಟ್ರಿಯೂ ಸಜ್ಜಾ ಗಿಯೇ ನಿಂತಿದ್ದ. ಅದರಲ್ಲಿ ಕುಳಿತು ಆಫೀಸಿಗೆ ನಡೆದನು. ಹದಿನೈದು ಇಪ್ಪತ್ತು ನಿಮಿಷಗಳಲ್ಲಿ ವ್ಹಿಕ್ಟೋರಿಯವು ಒಂದು ಭವ್ಯವಾದ ಬಂಗಲೆಯ ಮುಂದೆ ಬಂದು ನಿಂತಿತು. ಆದರ ಮುಂದೆ ವಿಶಾಲವೂ ಹೂ ಗಿಡಗಳಿಂದಲೂ ಮಘಮಘಿಸುವದೊಂದು ತೋಟ. ಕಾವಲುಗಾರನು ಅಲ್ಲಿಯೇ ಕಟ್ಟೆಯ ಮೇಲೆ ಕುಳಿತಿದ್ದ. ಡಿಮಿಟ್ರಿಯು ವ್ಹಿಕ್ಟೋರಿಯದಿಂದಿಳಿದು ನಾಲ್ಕು ಹೆಜ್ಜೆ ನಡೆದು ಅವನ ಕೈಯಲ್ಲಿ ತನ್ನ ಹೆಸರಿನ ಕಾಗದ ಕೊಟ್ಟ; ಅವನದನ್ನು ತೆಗೆದು ಕೊಂಡು ದಡದಡ ಅಟ್ಟವನ್ನು ಏರಿ, ತಿರಿಗಿಬಂದು ' ಮೇಲೆ ಬರಬೇಕಂತೆ. ' ಅಂದನು. ಡಿಮಿಟ್ರಿಯು ಮೇಲೆ ಏರಿಹೋದನು. ನಮಸ್ಕಾರ ಮಾಡಿ ಹತ್ತಿ ರವೇ ಇದ್ದ ಖುರ್ಚಿಯಮೇಲೆ ಕುಳಿತನು. ' ತಾವು ಇಷ್ಟು ದೂರಕ್ಕೆ ಬಂದ ಕಾರಣವೇನು? ' ಎಂದು ಡಿಮಿಟ್ರಿಗೆ ವಿಚಾರಿಸಿದ. ' ನನಗೆ ಸಂಬಂಧಿಸಿದ ಒಬ್ಬ ಹೆಂಗಸು-ಸೆರೆಯಾಳಿನ ಬಿಡುಗಡೆಗಾಗಿ ನಾನೀಗ ಇಷ್ಟು ದೂರ ಬರ ಬೇಕಾಯಿತು. ' ಎಂದು ಡಿಮಿಟ್ರಿಯು ಆ ಅಧಿಕಾರಿಗೆ ಬಹು ವಿನಯದಿಂದ ನುಡಿದನು.

' ಓಹೋ ! ನೀವು ಈ ವಿಷಯದ ಪ್ರಸ್ತಾಪವನ್ನೇ ಹಿಂದಕ್ಕೆ ನನ್ನ ಮುಂದೆ ಮಾಡಿದ್ದಿರಿ. ಪೀಟರ್ಸಬರ್ಗದಿಂದ ಇಷ್ಟರಲ್ಲಿಯೇ ಬರಬೇಕಾಗಿತ್ತು. ಆದೇಕೋ ಇನ್ನೂ ಬರಲಿಲ್ಲ—' ಹೀಗೆಂದು ತನ್ನ ಮೇಜಿನ ಮೇಲಿರುವ ಗಂಟೆಯನ್ನು ಬಾರಿಸಿದನು. ಒಳಗಿಂದ ಒಬ್ಬ ಮನುಷ್ಯ ಬಂದನು. ಅವನನ್ನು

ಕುರಿತು ಕೆಮ್ಮುತ್ತ ' ಇದು ನೋಡಿ. ಇವರು ಹೇಳುವ ಹೆಂಗಸಿನ ಹೆಸರನ್ನು ಬರಕೊಳ್ಳಿರಿ; ಮತ್ತು ಆಕೆಯ ಅರ್ಜಿಯ ಉತ್ತರ ಬರುವವರೆಗೆ ಆಕೆಯನ್ನು ಇದೇ ಊರಿನ ಸೆರೆಮನೆಯಲ್ಲಿಡಿರಿ ? ' ಎಂದು ತಿಳಿಸಿ, ಡಿಮಿಟ್ರಿಯೊಡನೆ ಬೇರೆ ಮಾತುಕತೆ ಆಡತೊಡಗಿದನು. ಕೆಲ ಹೊತ್ತು ಅಲ್ಲಲ್ಲಿಯ ಸಂಗತಿಗಳ ಹರಟೆ ಕೊಚ್ಚಿದ ಬಳಿಕ ಡಿಮಿಟ್ರಿಯು ' ಹಾಗಾದರೆ, ಬರುತ್ತೇನೆ. ' ಎಂದು ಬಹು ಮರ್ಯಾದೆಯಿಂದ ನುಡಿದು ಹೊರಡಲನುವಾದನು.

ಇಷ್ಟರಲ್ಲಿ ಅವನು ಡಿಮಿಟ್ರಿಯನ್ನು ತಡೆದು ' ನಿನ್ನೆ ಒಬ್ಬ ಇಂಗ್ಲೀಷ ಪ್ರವಾಸಿಯು ಇಲ್ಲಿಗೆ ಬಂದಿರುವರು. ಅವರು ಗಡಿಪಾರಿನ ಪ್ರಶ್ನವನ್ನು ಕುರಿತು ಬಹು ಆಳವಾಗಿ ಅಭ್ಯಾಸ ಮಾಡಿದವರಿದ್ದು, ಸೈಬೀರಿಯದಲ್ಲಿಯ ಸೆರೆಮನೆಗಳ ಸ್ಥಿತಿಯನ್ನು ನಿರೀಕ್ಷಿಸುವದು ಅವರ ಉದ್ದೇಶ. ಇಂದು ರಾತ್ರಿ ಇಲ್ಲಿಗೇ ಊಟಕ್ಕೆ ಬರುವವರಿದ್ದು, ನೀವೂ ಇಲ್ಲಿಗೇ ಊಟಕ್ಕೆ ಬಂದುಬಿಟ್ಟರೆ ಸರಿಯಾಗುವದು. ಬಂದುಬಿಡಿರಿ; ಮಾತ್ರ ನೀವು ಸರಿಯಾಗಿ ಐದು ಘಂಟೆಗೇ ಇಲ್ಲಿ ಇದ್ದೇ ತೀರಬೇಕು. ನನ್ನ ಹೆಂಡತಿಯು ಬಲು ಶಿಸ್ತಿನವಳು. ತಡಮಾಡ ಕೂಡದು ' ಎಂದು ಎಚ್ಚರಿಕೆ ಕೊಟ್ಟರು. ' ಆಗಲಿ ' ಎಂದು ಡಿಮಿಟ್ರಿಯು ಅಲ್ಲಿಂದ ನೇರವಾಗಿ ಪೋಸ್ಟಾಫೀಸಿಗೆ ನಡೆದನು. ತನ್ನ ಹೆಸರಿನ ಕಾಗದಗಳೇನಾದರೂ ಬಂದಿರುವವೋ ಹೇಗೆಂದು ವಿಚಾರಿಸಿದನು ಅಲ್ಲಿ ಕಾಗದಗಳಿಗೆ ಸ್ಟ್ಯಾಂಪ ಹೊಡೆಯುತ್ತ ಕುಳಿತ ಪೋಸ್ಟಖಾತೆಯ ಕೆಲಸಗಾರನನ್ನು. ಅವನು ಇವನನ್ನು ಚನ್ನಾಗಿ ನೋಡಿ 'ಹಂ. ತಡೆಯಿರಿ.' ಎಂದು ಹತ್ತಿರವೇ ಇದ್ದ ಕಾಗದಗಳ ಪುಡಿಕೆಯನ್ನು ಡಿಮಿಟ್ರಿಗೆ ಕೊಟ್ಟನು. ಆ ಪುಡಿಕೆಯಲ್ಲಿ ಕಾರ್ಡು, ಪಾಕೀಟು, ಮಾಸಪತ್ರಿಕೆಗಳು, ಒಂದೆರಡು ಸರಕಾರಿ ಲಖೋಟೆಗಳು ಇದ್ದವು. ಅವನ್ನೆಲ್ಲ ಕೈಯಲ್ಲಿ ತೆಗೆದುಕೊಂಡು, ಅಲ್ಲಿರುವ ಒಂದು ಬಾಕಿನ ಮೇಲೆ ಕುಳಿತು ಒಂದೊಂದನ್ನೇ ಒಡೆದು ಓದಿದನು. ಈ ಕಾಗದಗಳಲ್ಲಿಯೇ ಒಂದು ಸರಕಾರಿ ಲಖೋಟೆಯಲ್ಲಿ ಹಾಕಿ ರಜಿಸ್ಟರ ಮಾಡಿದ ಕಾಗದ ವಿತ್ತು. ಅದರೊಂದು ಮೂಲೆಗೆ ಕೆಂಪನ್ನ ಟಿಕೀಟು ಹಚ್ಚಿದ್ದು ಅದು ಢಾಳಾಗಿ ಎದ್ದು ಕಾಣಿಸುತ್ತಿತ್ತು. ಅದನ್ನೊಡೆದು ನೋಡಿದೊಡನೆ ಡಿಮಿಟ್ರಿಯ ಮುಖ

ಕೆಂಪೇರಿ, ಮೈ ತಣ್ಣಗಾಯಿತು. ಕಟೂಷಳು ಮಾಡಿದ ಅರ್ಜಿಯನ್ನು ಧಿಕ್ಕರಿಸಿರಲಿಕ್ಕಿಲ್ಲವಷ್ಟೇ? ಹೀಗೆಂದು ಅದನ್ನು ಗಡಿಬಿಡಿಯಿಂದ ಅಲ್ಲಲ್ಲಿ ಓದಿ ನೋಡಿ ಉಸ್ಸೆಂದು ನಿಟ್ಟುಸಿರುಬಿಟ್ಟನು. ಅರ್ಜಿಗೆ ಅನುಕೂಲವಾದ ಉತ್ತರವೇ ಬಂದಿತ್ತು. ಕಟೂಷಳ ಮೊದಲಿನ ಗಡಿಪಾರಿನ ಕಠಿಣಶಿಕ್ಷೆಯನ್ನು ಕಡಿಮೆ ಮಾಡಿ ಸೈಬೀರಿಯದೊಳಗೇ ಎಲ್ಲಿಯಾದರೂ ಇಡಬೇಕೆಂದು ಗವ್ಹರ್ನರನ ಆಜ್ಞೆಯಾಗಿತ್ತು. ಅದನ್ನೋದಿ ಡಿಮಿಟ್ರಿಯು ಮೈಮೇಲಿನ ಭಾರವಾದ ಒಜ್ಜೆಯನ್ನು ಒಮ್ಮಿಂದೊಮ್ಮೆ ಯಾರೋ ಇಳಿಸಿಕೊಂಡಷ್ಟು ಹಗುರಾಯಿತು ದೇಹಕ್ಕೆ–ಮನಸಿಗೆ.

ಆ ದಿನವೆಂದರೆ, ಡಿಮಿಟ್ರಿಗೆ ಒಳ್ಳೇ ಆನಂದದಲ್ಲಿ ಹೋಯಿತು. ಆಕೆಗೆ ತಾನು ಮಾಡಬೇಕೆಂದ ಹಿತವು ಕೆಲಮಟ್ಟಿಗಾದರೂ ಸಾಧಿಸಿತೆಂದು ಒಂದು ಸಮಾಧಾನ; ಆದರೆ, ಕೂಡಲೇ, ಆಕೆಯ ಮುಂದಿನ ಆಯುಷ್ಯದ ವಿಚಾರವೇ ನೆಂಬುವ ಕಲ್ಪನೆಗಳು ಅವನ ಮನಸಿನಲ್ಲಿ ಮೆಲ್ಲಗೆ ಧುಮುಕಲಾರಂಭಿಸಿದಾಗ ' ಥು: ನನಗೇಕೆ ಅದೆಲ್ಲ ಗೊಡವೆ ? ಹೀಗೆಂದು ಮನಸಿನೊಳಗೆ ಉಕ್ಕೇರುವ ವಿಚಾರತೆರೆಗಳನ್ನು ಕೊಡವಿಹಾಕಿದ. ' ಮೊದಲು ಈ ಸಂತೋಷದ ಸುದ್ದಿಯನ್ನು ಆಕೆಗೆ ತಿಳಿಸಲಿಕ್ಕೆ ಬೇಕು. ' ಎಂದು ಅತ್ತಕಡೆ ಹೊರಟನು.

ಸೆರೆಮನೆಯಲ್ಲಿದ್ದ ಕಟೂಷಳ ಶಿಕ್ಷೆ ಕಡಿಮೆಯಾಗುವ ಬಗ್ಗೆ ಗವ್ಹರ್ನರರಿಂದೇನೂ ಹುಕುಮು ಬಂದಿರದಿದ್ದರೂ, ಹಲವು ಸಾರೆ ಸೆರೆಮನೆಗೆ ಹೋಗಿದ್ದರಿಂದ ಡಿಮಿಟ್ರಿಗೆ ಸೆರೆಮನೆಯೆಂದರೆ, ತನ್ನ ಮನೆಯಂತಾಗಿತ್ತು; ಆದುದರಿಂದ ಸೆರೆಮನೆಯೊಳಗೆ ಹೋಗಿ ಆಕೆಯನ್ನು ಕಾಣುವದೆಂದರೆ, ಅವನಿಗ ದೇನೂ ಅಸಾಧ್ಯ ಮಾತು ಆಗಿರಲಿಲ್ಲ; ಇದನ್ನೆಲ್ಲ ವಿಚಾರಿಸಿಕೊಂಡು ಡಿಮಿಟ್ರಿಯು ಸೆರೆಮನೆಗೆ ಹೋಗಿ ಅಲ್ಲಿಯ ಅಧಿಕಾರಿಯನ್ನು ಕಂಡನು. ಅವನು ಬಹು ನಿಷ್ಠುರ. ಮೇಲಿನ ಅಧಿಕಾರಿಗಳಿಂದ ಅಪ್ಪಣೆಚೀಟಿ ತರದೆ ಸೆರೆಮನೆಯಲ್ಲಿ ಬಿಡಲಿಕ್ಕಾಗದು ಎಂದು ಕಟ್ಟಾನುವಾಗಿ ಹೇಳಿದನು. ಡಿಮಿಟ್ರಿಯು ಬಹು ಮಿದುನುಡಿಗಳಿಂದ ' ಹಿಂದಕ್ಕೆ ಹಲವು ಸಲ ಸೆರೆಯಾಳುಗಳನ್ನು ಭೆಟ್ಟಿಯಾಗಲಿಕ್ಕೆ ನಾನು ಹೋಗಿದ್ದಾಗಿದೆ; ಆಗೇನೂ ಅಪ್ಪಣೆಚೀಟಿ ಮುಂತಾ

ದ್ದನ್ನು ಒಯ್ದಿರಲಿಲ್ಲ; ಸಣ್ಣ ಪುಟ್ಟ ಸೆರೆಮನೆಗಳ ಮಾತಂತೂ ದೂರಿರಲಿ, ರಾಜಧಾನಿಗಳ ಸೆರೆಮನೆಯಲ್ಲಿ ಕೂಡ ಅಧಿಕಾರಿಗಳ ಚೀಟಿ ಇಲ್ಲದೆ ನಾನು ಹೋಗಿರುವೆನು,' ಎಂದು ಮನ-ಒಲಿಸುವ ಮಾತು ಆಡಿದನು.

ಸೆರೆಮನೆಯ ಇನ್ಸಪೆಕ್ಟರನು ಒಂಟಿಯ ಹಿಡಿತದವ. 'ಇರಬಹುದು. ನನ್ನ ಮಟ್ಟಿಗೆ ನಾನಂತೂ ನಿಮ್ಮನ್ನು ಈಗ ಒಳಗೆ ಬಿಡಲರಿಯೆ' ಎಂದು ಝಳ ಝಳ ಹೇಳಿಬಿಟ್ಟನು. ಇಷ್ಟೊಂದು ಮುರಿದು ಹೇಳಲಿಕ್ಕೆ ಆವನಿಗೊಂದು ಪ್ರಬಲಕಾರಣವಿತ್ತು; ಆದೇನಂದರೆ, ಸೆರೆಮನೆಯಲ್ಲಿ ವಿಷಮ ಜ್ವರದ ಪಿಡಗು ಬಲಿತದ್ದು.

ಆದೇನಿದ್ದರೂ, ಕಟೂಷಳನ್ನು ಕಂಡು, ಆಕೆಗೆ ಸಂತಸದ ಸುದ್ದಿಯನ್ನು ಹೇಳಬೇಕೆಂಬಾತುರವು ಡಿಮಿಟ್ರಿಯನ್ನು ಕೈಮುಚ್ಚಿ ಕುಳ್ಳಿರಗೊಡಲಿಲ್ಲ. ಆವನು ಆದೇ ಹುರುಪಿನಲ್ಲಿ ಗವ್ಹರ್ನರರ ಆಫೀಸಿಗೆ ಹೋಗಿ, ಹೈಕೋರ್ಟಿನವರು ಶಿಕ್ಷೆ ಕಡಿಮೆ ಮಾಡಿದ ತೀರ್ಪಿನ ಪ್ರತಿಯನ್ನು ಮಾಸ್ಕೋವಳಿಗೆ ಕಳಿಸಿರುವರೋ ಹೇಗೆಂದು ಕೇಳಲು ನೆಟ್ಟಗೆ ಅಲ್ಲಿಗೇ ಹೋದನು. ಅದಿನ್ನು ಇನ್ನೂ ಬಂದಿರಲಿಲ್ಲ. ಬೇಗ ತರಿಸಲಿಕ್ಕೆ ಅಲ್ಲಿಯ ಕಾಮದಾರರಿಗೆ ತಿಳಿಸಿ ತಾನು ಹೊರಗೆ ಬಂದು, ಗಡಿಯಾರ ನೋಡುವ ಹೊತ್ತಿಗೆ ಊಟದ ವೇಳೆಯಾಗಿತ್ತು; ಆದು ಕಾರಣ ಕಟೂಷಳ ವಿಚಾರದಲ್ಲಿಯೇ ಮುಳುಗಿದವನಾಗಿ ಲಗುಬಗೆಯಿಂದ ಅಧಿಕಾರಿಯ ಮನೆಗೆ ಹೊರಟನು.

ಜನರಲ್ಲನ ಮನೆಯಲ್ಲಿ ಅಂದು ಒಳ್ಳೇ ಅಟ್ಟಹಾಸದ ಕೂರೂಟ. ಕಟೂಷಳ ದೆಸೆಯಿಂದ ಸುಖವನ್ನು ತೊರೆದು ತಿರುಗಾಡಹತ್ತಿದಂದಿನಿಂದ ಇತ್ತೀಚೆ ಡಿಮಿಟ್ರಿಗೆ ಇಂತಹ ಅರಸೂಟವು ದೊರಕಿರಲಿಲ್ಲ. ಬೆಳಗು ಮುಂಜಾವು ಇಂಥ ಅರಸೂಟಗಳಲ್ಲಿಯೇ ಆಯುಷ್ಯ ಕಳೆದವನಿಗೆ ಇಂದಿನೂಟದ ವಿಜೃಂಭಣೆ, ಓರಣೆ, ರೀವಿಗಳೆಲ್ಲ ಹೊಸತಾಗಿ ಕಂಡವು. ಜನರಲ್ಲನ ಹೆಂಡತಿಯು ಹಳೆಯ ಕಾಲದವಳು. ಫ್ರೆಂಚಭಾಷೆಯನ್ನು ನೀರು ಹರಿದ ಹಾಗೆ ಮಾತಾಡುವಳು; ಆದರೆ ರಸಿಯನ್ ಭಾಷೆಯಾಡಲಿಕ್ಕೆ ಸ್ವಲ್ಪ ಎಡೆತಡೆ.

ಆಕೆಯ ಗಾಂಭೀರ್ಯದ ನಡೆನುಡಿಯಲ್ಲಿ ಸಿರಿವಂತಿಕೆಯೆಂಬುದು ಮುದ್ರಿತವಾಗಿತ್ತು. ಡಿಮಿಟ್ರಿಯನ್ನು ಬಲು ಆದರದೊಡನೆ ಬರಮಾಡಿಕೊಂಡು, ಅವನ ಪರಿಚಯವಿರುವಂತೆ 'ನಿಮ್ಮಂಥ ಜನರು ಬರುವದು ಬಹು ಅಪರೂಪ' ಎಂದು ಕೊಂಡಾಡಿದಳು. ಜನರಲ್ಲನ ಮನೆಯ ತಿಳಿವಿನ ಆದರಸತ್ಕಾರ, ಅರಿವಿನ ಮಾತುಕಥೆ, ಮನೆಯ ಕಣ್ಮಣಿಸುವ ಓರಣ-ಸೊಗಸು-ಸೊಬಗು, ರುಚಿರುಚಿಯಾದ ಮಿಷ್ಟಾನ್ನದ ಊಟ, ಪ್ರೀತಿಯ ಜನರ ಒಡನಾಟ, ಇವೆಲ್ಲವುಗಳಿಂದ ಅಂದಿನ ಊಟವೆಂದರೆ, ಡಿಮಿಟ್ರಿಗೆ ಸುಖದ ಕನಸು ಕಂಡಂತಾಯಿತು. ಜನರಲ್ಲನ ಮನೆಗೆ ಊಟಕ್ಕೆ ಬಂದ ಒಬ್ಬ ಇಂಗ್ಲಿಷ ಅತಿಥಿಗೂ ಇವನಿಗೂ ಸ್ನೇಹವಾಯಿತು. ಅವನಿಗೂ ಸೆರೆಮನೆಯ ಸ್ಥಿತಿ ನೋಡಬೇಕಾಗಿತ್ತು. ಜನರಲ್ಲನು ಅವರಿಬ್ಬರಿಗೂ ಸೆರೆಮನೆ ನೋಡಹೋಗಲು ಅಪ್ಪಣೆಚೀಟಿ ಕೊಡಲೊಪ್ಪಿದನು. ಡಿಮಿಟ್ರಿಯ ಕೆಲಸವಾಯಿತು. ಊಟವಾಗಿ ಕೊಂಚ ವಿರಾಮ ತೆಗೆದುಕೊಂಡು ಇಬ್ಬರು ತಮ್ಮ ಅಧಿಕಾರಿಯ ಅಪ್ಪಣೆ ಪಡೆದು ಮೋಟಾರ ಬಂಡಿಯಲ್ಲಿ ಕುಳಿತು ಸೆರೆಮನೆಗೆ ನಡೆದರು.

ಆಗ ಸಾಯಂಕಾಲ. ಅಲ್ಲಲ್ಲಿ ದೀಪಗಳು ಒಂದೊಂದಾಗಿ ಹತ್ತುವದರಲ್ಲಿದ್ದವು. ಡಿಮಿಟ್ರಿಯು ತನ್ನ ಇಂಗ್ಲೀಷ ಗೆಳೆಯನೊಂದಿಗೆ ಸೆರೆಮನೆಗೆ ಹೋಗುವ ಹೊತ್ತಿಗೆ ಕತ್ತಲೆ ಆಯಿತು. ಜನಸಂದಣಿಯಿಂದ ಎಲ್ಲಿಯೊ ಒತ್ತಟ್ಟಿಗೆ ದೂರದಲ್ಲಿರುವ ಸೆರೆಮನೆ. ಅದರ ಮುಖದ ಮೇಲೆ ಹಾಳು ಸುರಿಯುತ್ತಿತ್ತು. ಸಾಲಾಗಿರುವ ಕಿಟಕಿಗಳಲ್ಲಿ ದೀಪಗಳು ಮಿಣಿಮಿಣಿ ಕಾಣಿಸುತ್ತಿದ್ದವು; ಹಿಂಜಿದ ಹತ್ತಿಯಂತೆ ಬಿದ್ದಿರುವ ಮಂಜಿನಿಂದ ಅದರ ನೋಟವು ಇನ್ನಷ್ಟು ಔದಾಸೀನ್ಯಪೂರ್ಣವಾಗಿದ್ದಿತು.

ಹೆಬ್ಬಾಗಿಲಲ್ಲಿದ್ದ ಕಾವಲುಗಾರನು ನಿಟ್ಟಿಸಿ ಇಷ್ಟೊತ್ತಿನಲ್ಲಿ ಬಂದವರು ಯಾರೆಂದು ತನ್ನ ಬೆದರಿಕೆಯ ದನಿಯಿಂದ ಒತ್ತಿ ಕೇಳಿದನು. ಇಬ್ಬರು ತಮ್ಮ ಅಪ್ಪಣೆಚೀಟಿ ತೋರಿಸಿದರು. ಜನರಲ್ಲನಿಂದ ಅಪ್ಪಣೆ ಚೀಟಿ ತಂದವರೊಡನೆ ತಿಳಿಯದೆ ಕಾರಣವಿಲ್ಲದೆ ಒರಟುತನದಿಂದ ನಡೆದುಕೊಂಡುದಕ್ಕೆ ತನ್ನ ತನಗೇ ನಾಚಿಕೆ ಆಯಿತು; ಅದನ್ನು ತೋರಗೊಡದೆ, ಒಯ್ದು ಇನ್ಸಪೆಕ್ಟ

ರನ ಕೈಯಲ್ಲಿಟ್ಟನು. ಅವನು ದೀಪಕ್ಕೆ ಹಿಡಿದು ಓದಿಕೊಂಡು ಅವರಿಬ್ಬರನ್ನು ಕೊಂಚ ಅಚ್ಚರಿಗಣ್ಣಿನಿಂದ ನೋಡಿ, 'ಬನ್ನಿರಿ. ಒಳಗೆ ಹೋಗೋಣ' ಎಂದನು. ಒಂದೆರಡು ಅಂಗಳದಾಟಿ ತನ್ನ ಆಫೀಸಿಗೆ ಅವರನ್ನು ಕರೆದೊಯ್ದು, 'ನಿಮಗೆ ಯಾರನ್ನು ಕಾಣಬೇಕಾಗಿದೆ' ಎಂದು ವಿಚಾರಿಸಿದನು.

'ಮಾಸ್ಲೋವಾ ಕಟೂಷಳನ್ನು' ಎಂದು ಡಿಮಿಟ್ರಿಯು ತನ್ನ ಮಾತನ್ನೇ ಮುಂದು ಮಾಡಿದನು. ಕೂಡಲೇ ಅವನು ಮಾಸ್ಲೋವಳನ್ನು ಕರೆದುಕೊಂಡು ಬರಲಿಕ್ಕೆ ಸೆರೆಮನೆಯ ಅಧಿಕಾರಿಗೆ ಹೇಳಿಕಳಿಸಿದನು. ಇತ್ತ, ಇಂಗ್ಲಿಷ ಗೃಹಸ್ಥನೊಡನೆ ಮಾತಾಡತೊಡಗಿದ. ಇಂಗ್ಲೀಷ ಗೃಹಸ್ಥನಿಗೆ ರಸಿಯದ ಭಾಷೆ ತಿಳಿಯದು; ರಸಿಯದ ಇನ್ಸಪೆಕ್ಟರನಿಗೆ ಇಂಗ್ಲಿಷ ಬರದು; ಆದುದರಿಂದ ಡಿಮಿಟ್ರಿಯು ಅವರಿಬ್ಬರಾಡುವದನ್ನು ಅವರವರ ಭಾಷೆಯಲ್ಲಿ ಅರ್ಥ ಮಾಡಿ ಹೇಳಲಾರಂಭಿಸಿದ. ಹೀಗೆ ನಡೆದಿರುವ ಸಮಯಕ್ಕೆ ಕಟೂಷಳ ಹೆಜ್ಜೆಯ ಸಪ್ಪಳ ಕೇಳಿಸಿತು. ಜೇಲರನ ಹಿಂದಿಂದೆ ಆಕೆಯು ಒಳಗೆ ಕಾಲಿಕ್ಕಿದಳು. ಎಂದಿನಂತೆ ಆಕೆಯು ತನ್ನ ತಲೆಗೊಂದು ಬಟ್ಟೆಯನ್ನು ಕಟ್ಟಿದ್ದಳು; ಮೈಯಲ್ಲಿ ಸೆರೆಮನೆಯ ವಾಸ್ಕೋಟು ಇದ್ದೇ ಇತ್ತು. ಆಕೆಯು ಕಣ್ಣಿಗೆ ಬಿದ್ದೊಡನೆ ಇಷ್ಟೊತ್ತಿನವರೆಗೆ ತಣ್ಣಗೆ ಇದ್ದ ಮನವು ಉಚ್ಚಳಿಸಿತು. 'ಮದುವೆಯಾಗಿ ಮಕ್ಕಳುಮರಿಗಳನ್ನು ಹೆತ್ತು, ನಾಲ್ಕು ಜನರಂತೆ ನಾನೂ ಸಂಸಾರಿಯಾಗಬೇಕು.' ಎಂಬೀ ಆಸೆಯ ಬಲವಾದ ಹಂಬಲವು ಮುಂಚಿನಂತೆ ಚಿಮ್ಮಿತು. ಅದೇ ಆವನ ಮುಂದೆ ಕಟೂಷಳು ಒತ್ತರದ ನಡಿಗೆಯಿಂದ ಕೆಳ ಮುಖಮಾಡಿ ಹತ್ತಿರ ಬಂದು ನಿಂತಳು.

ಡಿಮಿಟ್ರಿಯು ಎದ್ದು ಕೈ ಹಿಡಿದು ಆಕೆಯನ್ನು ಸಂಪ್ರೀತಿಯಿಂದ ಕುಳ್ಳಿರಿಸಿಕೊಂಡ. ಆಕೆಯ ಮುಖದ ಮೇಲೆ ಪ್ರೀತಿಯ ಹೊಳಪು ಇರಲಿಲ್ಲ. ಕಿರಿಗಿ ಅದು ಕೆಲ ಮಟ್ಟಿಗೆ ಕಠೋರವಾಗಿತ್ತು. ನೋಟದಲ್ಲಿ ಹೇಯಭಾವವಿತ್ತು. ಡಿಮಿಟ್ರಿಯು ಆಕೆಯನ್ನು ಕುರಿತು 'ನಿನ್ನ ಶಿಕ್ಷೆಯು ಕಡಿಮೆ ಆದ ಸಂಗತಿಯು ನಿನಗೆ ಗೊತ್ತಾಗಿದೆಯೇ!' 'ಹೌದು. ಜೇಲರರು ಹೇಳಿದರು.' 'ಮೇಲಿ

ನಿಂದ ಅಪ್ಪಣೆಯು ಬಂದನಂತರ ನೀನು ನಿನ್ನ ಮುಂದಿನ ಆಯುಷ್ಯದ ವಿಚಾರಮಾಡುವದು ಅವಶ್ಯ. ಆದರ ಬಗ್ಗೆ ಆಗ ಯೋಚಿಸುವಾ." ಹೀಗೆಂದು ಅವನ ಬಾಯಿಂದ ಶಬ್ದಗಳು ಹೊರಡುವ ಹೊತ್ತಿಗೆ ನಡುವೆ ಬಾಯಿಹಾಕಿ, ಆಕೆಯು ' ಯೋಚನೆ ಏತರದು ? ಸಿಮನ್ನಸನ್ನರು ಇದ್ದಲ್ಲಿ ಇರುವೆ. ಅವರು ಹೋದಲ್ಲಿ ಹೋಗುವೆ. ' ಎಂದು ಉತ್ತರವನ್ನು ಸಿದ್ಧಮಾಡಿಟ್ಟುಕೊಂಡಂತೆ ಹುಬ್ಬುಗಳನೇರಿಸಿ ತಟ್ಟನೆ ನುಡಿದಳು. ' ಹೀಗೋ? ' ಎಂದು ಮಾತ್ರ ನುಡಿದು ಸೋಜಿಗಗಣ್ಣಿನಿಂದ ನೋಡಿ ಡಿಮಿಟ್ರಿಯು ಸುಮ್ಮನಾದ; ಆದರೂ ಒಳಗೆ ಅವನೆದೆಯು ಕೊಂಚ ಝಲ್ಲೆಂದಿತು. ' ಅವರು ತಮ್ಮ ಹತ್ತಿರವೇ ನನಗೆ ಇರಹೇಳಿದ್ದಾರೆ. ' ಹೀಗೆಂದು ಗಕ್ಕನೆ ನಿಂತು, ಆಕೆ ಕೊಂಚ ಹೆದರಿ ಸಂಕೋಚಪಟ್ಟಂತೆ ಮಾಡಿ, ಮತ್ತೆ ಧೈರ್ಯಗೊಂಡು ನನ್ನಂಥವಳನ್ನು ಅವರು ತಮ್ಮ ಹತ್ತಿರ ಇಟ್ಟುಕೊಳ್ಳುವದೇ ನನ್ನ ಪುಣ್ಯ. ನನಗಿನ್ನೇನು ಬೇಕು? ಎಂದು ತನ್ನ ವಾಸ್ಕೋಟಿನ ಅಂಚನ್ನು ಸುರುಳಿ ಹಾಕುತ ನುಡಿದಳು.

ಡಿಮಿಟ್ರಿಯು ಮನದಲ್ಲಿಯೇ ' ಈಕೆಯು ಮಾತು ಕೇಳಿದರೆ, ಸಿಮನ್ನ ಸನ್ನನ ಪ್ರೇಮಕ್ಕೆ ವಶಳಾಗಿದ್ದು, ಇನ್ನು ಮುಂದೆ ನನ್ನ ಉಪಕಾರವು ಈಕೆಗೆ ಬೇಡ ಎನಿಸುತಿರಬೇಕು; ಅಥವಾ ಒಂದುವೇಳೆ ನನ್ನನ್ನು ಪ್ರೀತಿಸುತ್ತಿದ್ದರೂ, ನನ್ನನ್ನು ಕಷ್ಟಕ್ಕೆ ಗುರಿಮಾಡಬಾರದೆಂದು, ಸಿಮನ್ನಸನ್ನನೊಡನೆ ಪ್ರೀತಿ ಬೆಳಿಸುತ್ತಿರಬೇಕು. ಇವೆರಡರಲ್ಲಿ ಯಾವುದೊಂದು ಮಾತು ನಡೆದಿರಲಿಕ್ಕೆ ಬೇಕು. ' ಹೀಗೆಂದುಕೊಂಡನು; ಆದರೂ ಅವನಿಗೆ ಬಾಯಿ ಮುಚ್ಚಿಕೊಂಡಿರಲಿಕ್ಕಾಗದೆ, ' ಅದೇನೇ ಇರಲಿ. ನಿನ್ನ ಮನವು ಅವನಲ್ಲಿ ಸಿಲುಕಿರುವದೋ ಹೇಗೆ ? ' ಎಂದು ಕೆದರಿ ಕೇಳಿದ. ಕಟೂಷಳು ಅವನನ್ನು ನೋಡದೆಯೇ ' ಮನವು ಸಿಲುಕಲಿ, ಸಿಲುಕದಿರಲಿ, ಅದೇನು ದೊಡ್ಡ ಮಾತು ? ಅದನೆಲ್ಲಾ ನಾನು ಬಿಟ್ಟದ್ದೇನೆ; ಅವನೊಳ್ಳೆಯ ಮನುಷ್ಯ. ಇಷ್ಟು ಮಾತ್ರ ತಿಳಿದಿದೆ. ಸಾಕು ನನಗೆ ' ಎಂದು ಕಾಲ್ಬೆರಳಿನಿಂದ ನೆಲದ ಮೇಲೆ ಏನೇನೋ ಕೊರೆದಂತೆ ಮಾಡುತ ನುಡಿದಳು. ಡಿಮಿಟ್ರಿಯಾದರೂ ' ಆದರಲ್ಲೇನೂ ಸಂದೇಹವಿಲ್ಲ. ಅವನೊಬ್ಬ ರಾಜಾಮನುಷ್ಯ. ' ಎಂದನು. ತರುವಾಯ

ಕಟೂಷಳು ಡಿಮಿಟ್ರಿಯನ್ನು ಕುರಿತು 'ತಮ್ಮ ಅಪೇಕ್ಷೆಯಂತೆ ನಡೆಯದ್ದಕ್ಕೆ ನೀವು ಮಾತ್ರ ನನ್ನನ್ನು ಕ್ಷಮಿಸಲಿಕ್ಕೆ ಬೇಕು.' ಹೀಗೆಂದು ಬಹು ಹೃದಯ ಸ್ಪರ್ಶಿಯಾದ ಮಾತುಗಳಿಂದ ಅವನ ಮುಖವನ್ನೇ ಹುಳು ಹುಳು ನೋಡ ಹತ್ತಿ, 'ಮತ್ತೆ, ನೀವು ಕೂಡ ಇಲ್ಲಿ ಇದ್ದೇ ಇರಬೇಕಲ್ಲಾ' ಎಂದು ನುಡಿ ದಳು; ಆ ಮೇಲೆ ಹೀಗೆ ಏನೋ ಯೋಚನೆ ಮಾಡಿದಂತೆ ಮೇಲಕ್ಕೆ ನೋಡಿ 'ಒಂದು ವೇಳೆ ನೀವು ಇಲ್ಲಿದ್ದರಾದರೂ ನಿಮಗೇನು ಸುಖ? ಈಗಾಗಲೇ ಸಾಕಷ್ಟು ಕಷ್ಟಪಟ್ಟಿರುವಿರಿ! ಇನ್ನಿಲ್ಲಿದ್ದು ಮಾಡುವದೇನು?' ಎಂದು ಮನಸಿನಲ್ಲಿದ್ದುದನ್ನು ಹೇಳಿಬಿಟ್ಟಳು. ಡಿಮಿಟ್ರಿಯು 'ನಾನು ಕಷ್ಟಪಟ್ಟಿದ್ದು ನನ್ನ ಹಿತಕ್ಕಾಗಿ. ನನ್ನಿಂದಾದರೆ, ಇನ್ನೂ ನಿನಗೆ ಕೈಲಾದ ಸಹಾಯ ಮಾಡು ತಲೇ ಇರುವೆ.' ಎಂದನು.

'ಇಷ್ಟು ದಿನ ಮಾಡಿದಷ್ಟು ಸಾಕು. ನೀವಿಲ್ಲದಿದ್ದರೆ, ನನ್ನ ಗತಿ ಏನಾಗುತ್ತಿತ್ತೋ ದೇವರೇ ಬಲ್ಲ' ಹೀಗೆ ಇನ್ನೂ ಏನೇನೋ ಆಡುವಷ್ಟರಲ್ಲಿ ಆಕೆಯ ಕುತ್ತಿಗೆಯ ಸಿರಗಳು ಬಿಗಿದವು. ನುಡಿಗಳು ನಡುಗಿದವು; ಡಿಮಿ ಟ್ರಿಯು ಆಕೆಯನ್ನು ಕನಿಕರಗಣ್ಣಿನಿಂದ ನೋಡಿ 'ಏನೇ ಆಗಲಿ, ನೀನು ನನ್ನನ್ನಿಷ್ಟು ಹೊಗಳಬೇಡ' ಎಂದನು. 'ನಮ್ಮ ಬರಿಯ ಮಾತುಗಳಿಂದೇನು? ಮೇಲಿರುವ ದೇವರಲ್ಲಿ ಆದರ ಲೆಕ್ಕ ಇದ್ದೇ ಇರುತ್ತದೆ. ಹೀಗೆನ್ನುವಾಗ ಆಕೆಯ ನೀರಲಗಣ್ಣಿನಲ್ಲಿ ಮುತ್ತಿನಂತೆ ನೀರು ಹೊಳೆದವು. ಕೈಯಿಂದ ಒತ್ತಿ ಒರಸಿ ಕೊಂಡಳು. 'ಎಂಥ ಹುಚ್ಚಿ ಹೆಂಗಸು ನೀನು?' ಎಂದು ಡಿಮಿಟ್ರಿಯು ಆಕೆಯನ್ನು ನೋಡಿ ಅಂದನು. ಕಟೂಷಳ ಕಣ್ಣುಗಳಿಂದ ನೀರು ಉದುರಿದವು. ಅದೇ ಹೊರಡುವ ಹೊತ್ತಾಯಿತು. ಆಕೆ ತನ್ನ ಸ್ಥಳದಿಂದ ಎದ್ದು, ಡಿಮಿಟ್ರಿ ಯನ್ನು ದುಃಖದಿಂದ ನೋಡಿದಳು. ಇಬ್ಬರ ಕಣ್ಣುಗಳು ಕೂಡಿ ಒಂದಾಗಿ ಪ್ರೇಮದೊಳಗೆ ಬೆರೆತುಹೋದವು. ಡಿಮಿಟ್ರಿಯು ಕೈಮುಂದೆ ಮಾಡಿದ. ಆಕೆಯು ಕೈಕೊಟ್ಟಳು. ಹಸ್ತಸ್ಪರ್ಶದಿಂದ ತಮ್ಮ ಪ್ರೇಮಸಂಗಮದ ಈ ಪ್ರವೇಶವನ್ನು ಪೂರ್ತಿಗೊಳಿಸಿದರು. ಡಿಮಿಟ್ರಿಯೊಡನೆ ಬಾಯಿಬಿಚ್ಚಿ ಮಾತಾ ಡುವಾಗ ಕಟೂಷಳಿಗೆ ಸ್ವಲ್ಪ ಕೆಡಕು ಅನಿಸಿದರೂ, ಮಾತಾಡಬೇಕಾದ್ದನ್ನು.

ಮಾತಾಡಿದ್ದು ನೆಟ್ಟಗಾಯಿತೆಂಬುದೊಂದು ಮನಸಿಗೆ ಸಮಾಧಾನವಾದರೂ, ಅವನಿಂದ ಅಗಲುವಾಗ ಜೀವ ಕಳವಳಿಸಿತು. ಇದೇ ಸ್ಥಿತಿಯಲ್ಲಿ ಜಕಜಕ ಜರಿಯುತ ಆ ಕೋಣೆಯಿಂದ ಕಾಲ್ದೆಗೆದಳು.

ಡಿಮಿಟ್ರಿಯು ಅಲ್ಲಿಯೇ ಗೋಡೆಗೆ ಆತುಕೊಂಡು ವಿಚಾರಮಗ್ನನಾಗಿ ಕುಳಿತನು. ಅದೇಕೋ ಅವನಿಗಿಂದು ಜೀವವೇ ಬೇಸರ. ಅವನ ಕಣ್ಣಿಗೆ ಮಬ್ಬು ಕವಿಯಿತು. ಒರಗಿದ್ದ ಹಾಗೆಯೇ ಗಾಢ ನಿದ್ದೆ.

ಇಷ್ಟರಲ್ಲಿ ಇನ್ಸಪೆಕ್ಟರನು ಇಂಗ್ಲಿಷ ಗೃಹಸ್ಥನನ್ನು ನೋಡಿ 'ಸೆರೆಮನೆ ನೋಡಬೇಕೋ,' ಎಂದು ವಿಚಾರಿಸಿದನು. ಈ ಮಾತಿಗೆ ಡಿಮಿಟ್ರಿಯು ಅಡಬಡಿಸಿಕೊಂಡು ಕಣ್ಣೊರಸಿಕೊಳ್ಳುತ ಎದ್ದನು. ಅವನು 'ಹೊರಡಿರಿ' ಅನ್ನುವದೇ ತಡ, ಇಬ್ಬರೂ ಅವನ ಹಿಂದೆ ಹೊರಟರು. ಸೆರೆಮನೆ, ಅಲ್ಲಿರುವ ಹಸಿದ, ಬಡವಾದ, ಸೋಮಾರಿಯಾದ, ಬೇನೆಯ, ಕಳೆಗುಂದಿದ, ಸೆರೆಯಾಳ ಗಳನ್ನೆಲ್ಲ ಇನ್ಸಪೆಕ್ಟರನು ಮ್ಯೂಝಿಯಂದೊಳಗಿಟ್ಟ ಪಶುಗಳಂತೆ ತೋರಿಸಿ ದನು. ಸೆರೆಮನೆಯಲ್ಲಿ ಅಲ್ಲಲ್ಲಿ ಪ್ರತಿಯೊಬ್ಬರ ಮೂಗಿಗೆ ಭಸ್ಸೆಂದು ಬಂದಡ ರುವ ಹೊಲಸು ವಾಸನೆ, ಎದೆ ಝಲ್ಲೆನಿಸುವ ನೋಟ, ಅವೆಲ್ಲವು ಡಿಮಿಟ್ರಿಗೆ ವಿಲಕ್ಷಣ ಹೇಯವನ್ನುಂಟುಮಾಡಿ ಹುರುಪುಗೆಡಿಸಿದವು. ಇದೆಲ್ಲ ಡಿಮಿ ಟ್ರಿಗೆ ಕನಸಿನಂತೆ ಕಾಣಿಸಿತು. ಅವನಿಗೆ ಇದಾವುದರ ಕಡೆಗೂ ಮನಸಿರಲಿಲ್ಲ.

ರಾತ್ರಿ, ಡಿಮಿಟ್ರಿಯು ತಾನಿರುತ್ತಿದ್ದ ಹಾಟೇಲಿಗೆ ಹೋದನು. ಊಟ ಮಾಡಿದನು. ಮಲಗಲಿಕ್ಕೆಂದು ತನ್ನ ಕೋಣೆಗೆ ಹೋದನು. ಮನವು ವಿಚಾರಗಳ ಬಿರುಗಾಳಿಗೆ ಸಿಕ್ಕು ಹೊಯ್ದಾಡುತ್ತಿದ್ದುದರಿಂದ ಅವನಿಗೆ ನಿದ್ದೆ ಬರಲ್ಲಿಲ್ಲ. ಎದ್ದು ಅತ್ತಿತ್ತ ಮೇಲು ಕೆಳಗೆ ನಾಲ್ಕು ಹೆಜ್ಜೆ ಅಡ್ಡಾಡಿದನು. ಕಟೂಷಳ ಸಂಬಂಧವಂತೂ ಪೂರಾ ಮುಗಿದೇ ಹೋಗಿತ್ತು; ಆದರೆ, ತಾನು ಇಷ್ಟೊತ್ತಿನವರೆಗೆ ಸೆರೆಮನೆಯಲ್ಲಿ ನೋಡಿದ ಭೀಕರ ನೋಟವು ಅವನ ಮನ ಸಿನಿಂದ ಮರೆಯಾಗದೆ, ತಿರುತಿರುಗಿ ಅದೇ ಬಂದು ಬಂದು ಕಣ್ಣುಗಳ ಮುಂದೆ ನಿಲ್ಲುತ್ತಿತ್ತು. ಹಾಳು ವಿಚಾರಗಳಿಂದ ಮನಸು ಕಲ್ಲಾವಿಲ್ಲಿಯಾಗಿ ಬೇಸತ್ತು ಬೇಲೀ ಹೊಕ್ಕನು.

ಜೀವ ಬಹು ಬೇಸರಾಯಿತು. ಉಸ್ಸೆಂದು ಹತ್ತರವಿದ್ದ ಮಂಚದ ಮೇಲೆ ದೀಪವನ್ನು ನೋಡುತ್ತ ಕುಳಿತನು. ಅಲ್ಲೊಂದು ಪುಸ್ತಕ. ಅದು ಯಾವನೋ ಒಬ್ಬ ಹಳೆಯ ಗೆಳೆಯನು ತನ್ನ ನೆನಪಿಗಾಗಿ ಕೊಟ್ಟ ಬೈಬಲ್ ಗ್ರಂಥ. ' ಮನಸಿನಲ್ಲಿ ಏಳುವ ಸಂಶಯಗಳನ್ನೆಲ್ಲ ಸಮಾಧಾನಗೊಳಿಸುವ ಉತ್ತರಗಳು ಬೈಬಲ್ಲಿನಲ್ಲಿ ಸಿಗುವವೆಂದು ಅನ್ನುವರು. ' ನಿಜವೋ ಹೇಗೋ ನೋಡೋಣ ಎಂದು ಸುಮ್ಮನೆ ಒಂದು ಪುಟ ತೆರೆದನು. ' ಹಸುಮಕ್ಕಳಂತೆ ಮನುಷ್ಯನ ಮನಃಸ್ಥಿತಿಯಾಗದೆ, ಅವನಿಗೆ ಸ್ವರ್ಗದೊಳಗೆ ಸ್ಥಳ ಸಿಗಲರಿಯದು. ಈ ಬಗೆಯ ಜ್ಞಾನದಿಂದ ಸಣ್ಣವನಾಗಿ ನಡೆಯುವವನೇ ದೊಡ್ಡವನು.' ಎಂಬ ಒಂದು ಅಮೃತ ಸುರಿಯುವ ವಚನವನ್ನೋದಿದ. ' ಹೌದು. ಹೌದು. ಇದೀಗ ಹರಿದಾಡುವ ಮಂಗಮನಸ್ಸನ್ನು ಸುಮ್ಮನಿರಿಸುವ ಮಂತ್ರ. ಇದರಲ್ಲೆಷ್ಟು ಸಮಾಧಾನ ಐದೆ! ಅಂದನು. ವಿನಯದಿಂದಿರುವಾಗ ತನಗಾಗುವ ಶಾಂತಿ-ಆನಂದದ ಸುಖ ವನ್ನು ಅವನು ಸವಿದವನಿದ್ದನು. ಅದನ್ನು ನೆನಸಿಕೊಂಡನು. ಹಾಯವೆನಿಸಿತು. ಹಾಗೇ ಮುಂದೆ ಓದಲಾಗಿ ' ನಿನ್ನೊಳು ನೀ ತಿಳಿದು ನೋಡು? ಎಂಬುವ ವಾಕ್ಯ ಕಣ್ಣಿಗೆ ಬಿತ್ತು. ಇವನ್ನು ನೋಡಿದಂತೆಲ್ಲ, ಇವುಗಳನ್ನು ಕುರಿತು ಆಳವಾಗಿ ವಿಚಾರಿಸಿದಂತೆಲ್ಲ, ಅವನಿಗೆ ಆನಂದವೇ ಆನಂದ. ಜಗದೊಳಗೆ ಕಾಣಿಸುವ ಕಷ್ಟ-ಸುಖವೆಂಬುದೆಲ್ಲವೂ ಮನುಷ್ಯನ ಅಜ್ಞಾನದಿಂದ, ತನ್ನಲ್ಲಿ ತಪ್ಪು ಇದ್ದು ಅದನ್ನು ತಿದ್ದಿಕೊಳ್ಳದೆ, ಪರರ ತಪ್ಪು ತಿದ್ದಲು ಪ್ರಯತ್ನಿಸಿ, ತಾನು ಉಳಿ ಮುಟ್ಟದ ಲಿಂಗದಂತೆ ಇರುವದರಿಂದ. ಮನುಷ್ಯನಿಗೆ ನಿಜ ಸುಖ ಮತ್ತು ಆನಂದವೆನಿಸಬೇಕೆಂದರೆ, ಅವನು ತನ್ನ ತಪ್ಪು ತಾನು ಮೊದಲು ನೋಡಿ ಕೊಂಡು ಅವನ್ನು ದೇವರ ಮುಂದೆ ತೋಡಿಕೊಳ್ಳಲಿಕ್ಕೆ ಬೇಕು. ಮನುಷ್ಯನ ದುಃಖಗಳು ಕಡಿಮೆಯಾಗಲಿಕ್ಕೆ ಇದೀಗ ವ್ಯಾವಹಾರಿಕ ದಾರಿಯು. ನಮಗೆ ಸುಖವಾಗಬೇಕೆಂದರೆ, ದೇವರು ಎಷ್ಟು ಸುಲಭ ದಾರಿಗಳನ್ನಿಟ್ಟಿರುವನು? ಆದರೂ ಕಂಗುರುಡರಾದ ನಮಗೆ ಜಗದೊಳಗಿನ ಒಳ್ಳೇ ದಾರಿಗಳು ಕಾಣಿಸದೆ ಕೆಟ್ಟ ದಾರಿಗಳೇ ಕಣ್ಣಿಗೆ ಬೀಳುವವು; ಆದರೂ ಕಣ್ಣು ತೆರೆದವನಿಗೆ ಎಲ್ಲವೂ ಸರಳ; ಆದರೆ ಅದು ತೆರೆಯಬೇಕೆಂದರೆ, ಎಷ್ಟೊಂದು ಕಷ್ಟ! ಎಷ್ಟು ಮೈ-ತಲೆ ಗಳು ಕಾಯ್ದು ತಪಸ್ಸು ಮಾಡಬೇಕಾಗುವದು? ಎದೆಯ ಗೂಡಿನಲ್ಲಿ ಕತ್ತಲೆ

ಕವಿದ ಮನುಷ್ಯನು ಎಷ್ಟು ಓದಿದರೇನು? ಬರೆದರೇನು? ತನ್ನ ತಾ ತಿಳಿಯು ದಿದ್ದರೆ ಎಲ್ಲವೂ ವ್ಯರ್ಥ! ' ಹೀಗೆ ಮನಸಿನಲ್ಲಿಯೇ ಅಂದುಕೊಳ್ಳುತ, ಮುಂದಿ ರುವ ದೀಪವನ್ನೇ ನಿಟ್ಟಿಸುತ ಕುಳಿತನು. ನಿಜಾನಂದದ ತೆರೆಗಳು ಮನಸಿನಲ್ಲಿ ಎದ್ದು, ಅವು ಉಕ್ಕುಕ್ಕಿ ಬರಲಾರಂಭಿಸಿದವು. ' ದೇವರು ನಮಗೇನು ಹೇಳಿ ಇಲ್ಲಿ ಕಳಿಸಿದ, ನಾವೇನು ಇಲ್ಲಿ ನಡಿಸಿರುವದು? ಬರಿಯ ಸುಖಪಡಲಿಕ್ಕೆ ನಾವು ಹುಟ್ಟಿರುವೆವೆಂದು ತಿಳಿದುಕೊಂಡಿರುವೆವಲ್ಲ! ಇದರಿಂದ ಎಲ್ಲವೂ ಕೆಟ್ಟು ದೇವರೇ ಮರೆಯಾಗಿರುವನು. ಇದರಿಂದ ಒಡೆಯನು ಹೇಳಿದ ಕೆಲಸವನ್ನು ಕೇಳದೆ, ಮಾಡದೆ ಮೈಗಳ್ಳನಾಗಿರುವ ಕೂಲಿಯಂತೆಯೇ ನಮ್ಮ ಗತಿಯಾಗು ವದು ಕಟ್ಟಿಟ್ಟ ಮಾತು. ನಾವು ಒಡೆಯನ ಮಾತನ್ನು ಪೂರಾ ಮರೆತಿರುವೆವು; ಇದೇ ಇಷ್ಟೆಲ್ಲ ದುಃಖಕ್ಕೆ ಕಾರಣ. ಅವನನ್ನು ಮರೆಯದೆ, ಅವನ ಮೇಲೆ ಕಣ್ಣಿಟ್ಟು, ಅವನಲ್ಲಿ ಮನವಿಟ್ಟು ಕೆಲಸ ಮಾಡುವದರಲ್ಲಿಯೇ ನಮ್ಮ ನಿಜವಾದ ಕರ್ತವ್ಯವಿದೆ. ಒಳ್ಳೇದು. ಒಂದು ಕೆಲಸ ಮುಗಿಯುವದರೊಳಗೆ ಇನ್ನೊಂದು ಕೆಲಸ ಪ್ರಾರಂಭವಾಯಿತಲ್ಲ! ' ಅಂದನು.

ಅಂದು ರಾತ್ರೆ ಪುನರ್ಜನ್ಮವಾದಂತಾಯಿತು ಡಿಮಿಟ್ರಿಗೆ. ಹೃದಯ ದಲ್ಲಿ ಝುಗ್ಗನೆ ಜ್ಞಾನದೀಪ ಬೆಳಗಿತು. ಅಂದಿನಿಂದ ಅವನ ಜೀವನದ ಗುರಿಯೇ ಬದಲಾಯಿತು. ಮಾಡುವ ಪ್ರತಿಯೊಂದು ಕೆಲಸ, ವಿಚಾರಿಸುವ ಪ್ರತಿಯೊಂದು ಮಾತನ್ನು ಅವನು ಬೆಳಕಿನಲ್ಲಿಯೇ ನಡಿಸಿದನು; ಹೀಗಾಗಿ ಎಲ್ಲೆಲ್ಲಿಯೂ ಬೆಳಕೇ ಬೆಳಕು.



ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ.

## ಆಶ್ರಯದಾತರು.



ದೇಶಭಕ್ತ ದೊಡ್ಡಮೇಟಿ ಅಂದಾನಪ್ಪನವರು ಜಕ್ಕಲಿ

ಜಿಲ್ಹಾ—ಧಾರವಾಡ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ

## ಆಶ್ರಯದಾತರು.



ಶ್ರೀ. ದೇಸಾಯಿ ಮಲ್ಹಾರರಾಯರು  ಹಳೇಹುಬ್ಬಳ್ಳಿ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ

## ಆಶ್ರಯದಾತರು.



ಶ್ರೀ. ಸರದಾರ ನಾಯಿಕಬಹಾದ್ದೂರ ದೇಸಾಯಿ

ಅಣ್ಣಾಸಾಹೇಬರು ಉರ್ಫ ವೀರಭದ್ರಪ್ಪನವರು

( ಚಚಡಿ ) ಬೆಳಗಾವಿ.

ಶ್ರೀಮಹಾವೀರ ಪ್ರೆಸ್ ಬೆಳಗಾವಿ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ.

## ಆಶ್ರಯದಾತರು.



ಶ್ರೀ. ಪಾಟೀಲ ಬಸನಗೌಡರು ತೋಲಗಿ ತಾ. ಖಾನಾಪೂರ

ಜಿಲ್ಹಾ—ಬೆಳಗಾವಿ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ.

ಆಶ್ರಯದಾತರು.



ಶ್ರೀ. ಕೊಣ್ಣೂರ ವೆಂಕಟರಾಯರು ಡಿ. ಇ.

ಲ್ಯಾಂಡರಿಕಾರ್ಡ್ಸ ಪುಣೆ.

ಶ್ರೀವಿದ್ಯಾರಣ್ಯ ಗ್ರಂಥಪ್ರಕಾಶಕ ಸಮಿತಿ ಬೆಳಗಾವಿ.

## ಪೋಷಕರು.



ಶ್ರೀ. ಪಾಟೀಲ ಮಡಿವಾಳಪ್ಪನವರು ತೋಲಗಿ

ತಾ. ಖಾನಾಪೂರ ಜಿ. ಬೆಳಗಾವಿ.

# ಶ್ರೀವಿದ್ಯಾರಣ್ಯ ಗ್ರಂಥಮಾಲೆಯ

## ಆಶ್ರಯದಾತರು.



ದೇ. ಭ. ದೊಡ್ಡಮೇಟಿ ಅಂದಾನಪ್ಪನವರು. ಜಕ್ಕಲಿ. ಜಿಲ್ಹಾ
ಧಾರವಾಡ ೧೦೧ ರೂ.
ಶ್ರೀ. ದೇಸಾಯಿ ಮಲ್ಹಾರರಾಯರು ಹಳೇ ಹುಬ್ಬಳ್ಳಿ. ಜಿ. „ ೧೦೧ „
ಶ್ರೀ. ಪಾಟೀಲ ಬಸನಗೌಡರು ತೋಲಗಿ ತಾಲೂಕ ಖಾನಾಪೂರ ೧೦೧ „
ಶ್ರೀ. ಸರದಾರ ನಾಯಕ ಬಹಾದ್ದೂರ ದೇಸಾಯಿ ಅಣ್ಣಾಸಾಹೇಬರು
ಉರ್ಫ ವೀರಭದ್ರಪ್ಪನವರು (ಚಚಡಿ) ಬೆಳಗಾಂವಿ. ೧೦೧ „
ಶ್ರೀ. ಕೊಣ್ಣೂರ ವೆಂಕಟರಾಯರು ಡಿ। ಇನಸ್ಪೆಕ್ಟರ, ಲ್ಯಾಂಡ
ರಿಕಾರ್ಡ್ಸ ಪುಣೆ. ೧೦೧ „

## ಪೋಷಕರು.

ಡಾ. ಸವಣೂರ ಹಣಮಂತರಾಯರು ಎಲ್. ಎಮ್. ಎಂಡ ಎಸ್.
ಬೆಳಗಾವಿ ೨೫ ರೂ.
ಶ್ರೀ. ಬೆಟಗೇರಿ ಭೀಮರಾಯರು. ಪೆನ್ಸನರರು ಬೆಳಗಾವಿ ೨೫ ರೂ.
ಶ್ರೀ. ಪಾಟೀಲ ಮಡಿವಾಳಪ್ಪನವರು ತೋಲಗಿ ತಾಲೂಕ ಖಾನಾಪೂರ ೨೫ ರೂ.

## ಸಹಾಯಕರು.

ರಾ. ಬ. ಅಂಗಡಿ ಷಣ್ಮುಖಪ್ಪನವರು ಎಲ್. ಎಲ್ ಬಿ. ಎಮ್. ಲ್. ಸಿ.
ಪ್ರೆಸಿಡೆಂಟರು ಜಿ. ಲೋ. ಬೋ. ಬೆಳಗಾವಿ ೫ ರೂ.
ದೇ. ಭ. ಪಾಟೀಲ ಕಲ್ಲನಗೌಡರು ಎಲೆಲ್. ಬಿ. ವಕೀಲರು ಬೆಳಗಾವಿ ೫ „
ಶ್ರೀ. ವಾಲೀ ಮಲ್ಲೇಶಪ್ಪನವರು ಎಮ್. ಎ. ಚೀಫಆಫೀಸರರು
ಡಿ. ಎಲ್ ಬಿ. ಬೆಳಗಾಂವಿ ೫ „
ಡಾ. ನಂದೀಮಠ ಶಿವಲಿಂಗಯ್ಯನವರು ಎಮ್. ಎ. ಪಿ. ಎಚ್. ಡಿ.
ಪ್ರಿನ್ಸಿಪಾಲರು ಲಿಂಗರಾಜ ಕಾಲೇಜ ಬೆಳಗಾಂವಿ. ೫ „

ಶ್ರೀ. ನಿರಡಿ ಬಸಲಿಂಗಪ್ಪನವರು ಬಿ. ಎ. ಚಿಟಣೀಸರು ಕಲೇಕ್ಟರ

ಕಚೇರಿ ಬೆಳಗಾಂವಿ. ೫ ,,

ಶ್ರೀ. ದೇಸಾಯಿ ಶಿವಲಿಂಗ ಪ್ರಭುಗಳು (ರುದ್ರಾಪೂರ) ಬೆಳಗಾಂವಿ. ೫ ,,

ಶ್ರೀ. ಬೆಳವಿ ವೆಂಕಟರಾಯರು ಎಲ್. ಎಲ್. ಬಿ.

ವಕೀಲರು ಬೆಳಗಾಂವಿ. ೫ ,,

ಶ್ರೀ. ಕಿತ್ತೂರ ವಿರುಪಾಕ್ಷಪ್ಪನವರು ಎಲ್. ಎಲ್. ಬಿ.

ವಕೀಲರು ಬೆಳಗಾಂವಿ. ೫ ,,

ಡಾ. ಪೋತದಾರ ಗೋವಿಂದರಾಯರು ಎಲ್. ಸಿ. ಪಿ. ಎಸ್.

ಬೆಳಗಾಂವಿ. ೫ ,,

ಶ್ರೀ. ಕಲಘಟಗಿ ವೆಂಕಟರಾಯರು ಶಿಕ್ಷಕರು ಮಾಡಲ್

ಹೈಸ್ಕೂಲ ಬೆಳಗಾಂವಿ. ೫ ,,

ಶ್ರೀ. ಮಾಸೂರ ನರಸಿಂಹರಾಯರು ಬೆಳಗಾಂವಿ. ೫ ,,

ಶ್ರೀ. ಕಟ್ಟಿ ಕೃಷ್ಣಾಚಾರ್ಯರು ಸೆಕ್ರೆಟರಿ ಡಿ. ಸೆ. ಬ್ಯಾಂಕ

ಬೆಳಗಾಂವಿ. ೫ ,,

ಶ್ರೀ. ಕುಲಕರ್ಣಿ ಭೀಮರಾಯರು ಪ್ರಾಸಿಕ್ಯೂಟರರು ಧಾರವಾಡ ೫ ,,

ಶ್ರೀ. ಕಟ್ಟಿ ಹಣಮಂತಾಚಾರ್ಯರು ಸಿಗ್ನಲರರು ಬಿಜವಾಡಾ. ೫ ,,

ಶ್ರೀ. ಜೋಶಿ ನಾರಾಯಣರಾಯರು ಕಾರಕೂನರು

ಜಜ್ಜ ಕೋರ್ಟ ಬೆಳಗಾಂವಿ. ೫ ,

ಶ್ರೀ. ಪಾಟೀಲ ಶಿವನಗೌಡರು ಡಿ. ಎಲ್. ಬಿ. ಮೆಂಬರರು

ಗೆಜಪತಿ. ೫ ,,

ಶ್ರೀ. ಗುರ್ಲಹೊಸೂರ ಅಂಬಕ್ಕನವರು ಮುಖ್ಯ ಶಿಕ್ಷಕಿಯರು

ಕ. ಹೆ. ಶಾ. ನಂ. ೧ ಬೆಳಗಾಂವಿ. ೫ ,,

ಕರ್ನಾಟಕ ಭೂಷಣ ಕೌಜಲಗಿ ಶ್ರೀನಿವಾಸರಾಯರು ಎಲ್. ಎಲ್. ಬಿ.

ವಿಜಾಪೂರ ೫ ,,

ಶ್ರೀ. ದೇಶಪಾಂಡೆ ತಿರುಮಲರಾಯರು ಹುಲ್ಲಿಕೇರಿ

ತಾ॥ ಬದಾಮಿ. ೫ ,,

ಶ್ರೀ. ಕರವಿನಕೊಪ್ಪ ಹುಚ್ಚಪ್ಪನವರು ಬೆಳಗಾಂವಿ. ೫ ,,

ಶ್ರೀ. ಕವಲಗಿ ಗೋವಿಂದಾಚಾರ್ಯರು ಪೆನ್ಸನರರು ಬೆಳಗಾಂವಿ. ೫ ರೂ.

ಶ್ರೀ. ಕುಲಕರ್ಣಿ ಭೀಮರಾಯರು ಎಲ್. ಎಲ್. ಬಿ. ವಕೀಲರು
ಬೆಳಗಾಂವಿ ೫ ,,

ದೇ. ಭ. ಜೋಶಿ ನಾರಾಯಣರಾಯರು ಎಲ್. ಎಲ್. ಬಿ. ಅಧ್ಯಕ್ಷರು
ಜಿಲ್ಹಾ ಕಾಂಗ್ರೆಸ ಕಮೀಟಿ ಬೆಳಗಾಂವಿ. ೫ ,,

ಶ್ರೀ. ಕಟ್ಟಿ ಶೇಷಾಚಾರ್ಯರು ಎಲ್. ಎಲ್. ಬಿ. ವಕೀಲರು ಬೆಳಗಾವಿ. ೫ ,,

ಡಾ. ರೆವಡಿ ಸಾವಿತ್ರಿಬಾಯಿಯವರು ಎಮ್. ಬಿ. ಬಿ. ಎಸ್. ಗದಗು ೫ ,,

ಶ್ರೀ. ಹಣಮಂತಗಡ ನರಸಿಂಹರಾಯರು ಎಲ್. ಎಲ್. ಬಿ. ವಕೀಲರು
ಬೆಳಗಾಂವಿ. ೫ ,,

ಶ್ರೀ. ಮಂಗಳವೇಢೆ ಗೋಪಾಳರಾಯರು ಪೆನಶನರ್ ಬೆಳಗಾಂವಿ. ೫ ,,

ಶ್ರೀ. ಗೊಂಬಿ ರಾಮರಾಯರು ಬೆಳಗಾಂವಿ ೫ ,,

ಶ್ರೀ. ಕುಲಕರ್ಣಿ ನಾರಾಯಣರಾಯರು ಬಿ. ಎ. ಶಿಕ್ಷಕರು
ಮಾಡಲ್ ಹೈಸ್ಕೂಲ ಬೆಳಗಾಂವಿ ೫ ,,

ಶ್ರೀ ಎಮ್. ರಾಮಚಂದ್ರನ್ನನವರು. ಬಿ. ಎ. ಬಿ. ಟಿ. ಎ. ಓ.
ಬೆಳಗಾಂವಿ ೫ ,,

ಶ್ರೀ. ಕರೀಕಟ್ಟಿ ಮೋಹನರಾಯರು ಸಬ್‌ರಜಿಸ್ಟ್ರರ ಕಾರವಾರ ೫ ,,

ಶ್ರೀ. ಕುಲಕರ್ಣಿ ಜಿವಣರಾಯರು ಕ. ಸು. ಪೆನ್ಸನರ ಬೆಳಗಾಂವಿ. ೫ ,,

ದಿ. ಬ. ಲತ್ತೇ ಅಣ್ಣಾಸಾಹೇಬರು ಎಮ್. ಎ. ಎಲ್. ಎಲ್. ಬಿ.
ಬೆಳಗಾಂವಿ ೫ ,,

ಶ್ರೀ. ಪಾಟೀಲ ವೀರಭದ್ರಯ್ಯನವರು ಕ. ಸು. ಡಿ. ಎಸ್. ಬಿ. ಬೆಳಗಾಂವಿ ೫ ,,

ಶ್ರೀ. ಅಡ್ಡಣಿಗಿ ಶಿವರುದ್ರಪ್ಪನವರು, ಎಲ್. ಎಲ್. ಬಿ. ವಕೀಲರು
ಬೆಳಗಾಂವಿ ೫ ,,

ಶ್ರೀ. ದಾತಾರ ಬಳವಂತರಾಯರು ಎಮ್. ಎ. ವಕೀಲರು ಬೆಳಗಾಂವಿ ೫ ,,

ಶ್ರೀ. ಮನಗುಳಿ ಹಣಮಂತಾಚಾರ್ಯರು ಬೆಳಗಾಂವಿ ೫ ,,

ಶ್ರೀ. ಉಪ್ಪಿನ ವೀರಪ್ಪನವರು ಮುನ್ಸಿಪಲ್. ಮೆಂಬರರು ಬೆಳಗಾಂವಿ ೫ ,,

ಶ್ರೀ. ಕಾನಗೋ ರಾಘವೇಂದ್ರರಾಯರು. (ಪಾಶ್ಚಾಪೂರ) ಸಂಕೇಶ್ವರ ೫ ,,

ಶ್ರೀ. ನಾಯಿಕ ಸಣ್ಣಪ್ಪನವರು ಹಲಸಿ. ೫ ,,

ರಾ. ಸಾ. ಉಗ್ರಾಣಕರರು ಪೆನ್ಸನರ ಹೆ. ಮಾ. ಬೆಳಗಾಂವಿ ೫ ,,

ಪ್ರೊ. ಬೊಂದಾಡೆ ಸ್ವಾಮಿರಾಯರು ಲಿಂಗರಾಜ ಕಾಲೇಜ ಬೆಳಗಾವಿ ೫ ,,

ಡಾ. ಕೊಕಟನೂರ ಗುಂಡೇರಾಯರು. ಎಮ್. ಡಿ. ( U. S. A. )
ಬೆಳಗಾವಿ ೫ ,,

ಶ್ರೀ. ಬೆಳಗಾವಿ ಹನಮಂತರಾಯರು. ಬೆಳಗಾವಿ ೫ ,,

ಶ್ರೀ. ಕೋಣನತಂಬಿಗಿ ದೀರೇಂದ್ರರಾಯರು. ಡಿ. ಎಲ್. ಬಿ. ಬೆಳಗಾವಿ ೫ ,,

ಶ್ರೀ. ಬಾಳಿ ಮುರಿಗೇಂದ್ರಪ್ಪನವರು ಎಲ್ ಎಲ್. ಬಿ. ವಕೀಲರು
ಚೇ. ಡಿ. ಸೆ. ಬ್ಯಾಂಕ ಬೆಳಗಾವಿ ೫ ,,

ಶ್ರೀ. ಕುಲಕರ್ಣಿ ಬಳವಂತರಾಯರು ಶಿಕ್ಷಕರು ಇಟಗಿ ೫ ,,

ಶ್ರೀ. ಹವಾಲದಾರ ವಾಸುದೇವರಾಯರು ಪೆನ್ಸನರು ತುರಮುರಿ ೫ ,,

ಶ್ರೀ. ಬಾಗೇವಾಡಿ ಫಕೀರಪ್ಪನವರು ಮುಖ್ಯ ಶಿಕ್ಷಕರು ತಿಗಡಿ ೫ ,,

ಶ್ರೀ. ಶಿಗೀಹಳ್ಳಿ ವೀರಭದ್ರಪ್ಪನವರು ಪೆನ್ಸನರು ಕ. ಸು. ತುರಮುರಿ ೫ ,,

ಶ್ರೀ. ಕುಲಕರ್ಣಿ ಬಾಳಕೃಷ್ಣರಾಯರ ಮಕ್ಕಳಾದ ಸುಬ್ಬರಾಯರು
ಧಾರವಾಡ ೫ ,,

ಶ್ರೀ. ಇನಾಮದಾರ ಶ್ರೀನಿವಾಸರಾಯರು ಧಾರವಾಡ ೫ ,,

ಶ್ರೀ. ಭದ್ರಿ ನಾಗಪ್ಪನವರು ಶಿಕ್ಷಕರು ತೋಲಗಿ ೫ ,,

ಶ್ರೀ. ಪಾಟೀಲ ಬಸನಗೌಡರು ತೋಲಗಿ ೫ ,,

ಶ್ರೀ. ಪಾಟೋಳೆ ರಾಮರಾಯರು ಕಂಪೌಂಡರರು ಬೆಳಗಾಂವಿ ೫ ,,

ಶ್ರೀ. ಗಲಗಲಿ ನರಸಿಂಹಚಾರ್ಯರು ಸಬ್ ಇನಸ್ಪೆಕ್ಟರು
ಯಮಕನಮರ್ಡಿ ೫ ,,

ಶ್ರೀ. ಪಾಟೀಲ ರಾಮನಗೌಡರು ಶಿಕ್ಷಕರು ಹಿರೇಬಾಗೇವಾಡಿ ೫ ,,

ಶ್ರೀ. ಕೆಂಭಾವಿ ಭೀಮರಾಯರು ಸಬ್‌ಜಡ್ಜರು ಬೆಳಗಾಂವಿ ೫ ,,

ಶ್ರೀ. ಮಂಗಳವೇಢೆ ವಿಠ್ಠಲರಾಯರು ಸಬ್‌ಜಡ್ಜರು ಬೆಳಗಾಂವಿ ೫ ,,

ಶ್ರೀ. ಕಾಜೀ ಸೈಯ್ಯದ ಅಮೀರುದ್ದೀನ ಸಾಹೇಬರು
ಮಾಮಲೇದಾರರು. ಅಥಣಿ. ೫ ,,

ಶ್ರೀ. ಪಾಟೀಲ ಭರಮನಗೌಡರು ಕಣಬರಗಿ ೫ ,,

ಶ್ರೀ. ಗೋಣಿ ಅಡಿವೆಪ್ಪನವರು ಶಿಕ್ಷಕರು ತುರಮರಿ ೫ ,,

ಶ್ರೀ. ಕುಲಕರ್ಣಿ ಮಡಿವಾಳಯ್ಯನವರು ಶಿಕ್ಷಕರು ತುರಮರಿ ೫ ,,

ಶ್ರೀ. ಹುಲೀಕಟ್ಟಿ ಸಣ್ಣಪ್ಪನವರು ದೇವರ ಶೀಗೀಹಳ್ಳಿ ೫ ,,

ಶ್ರೀ. ಕುಲಕರ್ಣಿ ಕೃಷ್ಣರಾಯರು ಮುಖ್ಯ ಶಿಕ್ಷಕರು ಅಂಬರಗಟ್ಟಿ ೫ ,,

ಶ್ರೀ. ಜೋಶಿ ಶ್ರೀಪಾದ ಭಟ್ಟರು ಶಿಕ್ಷಕರು ಬೈಲಹೊಂಗಲ ೫ ,,

ಶ್ರೀ. ನೇಗಿನಾಳ ವಾಮನ ರಾಯರು ಎಲ್. ಎಲ್. ಬಿ ವಕೀಲರು
ಬೈಲಹೊಂಗಲ ೫ ,,

ಶ್ರೀ. ಕರಜಗಿ ರಾಮರಾಯರು ವಕೀಲರು ಬೈಲಹೊಂಗಲ ೫ ,,

ಶ್ರೀ. ಬುರ್ಲಿ ನಾರಾಯಣರಾಯರು ಸಬ್‌ರಜಿಸ್ಟ್ರರರು ಬೆಳಗಾಂವಿ ೫ ,,

ಶ್ರೀ. ಗುತ್ತಿ ಹಣಮಂತರಾಯರು ಬೆಳಗಾಂವಿ ೫ ,,

ಶ್ರೀ. ಅಳವಣಿ ರಘುನಾಥರಾಯರು ಸಿ. ಡಿ. ಎ. ಇ. ಬೆಳಗಾಂವಿ ೫ ,,

ಶ್ರೀ. ಮನಗೂಳಿ ಸುಬಣ್ಣಾಚಾರ್ಯರು ಮ್ಯಾನೇಜರ ಸೆಟಲ್‌ಮೆಂಟ
ಖಾನಾಪುರ ೫ ,,

ಶ್ರೀ. ಪಾಟೀಲ ಕೃಷ್ಣಪ್ಪನವರು ಹುಲಕುಂದ ೫ ,,

ಶ್ರೀ. ಮಠದ ವೆಂಕಣ್ಣಾಚಾರ್ಯರು ಶಿಕ್ಷಕರು ಕಿತ್ತೂರ ೫ ,,

ಶ್ರೀ. ದೇಶಪಾಂಡೆ ರಾಮರಾಯರು ವಕೀಲರು ಹುಬ್ಬಳ್ಳಿ ೫ ,,

ಶ್ರೀ. ತೊಪಲಗಟ್ಟಿ ಶಿವರಾಯರು ಹಳೇಹುಬ್ಬಳ್ಳಿ ೫ ,

ಶ್ರೀ. ಕಾತರಕಿ ರಾಮಪ್ಪನವರು ಸಬ್‌ಜಜ್ಜರು ಹುಬ್ಬಳ್ಳಿ ೫ ,,

ಶ್ರೀ. ತಲ್ಲೂರ ಸಿದ್ಧಲಿಂಗಪ್ಪನವರು ಸಬ್‌ಜಜ್ಜರು ಗದಗು ೫

ಶ್ರೀ. ಹುಯಿಲಗೋಳ ಶ್ರೀನಿವಾಸರಾಯರು ಬಿ. ಎ. ಸುಪರವಾಯಿಝರರು
ಬೆಳಗಾಂವಿ ೫ ,,

ಶ್ರೀ. ಸೂರ್ಯವಂಶಿ ಹನುಮಂತರಾಯರು ಸಬ್‌ಜಜ್ಜರು ಬೆಳಗಾಂವಿ ೫ ,,

ಶ್ರೀ. ತೆರಗುಂಡಿ ಹಣಮಂತರಾಯರು ಎಲ್. ಸಿ. ಪಿ. ಎಸ್. ಬೆಳಗಾಂವಿ ೫ ,,

ಶ್ರೀ. ಕೆ. ಗುರುರಾಯರು ( ಉಡಿಪಿ ) ಹುಬ್ಬಳ್ಳಿ ೫ ,,

ಶ್ರೀ. ಕುಲಕರ್ಣಿ ಮಲ್ಹಾರರಾಯರು ಶಿಕ್ಷಕರು
ಉಳ್ಳಿಗಡ್ಡಿ ಖಾನಾಪೂರ ೫ ,,

ದೇ. ಭ. ಪಾಟೀಲ ಮಲ್ಲನಗೌಡರು ಎಲ್. ಎಲ್. ಬಿ. ವಕೀಲರು

ಬೆಳಗಾಂವಿ ೫ ,,

ಶ್ರೀ. ಬಾರಕಿ ಲಕ್ಷ್ಮಣರಾಯರು ಕ. ಸು. ಡಿ. ಎಸ್. ಬಿ. ಬೆಳಗಾವಿ. ೫ ,,

ಶ್ರೀ. ಬೆಳವೀ ಬಳವಂತರಾಯರು ಎಲೆಲ್. ಬಿ ಅಡ್ವೋಕೇಟರು

ಮುಂಬಯಿ ೫,,

ಶ್ರೀ. ಕುಲಕರ್ಣಿ ಅಣ್ಣಾಪ್ಪನವರು ಗಣಿಕೊಪ್ಪ ೫ ,,

---

## ಕರ್ನಾಟಕಟಾಯಿಮ್ಸ್

**ಹಿಂದುಳಿದ ಸಮಾಜಗಳ ಮುಖಪತ್ರ.**

ದೈನಿಕ ಹಾಗೂ ವಾರಪತ್ರಿಕೆಯು ಇದರಲ್ಲಿ ಸಾಮಾಜಿಕ, ರಾಜಕೀಯ, ಔದ್ಯೋಗಿಕ ಮುಂತಾದ ವಿಷಯಗಳು ನಿರ್ದಾಕ್ಷಿಣ್ಯದಿಂದ ಚರ್ಚಿಸಲ್ಪಡುವವಲ್ಲದೆ ಪ್ರಪಂಚದ ಸಮಸ್ತಭಾಗಗಳ ವಿವಿಧ ವರ್ತಮಾನಸಾರಗಳೂ ಪ್ರಕಟಿಸಲ್ಪಡುವವು. ಚಂದಾ ಊರವರಿಗೆ ೮-೦-೦ ಪರಊರವರಿಗೆ ೧೩-೦-೦ ಸಾಪ್ತಾಹಿಕ ಊರವರಿಗೆ ೨-೧೨-೦ ಪರಊರವರಿಗೆ ೩-೦-೦

ವ್ಯವಸ್ಥಾಪಕರು

**ದೈನಿಕಕರ್ನಾಟಕ ಟಾಯಿಮ್ಸ್ ಕಾರ್ಯಾಲಯ ಧಾರವಾಡ.**

---

## ಸಂಯುಕ್ತಕರ್ನಾಟಕ.

ಸಂಪಾದಕರು—**ಮೋಹರೆ ಹನುಮಂತರಾಯರು.**

ಉಜ್ವಲ ರಾಷ್ಟ್ರೀಯ ದೈನಿಕ ಹಾಗೂ ವಾರಪತ್ರಿಕೆ ಕರ್ನಾಟಕ, ಹಿಂದುಸ್ತಾನ ಹಾಗೂ ಪರದೇಶಗಳ ಸುದ್ದಿಗಳನ್ನು ಸಕಾಲದಲ್ಲಿ ಪೂರೈಸುವ ಪತ್ರಿಕೆ ಎಂದರೆ ಇದೊಂದೇ ಬ್ರಿಟಿಶ್ ಕನಾಟಕದಲ್ಲಿ ಅಸೋಸಿಯೆಟೆಡ್ ಪ್ರೆಸ್ಸದ ತಂತಿ ಸಮಾಚಾರಗಳನ್ನು ಪ್ರಕಟಿಸುವ ಪತ್ರಿಕೆಯಾದರೂ ಸಂಯುಕ್ತ ಕರ್ನಾಟಕ ಒಂದೇ ಇರುವದು. ಬೇಗನೆ ಚಂದಾದಾರರಾಗಿರಿ. ಜಾಹೀರಾತುದಾರರು ಜಾಹೀರಾತು ಕೊಟ್ಟು ಲಾಭಹೊಂದಬೇಕು.

**ಚಂದಾವಿವರ.**

| | ದೈನಿಕ ಸ್ಥಳಿಕರಿಗೆ. | ಪರಸ್ಥಳದವರಿಗೆ. |
|---|---|---|
| ತಿಂಗಳಿಗೆ | ೦-೧೩-೦ | ೧-೪-೦ |
| ಮೂರು ತಿಂಗಳಿಗೆ | ೨-೬-೦ | ೩-೧೧-೦ |
| ಆರು ತಿಂಗಳಿಗೆ | ೪-೧೪-೦ | ೭-೫-೦ |
| ವರ್ಷಕ್ಕೆ | ೯-೧೨-೦ | ೧೪-೧೦-೦ |
| ಸಾಪ್ತಾಹಿಕ | ೨-೪-೦ | ೩-೦-೦ |

ವ್ಯವಸ್ಥಾಪಕ

**ಸಂಯುಕ್ತಕರ್ನಾಟಕ ಬೆಳಗಾಂವಿ.**



**ಪ್ರತಿಯೊಬ್ಬರೂ ಬನ್ನಿರಿ! ಯಾವತ್ತರೂ ಬನ್ನಿರಿ!**

**ಪರೀಕ್ಷಿಸಿ ನೋಡಿರಿ!**

# ಹುಬ್ಬಳ್ಳಿಯಲ್ಲಿ ಒಂದೇ ಒಂದು

# ಪ್ರಮುಖ ಸ್ಟುಡಿಯೊ.

ಹಗಲು ರಾತ್ರಿಯನ್ನದೆ ಸದಾ ನಿಮ್ಮ ಸೇವೆಗೆ ಸಿದ್ಧವಿದೆ. **ಅತಿ ಅಗ್ಗವಾದ ದರದಲ್ಲಿ ಒಳ್ಳೇ ಉತ್ತಮವಾದ ಕೆಲಸ.** ನಿಯಮಿತತನ ಮತ್ತು ಕಾರ್ಯಕ್ಷಮತೆ ಇವು ಈ ಸ್ಟುಡಿಯೋದ ವೈಶಿಷ್ಟ್ಯ. ದರವನ್ನು ಬಹಳ ಇಳಿಸಿದೆ. ೧೬ × ೨೦ ಆಕಾರದ ಫಿನಿಶ್ಡ ಮೌಂಟೆಡ್ ಎನಲಾರ್ಜ ಮೆಂಟಕ್ಕೆ ಕೇವಲ ಐದೇ ರೂಪಾಯಿ. ಈಹೊತ್ತೇ ನಿಮ್ಮ ಆರ್ಡರ ಕೊಡಿರಿ. ವಿಲಂಬವು ಯಾವಾಗಲೂ ಘಾತುಕವು.

**ನ್ಯಾಶನಲ್ ಫೋಟೋ ಆರ್ಟ ಸ್ಟುಡಿಯೋ**

**ರಾಧಾಕೃಷ್ಣ ಪೇಠ ಹುಬ್ಬಳ್ಳಿ.**

**ದೀರ್ಘಕಾಲದ ರೋಗಗಳಿಂದ ಬಳಲುತ್ತಿರುವವರಿಗೆ**

# ಖಾತ್ರಿಯಾದ ಚಿಕಿತ್ಸೆಯು.

ನಮ್ಮಲ್ಲಿ ಎಲ್ಲಾತರದ ದೀರ್ಘರೋಗಗಳಿಗೆ ಆಯುರ್ವೇದ ಶಾಸ್ತ್ರದ ಪ್ರಕಾರವಾಗಿ ಯೋಗ್ಯನಿದಾನ ಮತ್ತು ಚಿಕಿತ್ಸೆಯನ್ನು ಮಾಡುತ್ತೇವೆ. ಕೆಳಗೆ ಬರೆದ ರೋಗಗಳ ಮೇಲಂತೂ ಖಾತ್ರಿಯಾದ ಚಿಕಿತ್ಸೆಯನ್ನು ಮಾಡುತ್ತೇವೆ —

**ವಿಕಾರಗಳು:**— ಸಂಗ್ರಹಣಿ, ಕ್ಷಯ, ಬಾಣಂತಿಬೇನೆ, ಮಧುಮೇಹ, ಮೂಲವ್ಯಾಧಿ, ಪಾಂಡುರೋಗ, ಉಪದಂಶ, ಪ್ರಮೇಹ, ವಾತರೋಗ, ಋತುದೋಷ ಇವುಗಳಿಂದ ಪೀಡಿತರಾದವರು ಸಮಕ್ಷಮ ಬಂದು ತೋರಿಸಿ ಅನುಭವ ತೆಗೆದುಕೊಂಡು ಖಾತ್ರಿಮಾಡಿಕೊಳ್ಳಿರಿ. ಬಾಕಿ ವಿಷಯಗಳಿಗೆ ಸಮಕ್ಷಮ ಭೆಟ್ಟಿಯಾಗಬೇಕು.

| | | |
|---|---|---|
| **ಹಳೇ ಹುಬ್ಬಳ್ಳಿ**<br>ಆಯುರ್ವೇದ ಕುಟೀರ | ತೆರೆಯುವ ವೇಳೆ<br>ಮುಂಜಾನೆ ೮ರಿಂದ ೧೦ಘಂಟೆ<br>ಸಾಯಂಕಾಲ ೬ರಿಂದ ೮ಘಂಟೆ | ಚಿಕಿತ್ಸಕರು.<br>ಆಯುರ್ವೇದ ವಿದ್ವಾನ್<br>ಗುಂಡಾಚಾರ್ಯ ಸವಣೂರ<br>L. A. M. S.<br>Mysore<br>Government |

---

# ಉದಯ.

ಸಂಪಾದಕರು:— **ಸ. ಚ. ಮಿರ್ಜಿ**

ಇದು ಯಾವ ಪಕ್ಷಕ್ಕೂ ಅಂಟದೆ ನಿಜ ಸಂಗತಿಯನ್ನು ಬೈಲಿಗೆಳೆದು ಕನ್ನಡಿಗರ ಉನ್ನತಿಗಾಗಿ ಹೆಣಗಾಡುವ ವಾರಪತ್ರಿಕೆಯು ಇದರಲ್ಲಿ ಪ್ರತಿಯೊಂದು ವಿಷಯವು ಬರುವಂತೆ ತಕ್ಕ ಏರ್ಪಾಡುಗಳನ್ನು ಮಾಡಿದೆ. ಅಲ್ಲದೆ. ಎಲ್ಲರಿಗೂ ಚಂದಾದಾರರಾಗಲು ಅವಕಾಶ ಸಿಗಲೆಂದು ಇದರ ವಾರ್ಷಿಕ ಚಂದಾ **೩-೦-೦** ಮಾತ್ರ ಇಟ್ಟಿದೆ.

ವ್ಯವಸ್ಥಾಪಕ
**ಉದಯ ವಿಜಾಪುರ.**

# ಇದನ್ನು ಮೊದಲು ಓದಿರಿ!

ಪ್ರತಿಯೊಬ್ಬನ ಆಯುಷ್ಯಕ್ರಮವು ಬೆಳೆಯುತ್ತ ಹೋದಹಾಗೆ ಆತನ ಮೇಲಿನ ಜವಾಬದಾರಿಯಾದರೂ ಬೆಳೆಯುತ್ತ ಹೋಗುತ್ತದೆ.

**ಅದ್ದರಿಂದ.**

ತಾವು ತಮ್ಮ ಜೀವವೀಮೆಯನ್ನು ಈ ಹೊತ್ತೇ ಇಳಿಸಿರಿ. ಯಾಕಂದರೆ ಆರ್ಥಿಕ ಪರಿಸ್ಥಿತಿಯ ಮೂಲಕ ತಮ್ಮ ಕಡೆಯಿಂದ ಶಿಲ್ಕು ಇಡಲಿಕ್ಕೆ ಆಗುವಂತೆಯಿಲ್ಲ. ಮತ್ತು ತಮ್ಮ ವಯೋಮಾನವು ಬೆಳೆದಂತೆ ವಿಮೆಯ ಕಂತುಗಳಾದರೂ ಬೆಳೆಯುತ್ತವೆ.

ಮುಪ್ಪಿನಕಾಲದಲ್ಲಿ ಧನಲಾಭವಾಗಿ ಅತ್ಯಂತ ಸೌಖ್ಯವಾಗುವದು. ಒಂದು ವೇಳೆ ದುರ್ದೈವದಿಂದ ನಡುವೇ ಮರಣಬಂದಲ್ಲಿ ತಮ್ಮ ಮಕ್ಕಳ ಲಗ್ನ, ಮುಂಜಿ, ಶಿಕ್ಷಣ, ಮತ್ತು ಕುಟುಂಬ ಸಂರಕ್ಷಣೆ ಇವುಗಳು ಖಾತ್ರಿಯಿಂದ ಈ ವಿಮೆಯ ರಕಮಿನಲ್ಲಿಯೇ ಆಗುವವು.

**ಆದುದರಿಂದ.**

ಕೇವಲ ಸ್ವದೇಶೀ ಭಾಂಡವಲದ ಮೇಲೆ ನಡೆದಂಥ ಅತ್ಯಲ್ಪ ಕಾಲಲ್ಲಿಯೇ ಊರ್ಜಿತಾವಸ್ಥೆಗೆ ಬಂದಂಥ ಬಹಳ ಲಾಭ ಕೊಡುವ ಮತ್ತು ಪ್ರತಿಯೊಬ್ಬರಿಗೆ ನೀಗುವಷ್ಟೇ ಕಂತಗಳನ್ನು ತಕ್ಕೊಂಡು ಲಾಭ ಮಾಡಿಕೊಡುವ ಕಂಪನಿಯೆಂದರೆ **ಕಾಮನ್‌ವೆಲ್ಥ ಅಶ್ಯೂರನ್ಸ ಕಂಪನಿ ಪುಣೆ:**

ವಿಶೇಷ ಮಾಹಿತಿಗಾಗಿ ಕೆಳಗಿನ ವಿಳಾಸಕ್ಕೆ ಬರೆಯಿರಿ. ಅಥವಾ ಭೆಟ್ಟಿಯಾಗಿರಿ.

**ಎಸ್. ಆರ್. ಕುರಗುಂದ ಏಜಂಟ ಬೆಳಗಾವಿ.**

---

# ನವಸಂದೇಶ

ಬಳ್ಳಾರಿಯಲ್ಲಿ ಹೊರಟ ಕನ್ನಡ ವಾರ ಪತ್ರಿಕೆಯು ಇದೊಂದೇ ಈ ವಾರ ಪತ್ರಿಕೆಯಲ್ಲಿ ತಮ್ಮ ಪ್ರಕಟನೆಯನ್ನು ಕೊಟ್ಟು ಲಾಭಪಡೆಯಿರಿ. ವಾ. ಚ. ೩-೮-೦

ವ್ಯವಸ್ಥಾಪಕ:— **ನವಸಂದೇಶ ಕಾರ್ಯಾಲಯ ಬಳ್ಳಾರಿ.**